# ಕೊರವಂಜಿಯ ಪಡುವಣ ಯಾತ್ರೆ

(ಯಾತ್ರ ಕಥನ)

ರಾ. ಶಿ.



ವಸಂತ ಪ್ರಕಾಶನ
ಕಾಸ್ಮೊಪಾಲಿಟನ್‌ಕ್ಲಬ್ ಎದುರು ರಸ್ತೆ
ನಂ.360, 10 ನೇ 'ಬಿ' ಮೈನ್
ಜಯನಗರ 3ನೇ ಬ್ಲಾಕ್, ಬೆಂಗಳೂರು - 11
ದೂರವಾಣಿ : 22443996

*"Koravangiya Paduvana Yatre"* - [A Travel Diary]
by *Ra. Shi.* Published by ***Vasantha Prakashana,***
Opp. Cosmopolitàn Club Road, # 360, 10th 'B' Main, Jayanagar,
3rd Block, Bangalore-560 011, Phone : 22443996

| | |
|---|---|
| ಪ್ರಥಮ ಮುದ್ರಣ | : 1968 |
| ದ್ವಿತೀಯ ಮುದ್ರಣ | : 2006 |
| ಹಕ್ಕುಗಳು | : ಲೇಖಕರದು |
| ಪುಟಗಳು | : vi + 164 = 170 |
| ಮುಖ ಪುಟ | : ಯು.ಟಿ. ಸುರೇಶ್ |
| ರೂ. | : 85/- |
| ISBN | : 81-89818-36-8 |
| ಬಳಸಿದ ಕಾಗದ | : 170gsm ಮ್ಯಾಪ್‌ಲಿತ್ |

ಪ್ರಕಾಶಕರು :
**ವಸಂತ ಪ್ರಕಾಶನ**
ಕಾಸ್ಮೊಪಾಲಿಟನ್‌ಕ್ಲಬ್ ಎದುರು ರಸ್ತೆ
ನಂ.360, 10 'ಬಿ' ಮೈನ್
ಜಯನಗರ 3ನೇ ಬ್ಲಾಕ್
ಬೆಂಗಳೂರು - 11 ; ದೂ. : 22443996

ಅಕ್ಷರ ಜೋಡಣೆ :
**ಶ್ರೀ ಲಕ್ಷ್ಮೀ ಎಂಟರ್‌ಪ್ರೈಸಸ್**
ನಂ.1052, ಮೊದಲ ಹಂತ
ಕುಮಾರಸ್ವಾಮಿ ಬಡಾವಣೆ
ಬೆಂಗಳೂರು - 78 ; ಮೊ : 9886255928

ಮುದ್ರಕರು: **ರವಿ ಮುದ್ರಣಾಲಯ**
ಬೆಂಗಳೂರು-19

# ಧನ್ಯವಾದಗಳು

ನನ್ನ ಜತೆ ಪ್ರವಾಸ ಮಾಡಿ, ಉತ್ಸಾಹವನ್ನು ತುಂಬಿದ ಕನ್ನಡದ ತಂಡದವರಿಗೆ

ಡಾ॥ ಎಂ.ಎನ್. ಮಹದೇವನ್

ಪುತ್ತೂರಿನ ಡಾ॥ ಶಿವರಾಂಭಟ್

ಡಾ॥ ಎಂ.ಎ. ನರಸಿಂಹಾಚಾರ್

ಡಾ॥ ಬಿ.ಕೆ. ಕೃಷ್ಣಯ್ಯ

ಡಾ॥ ಜಯಲಕ್ಷ್ಮಿ – ವೈ. ಅಯ್ಯರ್

# ನಾಂದಿಯ ನುಡಿಗಳು

"ಹೇಗೋ ಇದೀರಲ್ಲ ! ಯಾಕಪ್ಪಾ !" ಎಂದಳು ಕೊರವಂಜಿ, ಒಂದು ಸಂಜೆ ಮನೆಗೆ ನಾನು ಹಿಂತಿರುಗಿದಾಗ.

"ಏನೂ ಇಲ್ಲವಲ್ಲಮ್ಮ ! ಚೆನ್ನಾಗೇ ಇದೀನಿ" ಅಂತ ಹೇಳಿದೆ.

"ಇಲ್ಲಪ್ಪಾ ! ಏನೋ ದುಗುಡ ನಿಮಗೆ ! ನನ್ನ ಹತ್ತಿರ ಹೇಳಿಕೊಳ್ಳಬಾರದೇ ! ಮಗಳಲ್ಲದೇ ಮನಸ್ಸಿಗೆ ಶಾಂತೀನ ಇನ್ನು ಯಾರು ತಾನೇ ಕೊಡ್ತಾರೇ ?" ಎಂದು ಅತಿ ಆದರದಿಂದ ಹೇಳಿದಳು.

"ಅಂತಹುದೇನೂ ಇಲ್ಲಮ್ಮ. ಆದರೂ ಇಷ್ಟು ಪ್ರೀತಿಯಿಂದ ಕೇಳುತ್ತಾ ಇದಿ. ಹೀಗೆ ನನ್ನನ್ನು ಆದರದಿಂದ ಕೇಳುವವರು ಈ ಲೋಕದಲ್ಲಿ ಯಾರೂ ಇಲ್ಲಮ್ಮ. ಆದುದರಿಂದ ನನ್ನ ಮನಸ್ಸಿನಲ್ಲಿರೋದನ್ನು ಹೇಳತೀನಿ. ಅದೇನು ಅಂತಹ ದೊಡ್ಡ ವಿಷಯವಲ್ಲ. ಇದು ತಿಳಿದಿದ್ದರೂ ಮನಸ್ಸು ಯಾಕೋ ಸ್ವಲ್ಪ ಕದಡಿದ ಹಾಗಿದೆ" ಎಂದು ದನಿ ತಗ್ಗಿಸಿದೆ.

ಹತ್ತಿರ ಬಂದು ಕೂತುಕೊಂಡಳು ಕೊರವಂಜಿ. "ಯಾಕೆ ಹಾಗಂತೀರಿ, ಅಪ್ಪಾಜಿ ! 'ಮನಸ್ಸು ದುಗುಡಪಟ್ಟಾಗ, ಸ್ನೇಹಿತರ ಹತ್ತಿರ ತೋಡಿಕೊಳ್ಳಬೇಕು. ಆಗ ಮನಸ್ಸು ತಿಳಿಯಾಗುತ್ತೆ' ಎಂದು ನೀವೇ ಎಷ್ಟೋ ಸಲ ಹೇಳಿದ್ದೀರಿ. ಮಗಳಾಗಿದ್ದರೂ ಸ್ನೇಹಿತೆಯೂ ನಾನಲ್ಲವೇ ? ನನಗೆ ಎಷ್ಟೋ ಸಲ ಅನ್ನಿಸಿದೆ :- ನಿಮ್ಮನ್ನ ಅಪ್ಪ ಅಂತ ಕರೆಯೋ ಬದಲು ಗುರು ಅಂತ ಕರೀಬೇಕು- ಅಂತ. ನೀವು ಕಲಿಸಿದ್ದನ್ನು ಅರಿತಿದ್ದೀನೆಯೇ ಅಂತ ಪರೀಕ್ಷೆ ಮಾಡುಕ್ಕಾದರೂ ನಿಮ್ಮ ಮನಸ್ಸಿನ ದುಗುಡವನ್ನು ಹೇಳಿಕೊಳ್ಳಿ. ನಿಮ್ಮ ಮನಸ್ಸಿಗೆ ಶಾಂತಿ ತರುಕ್ಕೆ ನನ್ನಿಂದ ಸಾಧ್ಯವೇ ನೋಡ್ತೀನಿ" ಎಂದು ಸ್ವಲ್ಪ ಕಾತುರದಿಂದಲೇ ಹೇಳಿದಳು.

ಇನ್ನೆರಡು ಮಾತನಾಡಿದರೆ ಅವಳ ಕಣ್ಣುಕೆರೆ ಕೋಡಿ ಹರಿಯುತ್ತೆ ಎಂದನ್ನಿಸಿತು. ಮನಸ್ಸಿನಲ್ಲಿದ್ದುದನ್ನು ಹೇಳೇಬಿಡೋಣ. ನಮ್ಮ ಹುಡುಗಿ ತಾನೆ ? ಅವಳು ಏನಂದುಕೊಂಡರೂ ಪರವಾಗಿಲ್ಲ ಎನ್ನಿಸಿತು. ಅದಕ್ಕೇ ಹೇಳಿದೆ "ಕೇಳು, ತಾಯಿ. ಇವತ್ತು ಮಧ್ಯಾಹ್ನ ಪಡುವಣ ದೇಶಗಳಿಗೆ ಪ್ರವಾಸ ಹೋಗುವುದು ಎಂದು ತೀರ್ಮಾನಿಸಿದೆ. ವೈದ್ಯರ ಸಂಘದವರು ವ್ಯಾಸಂಗ ಪ್ರವಾಸವನ್ನು ರಷ್ಯಾ ಮತ್ತು ಯೂರೋಪಿನ ದೇಶಗಳಲ್ಲಿ ಏರ್ಪಡಿಸಿದ್ದಾರೆ. ಕೇಂದ್ರ ಸರ್ಕಾರದವರು ಅಗತ್ಯವಾದ ವಿದೇಶಿ ಹಣ ವಿನಿಮಯವನ್ನೂ ನೀಡಿದ್ದಾರೆ. ಈ ತಂಡದಲ್ಲಿ ಪಾತ್ರವಹಿಸಲು ನನ್ನನ್ನು ಆಹ್ವಾನಿಸಿದರು. ನಾನೂ ಒಪ್ಪಿಕೊಂಡೆ. ಸುಮಾರು ಎರಡು ತಿಂಗಳು ಪ್ರವಾಸ ಮಾಡಿದರೆ, ಇತರ ದೇಶಗಳನ್ನೂ ಜನರನ್ನೂ ನೋಡಿದಂತೆ ಆಗುತ್ತೆ. ಹಾಗೂ ಅಲ್ಲಿನ ವೈದ್ಯಕೀಯ ಪ್ರಗತಿಯನ್ನೂ ಕಣ್ಣಾರೆ ಕಂಡ ಹಾಗೆ ಆಗುತ್ತೆ ಎಂದು ಅನ್ನಿಸಿತು. ಈ ದಿನ ಹಣ ಕಟ್ಟಿ ಬಂದೆ.

ಬರುವಾಗ ಅನ್ನಿಸಿತು. ಮುಪ್ಪಿನ ಬಾಗಿಲನ್ನು ದಾಟಿದ್ದೀನಿ. ತರಹಾವಾರಿ ಹವಾ, ಅಭ್ಯಾಸವಿಲ್ಲದ ಆಹಾರ, ಬಿಡುವಿಲ್ಲದ ಸಂಚಾರ; ದೇಹಕ್ಕೆ ಏನಾದರೂ ತ್ರಾಸು ಆಗುತ್ತೇನೋ ಅಂತ ಭಯ ತೋರಿತು. ಕಾಣದ ದೇಶದಲ್ಲಿ ಸಖತ್ ಖಾಯಿಲೆ ಬಿದ್ದು ಘಟ ಒಪ್ಪಿಸುವ ಹಾಗಾದರೆ, ಕಡೆಗಾಲದಲ್ಲಿ ಕನ್ನಡದಲ್ಲಿ ತಿಳಿದವರ ಹತ್ತಿರ ಹೋಗಿ ಬರ್ತೀನಿ, ನೀವೆಲ್ಲಾ ಚೆನ್ನಾಗಿರಿ ಅಂತ ಚರಮ ಸಂದೇಶವನ್ನು ಹೇಳಲೂ ಆಗುವುದಿಲ್ಲವಲ್ಲ, ಎಂದು ಯೋಚನೆಗೆ ಆರಂಭವಾಗಿದೆ.

ಹುಡುಗುತನದ, ಪೆಚ್ಚುತನದ ಯೋಚನೆ, ಅನ್ನುವುದು ನನಗೂ ಗೊತ್ತು. ಆದರೂ ಈ ಯೋಚನೆ ಮನಸ್ಸಿನಲ್ಲಿ ಮರುಕಳಿಸ್ತಾನೇ ಇದೆ.

ಇದೇ ನೋಡಮ್ಮಾ ; ನನ್ನ ಆತಂಕ : ನಗಬೇಡ, ಅಪ್ಪನಿಗೆ ದಿಟವಾಗಲೂ ಅರಳು ಮರಳು ಅಂತ ತೀರ್ಮಾನಿಸಬೇಡ.''

ಎಂದು ಹೇಳಿಯೇಬಿಟ್ಟೆ

ಅಪ್ಪಾಜಿ ! ಈ ತರಹ ಯೋಚನೆ ಬರೋದು ಪೆಚ್ಚುತನವಲ್ಲ. ಆದರೂ ನಿಮ್ಮ ಆರೋಗ್ಯ ತಕ್ಕಮಟ್ಟಿಗೆ ಚೆನ್ನಾಗಿದೆ. ಅಂತಹ ಸಂದರ್ಭ ಬರುವುದೇ ಇಲ್ಲ ಅಂತ ನನಗೆ ಖಂಡಿತಾ ಗೊತ್ತು. ಆದರೂ ನಿಮ್ಮ ಮನಸ್ಸಿಗೆ ಶಾಂತಿ ಬರಬೇಕಾದರೆ ನಾನು ಹೇಳಿದರೆ ಮಾತ್ರ ಸಾಲದು.

''ಅದಕ್ಕೇ ಅಪ್ಪಾಜಿ, ನನ್ನದೊಂದು ಸಲಹೆ. ನೀವೂ ಹ್ಞೂ ಅಂತ ಒಪ್ಪಿಕೊಳ್ಳಲೇ ಬೇಕು. ನಾನೂ ನಿಮ್ಮ ಜತೆಗೆ ಬಂದು ಬಿಡ್ತೀನಿ. ಆಗ ಕನ್ನಡದಲ್ಲಿ ಮಾತನಾಡುಕ್ಕೆ ಪ್ರಿಯವಾದವರು ಸಿಕ್ಕಿದ ಹಾಗೇ ಆಗುತ್ತೆ. ನಿಮ್ಮ ಓಡಾಟಕ್ಕೇ ಆಗಲಿ, ನಿಮ್ಮ ವ್ಯಾಸಂಗಕ್ಕೆ ಆಗಲಿ, ನಾನು ಅಡ್ಡಿ ಬರುಲ್ಲ ನಿಮ್ಮ ಕಾಲಿಗೆ ತೊಡರಿಕೊಳ್ಳುವುದಿಲ್ಲ. ತೆರೆ ಮರೆಯಲ್ಲೇ ಘೋಷಾ ಬೀಬಿಯಂತೆ ಇರುತ್ತೇನೆ. ಕರೆದಾಗ ಬರುತ್ತೇನೆ.'' ಎಂದು ಗೋಗರೆದು ಕೊಂಡಳು.

ತೆರೆ ಮರೆಯಲ್ಲಿ ಇದ್ದು, ಕರೆದಾಗ ಬರುವುದಾದರೆ ನನಗೂ ಕಷ್ಟವಿಲ್ಲ ; ಅನುಕೂಲವೇ ಆಗುತ್ತೆ ; ಎಂದು ಅನ್ನಿಸಿತು.

''ಹಾಗೇ ಆಗಲಿ, ತಾಯಿ. ಈ ವಿಚಾರ ಯಾರಿಗೂ ಹೇಳಬೇಡ ಯಾರ ಕಣ್ಣ ಮುಂದೆಯೂ ಕಾಣಿಸಿಕೊಳ್ಳಬೇಡ. ದಿನಾಗಲೂ ಸುತ್ತಾಡಿ ಬಂದಮೇಲೆ, ರಾತ್ರಿ ಮಲಗುವ ಮುನ್ನ ನಿನಗೆ ವರದಿ ಒಪ್ಪಿಸುತ್ತೇನೆ. ಕನ್ನಡದಲ್ಲೇ ಒಪ್ಪಿಸುತ್ತೇನೆ. ಹಾಗಾಗಿ ನನ್ನ ನಾಲಿಗೆಯ ತೀಟೆಯೂ ತೀರಿದಹಾಗಾಗುತ್ತೆ. ಮನಸ್ಸಿನ ಹಂಬಲವೂ ಪೂರೈಸಿಕೊಳ್ಳುತ್ತೆ'' ಎಂದು ಹೇಳಿ ಆಕೆಯ ಸಲಹೆಯನ್ನು ಒಪ್ಪಿಕೊಂಡೆ.

ಮನಸ್ಸು ಸ್ವಲ್ಪ ಹಗೂರಾಯಿತು. ಪ್ರವಾಸ ಹೊರಡುವುದಕ್ಕೆ ಮೂರು ವಾರ ವ್ಯವಧಾನವಿತ್ತು. ಅಷ್ಟರಲ್ಲಿ ಎಲ್ಲಾ ಸಿದ್ಧತೆಗಳನ್ನೂ ಮಾಡಿಕೊಳ್ಳುತ್ತೇನೆ, ಎನ್ನುವ ವಿಶ್ವಾಸ ಹುಟ್ಟಿತು.

ಸುಖವಾಗಿ ಆ ರಾತ್ರಿ ನಿದ್ರೆ ಮಾಡಿದೆ.



ಪ್ರವಾಸ ಮಾಡಿದಾಗ ಪ್ರತಿ ರಾತ್ರಿಯೂ ಕೊರವಂಜಿಗೆ ಸಲ್ಲಿಸಿದ ವರದಿಯನ್ನು ಆಕೆ ತನ್ನ ಮನಸ್ಸಿನಲ್ಲಿ ಟೇಪ್ ರೆಕಾರ್ಡ್ ಮಾಡಿಕೊಂಡಳು. ಆ ರೆಕಾರ್ಡಿನ ಅಚ್ಚು ರೂಪವೇ ಆ ಹೊತ್ತಗೆ.

ಮಗಳಿಗೆ ಧನ್ಯವಾದಗಳನ್ನು ಒಪ್ಪಿಸಬಹುದೇ ?

ಪುಸ್ತಕ ರೂಪದಲ್ಲಿ ಈ ವರದಿಯನ್ನು ಹೊರ ತರಲು ಪುಸಲಾಯಿಸಿ ನಂತರ ಅಚ್ಚು ಮುಗಿಯುವ ತನಕ ಹಂತ ಹಂತದಲ್ಲೂ ಹೊಣೆ ವಹಿಸಿದ ಮಾನ್ಯ ಮಿತ್ರ ಬಿ. ಪುಟ್ಟಸ್ವಾಮಯ್ಯನವರಿಗೆ

— ಮಾರಾಟದ ಹೊಣೆ ಹೊತ್ತಿರುವ ಗೀತಾ ಏಜನ್ಸೀಸ್‌ನ ಶ್ರೀ ರಾಮಚಂದ್ರಯ್ಯ ಅವರಿಗೆ

— ಆಸಕ್ತಿಯಿಂದ ಅಚ್ಚು ಮಾಡಿ ಕೊಟ್ಟ ಶ್ರೀ ಮಲ್ಲಿಕಾರ್ಜುನ ಪ್ರಿಂಟಿಂಗ್ ಪ್ರೆಸ್ಸಿನ ಶ್ರೀ ಎನ್. ಚಂದ್ರಪ್ಪ ಅವರಿಗೆ

ಆಭಾರಿಯಾಗಿದ್ದೇನೆ.

— ಕೊಂಡು ಓದುವ ಮಹನೀಯರಿಗೂ ಮಹಿಳೆಯರಿಗೂ ಆಭಾರಿಯಾಗಬೇಕೆಂದು ಆಸೆಪಡುತ್ತಿದ್ದೇನೆ.

18–1–68

ರಾ. ಶಿ.

36–6ನೆ ಮೆಯಿನ್ ರಸ್ತೆ
ಮಲ್ಲೇಶ್ವರ ಬೆಂಗಳೂರು 3

## ಎರಡನೆಯ ಮುದ್ರಣಕ್ಕೊಂದು ನಾಂದಿಯ ನುಡಿ

ನಮ್ಮ ತಂದೆ ರಾಶಿಯವರು ಕಾಲವಾಗಿ ದಶಕಗಳೇ ಸಂದಿವೆ. ಆದರೂ ಅವರ ಹಾಸ್ಯ ಸಾಹಿತ್ಯ ಇಂದಿಗೂ ಕನ್ನಡಿಗರ ಮನೆ ಮನಗಳಲ್ಲಿ ನಲಿದಾಡುತ್ತಿದೆಯೆಂದರೆ ಅತಿಶಯೋಕ್ತಿಯಲ್ಲ. ಅರುವತ್ತರ ದಶಕದ ಆದಿಭಾಗದಲ್ಲಿ ರಾಶಿಯವರು ಒಂದು ವೈದ್ಯಕೀಯ ತಂಡದೊಂದಿಗೆ ರಷ್ಯಾ ಹಾಗೂ ಯೂರೋಪ್ ದೇಶಗಳ ಪ್ರವಾಸವನ್ನು ಕೈಗೊಂಡರು. ಪ್ರವಾಸದ ಉದ್ದೇಶ ಆ ದೇಶಗಳ ವೈದ್ಯಕೀಯ ವಿಧಿವಿಧಾನಗಳ ಅಧ್ಯಯನವಾದರೂ ರಾಶಿಯವರ ತುಂಟಮನಸ್ಸು ಅಲ್ಲಿನ ಜನಜೀವನದ ವೈಚಿತ್ರ್ಯಗಳನ್ನು ನೋಡಿ ತನ್ಮೂಲಕ ನಗೆಯನ್ನು ಹೊಮ್ಮಿಸುವ ಅವಕಾಶವನ್ನು ಕಂಡುಕೊಂಡಿತು. ಆ ಪ್ರಕ್ರಿಯೆಯ ಫಲಶ್ರುತಿಯೇ ಈಗ ನಿಮ್ಮ ಕೈಲಿರುವ 'ಕೊರವಂಜಿಯ ಪಡುವಣ ಯಾತ್ರೆ'.

ಈ ಪುಸ್ತಕದ ಮೊದಲ ಆವೃತ್ತಿಯ ಪ್ರಾರಂಭದಲ್ಲಿ ರಾಶಿಯವರೇ ಹೇಳಿದಂತೆ, ಲೇಖಕರು ತಮ್ಮ ಪ್ರವಾಸದಲ್ಲಿ ತಮ್ಮ ಮಾನಸ ಪುತ್ರಿ ಕೊರವಂಜಿಯನ್ನೂ ಕರೆದೊಯ್ದರಂತೆ. ಪ್ರತಿದಿನ ಅಧ್ಯಯನ ಪರ್ಯಟನ ಮುಗಿದನಂತರ, ಸಂಜೆ ರಾಶಿಯವರು ತಾವು ಕಂಡ ವಿಚಿತ್ರಗಳ ಬಗ್ಗೆ ಕೊರವಂಜಿಗೆ ವರದಿ ಒಪ್ಪಿಸುತ್ತಿದ್ದರಂತೆ. ಹಾಗಾಗಿ ಒಂದು ದೃಷ್ಟಿಯಲ್ಲಿ ಇದು ಕೊರವಂಜಿ ರಚಿಸಿದ ವರದಿ. ಅವಳು ಆ ದೇಶಗಳ ನೋಟಗಳನ್ನು ನೋಡಿ, ತಿನಿಸುಗಳನ್ನು ಸವಿದು, ಅಲ್ಲಿನ ಜನಸಾಮಾನ್ಯರನ್ನು ಭೇಟಿಮಾಡಿ ಇಲ್ಲಿ ತನ್ನ ವರದಿಯನ್ನು ಓದುಗರಿಗೆ ಒಪ್ಪಿಸಿಬಿಟ್ಟಿದ್ದಾಳೆ. ರಷ್ಯದ ನಟಾಷಾಳಿಂದ ಮೊದಲುಗೊಂಡು ಪ್ಯಾರಿಸ್ಸಿನ ಲಿಡೋ ಬೆಡಗಿಯರ ತನಕ, ಸ್ಟಾಕ್ ಹೋಮ್‌ನ ವಿದ್ಯಮಾನದಿಂದ ಹಿಡಿದು ಕೊಪನ್‌ಹೇಗನ್ನಿನ ಬೆರಗುಗಳ ತನಕ, ಕೊರವಂಜಿಯ ಬ್ರಾಂಡಡ್ ಹಾಸ್ಯ ಇಲ್ಲಿ ಲಾಸ್ಯವಾಡಿದೆ. ಗರಿ, ಗರಿ, ಬಿಸಿ ಬಿಸಿ ವರದಿ ಒಪ್ಪಿಸಿಕೊಳ್ಳಿ.

36, 6ನೇ ಮುಖ್ಯರಸ್ತೆ
ಮಲ್ಲೇಶ್ವರ, ಬೆಂಗಳೂರು

ಅಪರಂಜಿ ಶಿವು

# ದಿಳ್ಳಿ

ಪ್ರವಾಸ ಹೊರಡುವ ಹಿಂದಿನ ರಾತ್ರಿ, ದಿಳ್ಳಿಯಲ್ಲಿ ಭೋಜನಕೂಟವನ್ನು ಪ್ರವಾಸಿ ಸಂಸ್ಥೆಯವರು ಏರ್ಪಡಿಸಿದ್ದರು. ಪ್ರವಾಸದ ಕಾಲದಲ್ಲಿ ಸಹಾಯಕವಾಗಬಹುದಾದ ಸಲಹೆಗಳನ್ನೂ ಕೊಡಲು, ಹಾಗೂ ಪ್ರವಾಸಿ ತಂಡದವರು ಪರಸ್ಪರ ಪರಿಚಯ ಮಾಡಿಕೊಳ್ಳಲಿ ಎಂದು ಈ ವ್ಯವಸ್ಥೆ ಮಾಡಲಾಗಿತ್ತು. ಅರವತ್ತಕ್ಕೂ ಮಿಗಿಲಾದ ಪ್ರವಾಸಿಗಳ ಜತೆಗೆ ಪ್ರವಾಸಿ ಸಂಸ್ಥೆಯ ಆಡಳಿತ ವರ್ಗದವರು, ದಿಳ್ಳಿಯ ಗಣ್ಯ ಪ್ರಜೆಗಳು, ಅಂದರೆ ಪ್ರವಾಸಿ ಸಂಸ್ಥೆಯ ಪರಿಚಯವಿದ್ದವರು, ಇವರೆಲ್ಲರೂ ಸೇರಿ ನೂರು. ನೂರೈವತ್ತು ಗಂಡು ಹೆಣ್ಣುಗಳು ಸೇರಿದ್ದುವು. ಊಟದ ಸಡಗರದ ಅವ್ಯವಸ್ಥೆ, ಭಾಷಣಕಾರರ ಭರಾಟೆ, ಬಡಿಸುವ ಮಾಣಿಗಳ ಬಿಗುಮಾನ, ಈ ಗಲಾಟೆಯಲ್ಲಿ ಪ್ರವಾಸಿಗರು ಪರಸ್ಪರ ಪರಿಚಯ ಮಾಡಿಕೊಳ್ಳಲು ಅವಕಾಶವೇ ಸಿಗಲಿಲ್ಲ.

ಮಾರನೆಯ ಬೆಳಿಗ್ಗೆ ವಿಮಾನ ನಿಲ್ದಾಣದಲ್ಲಿ ಹತ್ತು ಗಂಟೆಗೆ ಇರಬೇಕೆಂದೂ, ಪ್ಯಾಸ್ ಪೋರ್ಟ್, ಸುಂಕದವರು, ಇತ್ಯಾದಿ ಮಾಮೂಲುಗಳಿಗೆ ಒಂದು ಗಂಟೆ ಆಗಬಹುದೆಂದೂ, ಪ್ರಯಾಣ ಹನ್ನೆರಡಕ್ಕೆ ಆರಂಭವಾಗುತ್ತದೆಂದೂ, ಭೋಜನಾನಂತರ ತಿಳಿಸಿದರು. ಆಮೇಲೆ ಪ್ರವಾಸಿ ತಂಡ ಚದುರಿತು.

ಎಲ್ಲರ ಜತೆಗೂ ಬಸ್ಸಿನಲ್ಲಿ ಹೊರಟು, ವಿಮಾನ ನಿಲ್ದಾಣವನ್ನು ಹತ್ತು ಗಂಟೆಗೆ ಸೇರಿದೆವು. ಪ್ಯಾಸ್‌ಪೋರ್ಟ್ ಪರೀಕ್ಷೆ, ಕಸ್ಟಮ್ಸ್‌ರವರ ತನಿಖೆ ಆಗಿ ವಿಮಾನ ನಿಲ್ದಾಣದ ಒಳ ಅಂಗಳವನ್ನು ಹನ್ನೊಂದರ ಸಮಯಕ್ಕೆ ಸೇರಿದೆವು. ಇನ್ನೂ ಒಂದು ಗಂಟೆ ಇದೆಯಲ್ಲ! ಅಷ್ಟರಲ್ಲಿ ಕೆಲವರ ಪರಿಚಯವನ್ನಾದರೂ ಮಾಡಿಕೊಳ್ಳೋಣ ಎಂದು ಅಂದುಕೊಂಡೆ.

ಮೊದಲು ಕಂಡ ಪ್ರವಾಸಿಗ ನೀಲಿ ಸೂಟು ಧರಿಸಿದ್ದ. ಹಣೆಯ ಮೇಲೆ ಅರ್ಧ ಅಂಗುಲ ಇರುವ ಕುಂಕುಮದ ತಿಲಕವನ್ನು ಭರ್ಜರಿಯಾಗಿ ಧರಿಸಿದ್ದ. ಅವನ ತುಟಿಗಳು ಏನೋ ಜಪ ಮಾಡುತ್ತಿದ್ದಂತೆ ಕಂಡುವು. ವಿಮಾನ ಪ್ರಯಾಣ ಸುರಕ್ಷಿತವಾಗಿರಲಿ ಎಂದು

ಮಂತ್ರ ಹೇಳ್ತಾ ಇರಬಹುದು, ಇವ ಹಿಂದೂ ವ್ಯಾಪಾರಿ ಇರಬೇಕು, ಅದಕ್ಕೇ ಇಂತಹ ಮೂಢ ನಂಬಿಕೆ, ಇಂತಹವನು ಖಂಡಿತವಾಗಿಯೂ ಡಾಕ್ಟರಲ್ಲ, ನಮ್ಮ ಪ್ರವಾಸಿ ತಂಡದವನಲ್ಲ - ಎಂದು ತೀರ್ಮಾನಿಸಿದೆ.

ಎರಡನೆಯ ವ್ಯಕ್ತಿ ಕಣ್ಣು ಕೋರೈಸುವಂತಹ ಕೆಂಪಾನೆ ಸೂಟು ಧರಿಸಿದ್ದ. ಅವನ ಮುಖದ ಮೇಲೂ ಕುಂಕುಮದ ಬಟ್ಟು. ಆದರ ತೋಳು ಗಾತ್ರದ ಹೂವಿನ ಹಾರವನ್ನು ಕತ್ತಿನಿಂದ ಮಂಡೀತನಕ ಇಳಿಬಿಟ್ಟುಕೊಂಡಿದ್ದ. ಪ್ರವಾಸಿಗನಿಗೆ ಯಾರಾದರೂ ಹಾರ ಹಾಕಿ ಶುಭ ಕೋರಿದರೆ ಸಾಮಾನ್ಯವಾಗಿ ಆತ ಒಂದು ಸ್ವಲ್ಪ ಹೊತ್ತು ಹಾರವನ್ನು ಹಾಕಿಕೊಂಡಿದ್ದು, ಹಾಕಿದವರು ದೂರವಾದ ಮೇಲೆ, ತೆಗೆಯುವುದು ಸ್ವಾಭಾವಿಕ. ವಿಮಾನ ನಿಲ್ದಾಣದ ಒಳ ಅಂಗಳದಲ್ಲಿ ಕೂಡ ಹಾರವನ್ನೂ ಹಾಕಿಕೊಂಡೇ ಇರಬೇಕಾದರೆ ಮಠದವರೋ ಪುರೋಹಿತರೋ, ಇವನಿಗೆ ಆಶೀರ್ವಾದ ಮಾಡಿ ಹಾರ ಹಾಕಿದ್ದಾರೆ, ರಕ್ಷೆ ಇದ್ದಂತೆ. ಅದಕ್ಕೇ ಇವ ಹಾರವನ್ನು ಹಾಕಿಕೊಂಡೇ ಇದ್ದಾನೆ. ಪ್ರಾಯಶಃ ಲೇವಾದೇವಿ ಪಂಗಡದವನಿರಬೇಕು ಎಂದುಕೊಂಡೆ. ಓದಿದ ಡಾಕ್ಟರ್ ಅದೂ ನಲವತ್ತರ ಪ್ರಾಯದ ಡಾಕ್ಟರ್ ಈ ರೀತಿ ಹುಂಬತನ ತೋರಿಸಿಕೊಳ್ಳುಲ್ಲ ಅಂತ ನನ್ನ ನಂಬಿಕೆ.

ಮೂರನೆಯ ವ್ಯಕ್ತಿಯನ್ನು ಕಂಡೆ. ಆ ವ್ಯಕ್ತಿಯೂ ನನ್ನನ್ನು ನೋಡಿತು. ಪರಸ್ಪರ ದುರುಗುಟ್ಟಿಕೊಂಡು ನೋಡಿದೆವು. ಹಠಾತ್ತನೆ ಆ ವ್ಯಕ್ತಿ ನನ್ನ ಬಳಿಗೆ ಬಂದಿತು. ''ಎಲ್ಲಿಗೆ ಹೋಗ್ತೀರಿ'' ಎಂದು ಕೇಳೇ ಬಿಟ್ಟಿತು.

ನವಮಿ ದಿನ ಪ್ರಯಾಣ ಹೊರಡಬೇಡ ಅಂತ ಅಜ್ಜಿ ಮೂವತ್ತು ವರ್ಷಗಳಿಂದ ಹೇಳಿದ್ದು ಜ್ಞಾಪಕದಲ್ಲಿತ್ತು. ಅವತ್ತು ನವಮಿ. ಪ್ರಯಾಣವೋ ವಿಮಾನದಲ್ಲಿ, ಹಾಗಿರುವಾಗ ಈ ವ್ಯಕ್ತಿ ಅಪಶಕುನದ ಪ್ರಶ್ನೆಯನ್ನು ಕೇಳಿದನಲ್ಲಾ ಎಂದು ಸ್ವಲ್ಪ ಖಿನ್ನನಾದೆ. ನೇರವಾಗಿ ಉತ್ತರ ಕೊಡಲಿಲ್ಲ. ''ತಾವೆಲ್ಲಿಗೆ '' ಎಂದೆ.

''ವೈದ್ಯರ ತಂಡದಲ್ಲಿ ನಾನೂ ಒಬ್ಬ, ರಾಜಾಸ್ಥಾನದ ಕಡೆಯವನು. ನೀವೂ ನಮ್ಮ ತಂಡದವರು ಅಂತ ಅನ್ನಿಸಿತ್ತು. ದಕ್ಕಣೀ ಕಡೆಯವರು, ಪರಿಚಯ ಮಾಡಿಕೊಳ್ಳೋಣ ಅಂತ ಬಂದೆ'' ಎಂದ.

ನನ್ನ ಪರಿಚಯ ಮಾಡಿಸಿದೆ. ಹೆಗಲಿಗೆ ಹಾಕಿಕೊಂಡಿದ್ದ ಚೀಲ ಕ್ಷಣ ಕ್ಷಣಕ್ಕೂ ಭಾರ ಹೆಚ್ಚಾದಂತೆ ತೋರಿತು. ತೋಳ ಮೇಲಿದ್ದ ಮೇಲಂಗಿಯೂ ಭಾರವಾಗಹತ್ತಿತು. ಎರಡನ್ನೂ ತೆಗೆದು ಕಂಬದ ಪಕ್ಕದಲ್ಲಿಟ್ಟೆ, ಗಿಂಡಾಯನಮಃ ಅಂತ ಆ ವ್ಯಕ್ತಿ ಗಂಟಿನ ಮೇಲೆ ಕೂತು ಬಿಡೋದೇ? ಹೀಗೆ ಅಪಶಕುನ ಮೇಲೆ ಮೇಲೆ ಆದರೆ, ಪ್ರಯಾಣ ಸುಮುಖವಾಗಿರುತ್ಯೇ? ಅವನನ್ನ ಮೇಲಕ್ಕೆ ಮೆಲ್ಲಗೆ ಉಪಾಯವಾಗಿ ಎಬ್ಬಿಸಿದೆ.

ಅಷ್ಟು ಹೊತ್ತಿಗೆ ಪುಟಾಣಿ ಟ್ರಾಲರ್ ಒಂದು, ದೊಡ್ಡ ವಿಮಾನವನ್ನು ಎಳೆದುಕೊಂಡು ಬಂದು ನಮ್ಮ ಎದುರಿನಲ್ಲೇ ನಿಲ್ಲಿಸಿತ್ತು. ಕೆಂಪು ಕೆಂಪು ಪಟ್ಟಿಗಳನ್ನು ಮೈ ತುಂಬಾ ಧರಿಸಿದ್ದ ಆ

ವಿಮಾನವನ್ನು ನೋಡಿದಾಗ, ಅಚ್ಚ ಕೆಂಪು ಸೀರೆಯನ್ನುಟ್ಟ ನಮ್ಮೂರ ಮಡಿ ಹೆಂಗಸರ ನೆನಪಾಯಿತು. ಒಳ ಅಂಗಳದಲ್ಲಿದ್ದ ಜನರೆಲ್ಲಾ ನಾನು ನಿಂತಿದ್ದಲ್ಲಿಗೆ ಬಂದರು. ''ಅದು ನಮ್ಮ ವಿಮಾನ, ರಾಣಿ ಆಫ್ ಝೂನ್ಸಿ; ಅದರಲ್ಲೇ ನಾವು ಮಾಸ್ಕೋವಿಗೆ ಹೋಗೋದು'' ಎಂದು ಮಾತನಾಡಿಕೊಳ್ಳಲು ಆರಂಭಿಸಿದರು.

ರಾಣಿ ಆಫ್ ಝೂನ್ಸಿ ಕಡೆಗೆ ಕೆಂಪು ಸೀರೆ ಉಟ್ಟುಕೊಳ್ಳೊ ಹಾಗಾದಾಗ ಪ್ರಾಣವನ್ನೇ ಬಿಟ್ಟಳು. ಆ ಹೆಸರು ಹೊತ್ತ ವಿಮಾನಕ್ಕೆ ಕೆಂಪು ಸೀರೆ ಉಡಿಸಿದ್ದಾರೆ. ಇರಬಹುದು. ಆದರೆ ಮಂಗಳ ಪ್ರಯಾಣಕ್ಕೆ ಈ ಅಮಂಗಳ ಬಣ್ಣ ಬಳಿಯೋದು ನ್ಯಾಯವಲ್ಲ, ಸಂಸ್ಕೃತಿಯ ಲಕ್ಷಣವಲ್ಲ ಎಂದೆಲ್ಲಾ ಅನ್ನಿಸಿತು. ಅಪಶಕುನಗಳೇನೋ ಮೇಲೆ ಮೇಲೆ ಆಗುತ್ತಿದ್ದುವು.

ಆ ವೇಳೆಗೆ ನಿಲ್ದಾಣದ ಧ್ವನಿವರ್ಧಕವು ''ಮಾಸ್ಕೋ ಪ್ರಯಾಣಿಕರೆಲ್ಲಾ ವಿಮಾನದೆಡೆಗೆ ಹೋಗಿ'' ಎಂದು ಆದೇಶವನ್ನಿತ್ತಿತು.

ಎಲ್ಲರೂ ರಾಣಿ ಆಫ್ ಝೂನ್ಸಿ ಬಳಿಗೆ ನಡೆದವು.

ಕುಂಕುಮದ ಗೂಟ ನಾಮವನ್ನು ಧರಿಸಿದ್ದಾತ, ಹೂಮಾಲೆಯನ್ನು ಹಾಕಿದ್ದಾತ, ಇಬ್ಬರೂ ವಿಮಾನವನ್ನು ಹತ್ತಿದರು. ಡಾಕ್ಟರುಗಳು ಇಷ್ಟು ಮೂಢನಂಬಿಕೆ ಇಡುತ್ತಾರೆ ಎಂದಿದ್ದರೆ ನಂಬುತ್ತಲೇ ಇರಲಿಲ್ಲ. ಈಗ ಕಣ್ಣೆದುರಿಗೆ ಸಾಕ್ಷಿ.

ಅರೆ! ಅಪಶಕುನ ಅಂತ ನಾನು ಅಂದುಕೊಳ್ಳಲಿಲ್ಲವೇ? ನಾನೂ ವೈದ್ಯನಲ್ಲವೇ? ಹುಟ್ಟು ಗುಣ, ಬಾಲ್ಯದ ಪಾಠ, ಇವೆರಡೂ ನೆರಳಿದ್ದಂತೆ. ನಮ್ಮ ನೆರಳಿನಿಂದ ನಾವು ಹೇಗೆ ಹಾರಿ ಬೇರೆಯಾಗುವುದು ಸಾಧ್ಯವಿಲ್ಲವೋ ಹಾಗೆಯೇ ಬಾಲ್ಯದಲ್ಲಿ ಕಲಿತ ಪಾಠಗಳು ಎನ್ನಿಸಿತು.

ವಿಮಾನದಲ್ಲಿ ಖಾನೇಷು ಮಾರಿ ತೆಗೆದುಕೊಂಡರು. ಹೊಟ್ಟೆಗೆ ಪಟ್ಟಿ ಕಟ್ಟಿ ಎಂದಾಗ ಪಟ್ಟಿ ಕಟ್ಟಿದೆವು. ಕಾಲು ಬಳೆ ಕಳಚಿಕೊಂಡ ಹೆಂಗಸಿನಂತೆ ರಾಣಿ ಆಫ್ ಝೂನ್ಸಿ ಗಗನದತ್ತ ಏರಿ ಹಾರಿದಳು.

ಹೊಟ್ಟೆ ಪಟ್ಟಿ ಬಿಚ್ಚಿದೆವು. ಬಲಗಡೆ ಕಿಟಕಿಯ ಬಳಿ ನಾನು ಕೂತಿದ್ದೆ. ಕಿಟಕಿಯಲ್ಲೇ ನೋಡುತ್ತಿದ್ದೆ. ಊರು ಹೋಯ್ತು. ಕಾಡು ಬಂತು. ಕಾಡು ಹೋಯ್ತು ಮೋಡ ಬಂತು. ಮೋಡ ಹೋಯ್ತು ಬೆಟ್ಟ ಬಂತು.

ಅರೆ ! ಇದೇನೇ ಹಿಮವತ್ಪರ್ವತ !

ಹೌದು ಮಂಜು ಕವಿದ ಸೊಂಟ ಹಿಮವತ್ಪರ್ವತನಿಗೆ. ಅಲ್ಲಲ್ಲೇ ಸಮನಾದ ಭೂಮಿ. ಪರ್ವತ ಶ್ರೇಣಿ. ಸರೋವರಗಳು. ನವರಾತ್ರಿ ಬೊಂಬೆಗಳನ್ನಿಡುವಾಗ ನಾದಿನಿ ಇದೇ ರೀತಿ ಬೆಟ್ಟ ಗುಡ್ಡಗಳನ್ನು ರಚಿಸಿದ್ದಳು. ಥೇಟ್ ಹಾಗೇ ಇತ್ತು ಹಿಮಾಲಯ !

ಅಷ್ಟು ಹೊತ್ತಿಗೆ ನನ್ನ ಬಟ್ಟ ತಲೆಯ ಮೇಲೆ ಯಾವುದೋ ಮೆದುವಾದ ವಸ್ತುವನ್ನು ಬಿಗಿಯಾಗಿ ಅದುಮಿದಂತಾಯ್ತು. ಹತ್ತಿ ಬೆಣ್ಣೆ ಬೆಕ್ಕಿನ ಬಾಲದ ನೆನಪಾಯಿತು. ತಲೆ ಎತ್ತುವ ಹಾಗಿರಲಿಲ್ಲ. ಬಿದ್ದ ಭಾರ ಹೆಚ್ಚಾಗಿತ್ತು. ''ಅದೇನೇ ಹಿಮಾಲಯ, ಅದು ಟಿಬೆಟ್ಟೇ'' ಎಂದು ನನ್ನ ತಲೆ ಮೇಲೆ ಭಾರ ಹಾಕಿದವರು ಉತ್ಸಾಹದಿಂದ, ಕೋಮಲ ದನಿಯಲ್ಲಿ ಕೇಳುತ್ತಿದ್ದರು. ಸ್ವಲ್ಪ ತಲೆಯನ್ನು ತಿರುಗಿಸಿ ತುದಿಗಣ್ಣಿನಲ್ಲಿ ನೋಡಿದೆ. ಮೂವರು ಹೆಣ್ಣು ವೈದ್ಯರು ಕಿಟಕಿಯತ್ತ ಕಣ್ಣು ಚಾಚಿ, ಕತ್ತು ಚಾಚಿ ಮೈ ಬಾಗಿಸಿ ಹಿಮಾಲಯವನ್ನು ನೋಡುತ್ತಿದ್ದಾರೆ! ಋಷಿ ಪಂಚಮಿ, ಮುನಿ ಪಂಚಮಿ, ಅವಧೂತ ಪಂಚಮಿ ಮಾಡಿ ಮುಗಿಸಿದವರ ಮುಖದ ಕಳೆ. ಉತ್ಸಾಹವೋ! ಆಗತಾನೇ ಚಿಗುಳಿ ತಿಂದವರ ತರಹ ಉತ್ಸಾಹ!

ತಲೆಗೆ ಭಾರ, ಕತ್ತು ನೋವುತ್ತೆ ಅಂತ ಹೇಳೋ ಹಾಗಿಲ್ಲ, ಹೆಂಗಸರು. ಏನು ಮಾಡಲಪ್ಪ ದೇವರೇ ! ಈ ರೀತಿ ಕಾಡಿ ನನ್ನ ಗೋಣು ಮುರಿಯಬೇಕೇನಪ್ಪಾ ! ಎಂದುಕೊಳ್ಳುವ ಹೊತ್ತಿಗೆ

''ಹೊಟ್ಟೆ ಪಟ್ಟಿ ಕಟ್ಟಿ, ಧೂಮಪಾನ ನಿಷೇಧ'' ಅಂತ ಗಗನಸಖಿ ಎಚ್ಚರಿಸಿದಳು. ಎಲ್ಲರೂ ಅವರವರ ಪೀಠದಲ್ಲಿ ಹೋಗಿ ಕುಳಿತು ಪಟ್ಟಿ ಬಿಗಿದುಕೊಂಡರು.

ಎಲ್ಲರಿಗೂ ಕಾತುರ ! ಹವಾಮಾನ ಕೆಟ್ಟಿದೆಯೇ – ಅಂತರಿಕ್ಷದ ಗಾಳಿ ಗೂಡಿನಲ್ಲಿ ಸಿಕ್ಕಿಬಿದ್ದೆವೇ? ಹಿಮಾಲಯದ ಮೇಲೆ ಆಕಸ್ಮಿಕ ಆದರೆ ಎಲುಬಿನ ಚೂರೂ ಸಿಗುಲ್ಲವಲ್ಲ! ಎಂದೆಲ್ಲಾ ಭೀತಿ.

ಐದು ಹತ್ತು ನಿಮಿಷಗಳಾದುವು. ವಿಮಾನ ಸುಸೂತ್ರವಾಗಿಯೇ ಹಾರಾಡುತ್ತಿತ್ತು. ಮತ್ತೆ ಹೊಟ್ಟೆ ಪಟ್ಟಿ ಕಟ್ಟಿ ಎಂದು ಯಾಕೆ ಹೇಳಿದರು? ಬಾಯಾರುತ್ತಿತ್ತು. ಗಗನಸಖಿಯನ್ನು ಕರೆದೆ. ಸ್ವಲ್ಪ ನೀರು ಕೊಡಿ ಎಂದೆ. ಆಕೆ ನೀರು ತಂದು ಕೊಟ್ಟಳು. ಧನ್ಯವಾದವನ್ನು ಹೇಳುತ್ತಾ ಆಕೆಯನ್ನು ಕೇಳಿದೆ : ''ಯಾಕಮ್ಮಾ, ಹೊಟ್ಟೆ ಪಟ್ಟಿ ಕಟ್ಟು ಅಂತ ಹೇಳಿದಿರಿ? ಏನಾದರೂ ಅಪಾಯದ ಹವಾ ಇತ್ತೆ?'' ಎಂದು. ಆಕೆ ನಸುನಗುತ್ತಾ ''ಅಂತಹುದೇನು ಇಲ್ಲ. ಆದರೆ ನಿಮ್ಮ ತಂಡದ ಹೆಂಗಸರು ಗಂಡಸರು ಎಲ್ಲಾ ಹಿಮಾಲಯ ನೋಡಬೇಕು ಅಂತ ಒಂದೇ ಕಡೆ ಕಿಟಕಿಗಳ ಹತ್ತಿರ ಬಂದು ಬಾಗಿ ನಿಂತರು. ಭಾರ ಸಮವಾಗುಲ್ಲ ಅಂತ ನಾನು ಎಷ್ಟೇ ಹೇಳಿದರೂ ಕೇಳಲಿಲ್ಲ. ಅದಕ್ಕೇ ಕ್ಯಾಪ್ಟನ್‌ಗೆ ಹೇಳಿ ಈ ಸೂಚನೆ ಕೊಡಿಸಿದೆ. ಇಲ್ಲದೇ ಇದ್ದರೆ ಗಡವಗಳ ಹಾಗೆ ಬೆಳೆದ ಈ ಮಕ್ಕಳನ್ನು ಹತೋಟಿಯಲ್ಲಿಡಲು ಅಸಾಧ್ಯ'' ಎಂದು ಹೇಳಿದಳು. ಮಗುವಾಗಿದ್ದಾಗ ಗೊಗ್ಗಯ್ಯ ಬರ್ತಾನೆ ಮಲಕ್ಕೋ ಅಂತ ನಮ್ಮಮ್ಮ ಹೆದರಿಸಿ ಮಲಗಿಸುತ್ತಾ ಇದ್ದಳು. ಗಗನಸಖಿಯೂ ನಮ್ಮಮ್ಮನ ತರಹಾನೆ ಗೊಗ್ಗಯ್ಯನ ಭಯ ತೋರಿಸಿದಳಲ್ಲಾ ಎಂದು ಚಕಿತನಾದೆ.

ಹಿಮಾಲಯವನ್ನೂ ದಾಟಿದೆವು. ಬರೀ ಮೋಡಗಳೇ ಕಾಣಿಸುತ್ತಿದ್ದುವು. ನಮ್ಮ ಹುಮ್ಮಸ್ಸೂ ಕಡಿಮೆಯಾಗುತ್ತ ಬಂದಿತ್ತು. ಝೋಂಪು ಹತ್ತಿದ ಹಾಗೆ ಆಯಿತು.

"ಹೊಟ್ಟೆ ಪಟ್ಟಿ ಕಟ್ಟಿ. ಧೂಮಪಾನ ನಿಲ್ಲಿಸಿ" ಅಂತ ಆದೇಶ ಕೇಳಿಸಿದ ಹಾಗೆ ಆಯಿತು. ಕಣ್ಣು ಬಿಟ್ಟೆ. "ಕೆಲವೇ ನಿಮಿಷಗಳಲ್ಲಿ ಟಾಷ್‌ಕಂಟ್‌ನಲ್ಲಿ ಇಳಿಯುತ್ತೇವೆ." ಎಂದು ಗಗನಸಖಿ ಘೋಷಿಸಿದಳು.

ಟಾಷ್‌ಕಂಟಿನಲ್ಲಿ ಮಧ್ಯಾಹ್ನ ನಾಲ್ಕು ನಾಲ್ಕೂವರೆ ಗಂಟೆ ಹೊತ್ತಿಗೆ ಇಳಿದೆವು.

# ಟಾಷ್‌ಕಂಟ್ ನಿಲ್ದಾಣ

ಟಾಷ್‌ಕಂಟಿನ ವಿಮಾನ ನಿಲ್ದಾಣವು ಸುಮಾರು ಭಾರಿಯಾದದ್ದೇ. ನಿಲ್ದಾಣದ ಕಟ್ಟಡವು ಭವ್ಯವಾಗಿದೆ. ಊರೊಳಗೆ ಹೋಗುವವರಲ್ಲ, ನಾವು. ಆದುದರಿಂದ ಹೊರ ವರಾಂಡದಲ್ಲೇ ಸುತ್ತಾಡುತ್ತಿದ್ದೆವು. ಎಲ್ಲಾ ವಿಮಾನ ನಿಲ್ದಾಣಗಳಲ್ಲಿನಂತೆ, ಇಲ್ಲಿ ಕೂಡ, ಊರ ಜನರು ಬಂದು ಗುಂಪು ಕಟ್ಟಿಕೊಂಡು ನಿಂತು, ಬಂದು ಹೋಗುವವರನ್ನು ನೋಡುತ್ತಾ ನಿಂತಿದ್ದರು. ರಂಗು ರಂಗಿನ ಬಟ್ಟೆಗಳ ಉಡುಪನ್ನು ಧರಿಸಿದ್ದರು. ಆದರೆ ಬಟ್ಟೆ ಸ್ವಲ್ಪ ಗಾಢವಾದದ್ದೇ ಅನ್ನಬೇಕು. ಚೆನ್ನಾಗಿ ಉಂಡು ತಿಂದವರ ದೇಹ ಬೆಳವಣಿಗೆ. ಸೇರು ಪಂಚೇರು, ಧಡಿಯ ಅನ್ನಬೇಕೇ ಹೊರತು, ಸೇರು ಪಾವು ಚಟಾಕು ಅನ್ನುವ ಹಾಗಿರಲಿಲ್ಲ.

ಎಷ್ಟು ಹೊತ್ತು ಅಂತ ಕಟಕಟೆ ಈಚೆ ಕಡೆಯಿಂದ ನಾವು ಆಚೆ ಕಡೆ ಇದ್ದ ಅವರನ್ನು ನೋಡುವುದು? ವಿಮಾನಗಳು ಇಳಿದು ಹೊರಡುವುದನ್ನು ನೋಡೋಣ ಎಂದು ಆ ಕಡೆ ತಿರುಗಿದೆ, ನಿಲ್ದಾಣದ ವಿಶಾಲವಾದ ಅಂಚಿನಲ್ಲಿ 180 ಸೈನಿಕ ವಿಮಾನಗಳನ್ನು ಎಣಿಸಿದೆ. 4–5 ನಿಮಿಷಗಳಿಗೊಮ್ಮೆ ಒಂದು ವಿಮಾನ ಬಂದು ಇಳಿಯುತ್ತಿತ್ತು. ಒಂದು ಹೊರಡುತ್ತಿತ್ತು. ಟಾಷ್ ಕಂಟ್ ಅಂದರೆ ನಮ್ಮೂರಿನ ಹಾಸನ ಕೋಲಾರ ಇದ್ದ ಹಾಗೆ ಅಂತ ಅಂದುಕೊಂಡಿದ್ದೆ. ಆದರೆ ವಿಮಾನ ನಿಲ್ದಾಣದ ವೈಭವ, ಚಟುವಟಿಕೆಗಳನ್ನು ನೋಡಿದರೆ, ಇದರ ಮರ್ಮ ಏನು ಎಂದು ಅನುಮಾನ ಬಂತು. ಲಂಗರು ಹಾಕಿದ್ದ ಅಸಂಖ್ಯಾತ ಸೈನ್ಯ ವಿಮಾನಗಳನ್ನು ನೋಡಿದ ಮೇಲೆ, ಇದು ವಾಯು ದಳದ ಹಿರಿಯ ಶಿಬಿರವಿರಬೇಕು. ರಷ್ಯಾ ದೇಶದ ದಕ್ಷಿಣದಲ್ಲಿ ಏನಾದರೂ ಕಾರ್ಯ ನಡೆಸಬೇಕಾದರೆ, ಟಾಷ್ಕಂಟ್ ಮೂಲ ಕೇಂದ್ರವಾಗುತ್ತದೆ ಎನ್ನುವುದು ಅರ್ಥವಾಯಿತು.

ರಾಣಿ ಆಫ್ ಝಾನ್ಸಿ ಹೊರಡಲು ಸಿದ್ಧಳಾದಳು. ನಾವೆಲ್ಲಾ ದುಡುದುಡು ಓಡಿ ಹೋಗಿ ಕೂತೆವು. ನಿಲ್ದಾಣದ ಹಾರುವ ತುದಿಯ ತನಕ ಹೋದ ರಾಣಿ, ಹಿಂತಿರುಗಿ ಬಂದು ನಿಂತಳು. ಇಂಜಿನ್ ತೊಂದರೆ ಆಗಿದೆ. ಸರಿಮಾಡಿಕೊಂಡು ಹೋಗಬೇಕು. ಎಲ್ಲರೂ

ಇಳಿಯಿರಿ ಅಂದರು. ಎಲ್ಲರೂ ಇಳಿದೆವು. ರಿಪೇರಿಯಾಗುವ ತನಕ ತಿರುಗಿ ಶತಪಥ ಅಂದು ಕೊಂಡೆ. ಸಂಜೆ ಆಯಿತು. ಕತ್ತಲಾಯಿತು. ಆಗ ವಿಮಾನ ಚಾಲಕರು ತೀರ್ಮಾನಿಸಿದರು. ರಿಪೇರಿಯಾಗುಕ್ಕೆ ಇನ್ನೂ ಹೊತ್ತಾಗುತ್ತೆ. ಆದುದರಿಂದ ಇಲ್ಲೇ ರಾತ್ರಿ ಊಟ ಮಾಡಿ ಹೊರಡೋದು ಅಂತ. ಭವ್ಯ ಕಟ್ಟಡದ ಊಟದ ಮನೆಗೆ ಹೋಗಬೇಕಾದರೆ, ಯಥಾ ಪ್ರಕಾರ ಕಸ್ಟಮ್ಸ್ ತನಿಖೆ ಆಗಬೇಕಲ್ಲ! ತನಿಖೆ ಮಾಡಿದವರು ಯಾರು ಅಂತ ? ಚೀಣೀ ಅಧಿಕಾರಿ !! 1960. ಚೀಣೀಯರು ಎಲ್ಲ ಹಂತಗಳಲ್ಲೂ ರಷ್ಯಾದವರಿಂದ ಕಲಿಯುತ್ತಿದ್ದರು.

ಒಳಗೆ ಹೋದೆವು. ವಿಶ್ರಾಂತಿಯ ಹಜಾರ, ಊಟದ ವಠಾರ ಎಲ್ಲವೂ ನಮ್ಮೂರಿನ ದೊಡ್ಡ ದೊಡ್ಡ ಕಲ್ಯಾಣ ಮಂಟಪಗಳ ತರಹ ಇದ್ದುವು. ಆದರೆ ಇನ್ನೂ ಚೆನ್ನಾಗಿ ಶೃಂಗಾರ ಮಾಡಲ್ಪಟ್ಟಿದ್ದುವು. ಅಲ್ಲಿ ಕಣ್ಣು ಸೆಳೆಯುತ್ತಿದ್ದುದು ಯಾವುದು ಅಂದರೆ ಕಂದೀಲುಗಳು. ವಿದ್ಯುಚ್ಛಕ್ತಿಯ ದೀಪಗಳಿದ್ದ ಈ ಕಂದೀಲುಗಳು ದಿಟವಾಗಲೂ ಕಲಾಕೃತಿಗಳು.

ಅರವತ್ತು ಜನ ಊಟಕ್ಕೆ ಕುಳಿತೆವು. ರಷ್ಯನ್ ಮಹಿಳೆಯರಿಬ್ಬರೇ ಬಡಿಸಿದರು. ಕೃಶಾಂಗಿ ಒಬ್ಬಳು, ಇನ್ನೊಬ್ಬಳು ದುಢುಮಿ. ಆದರೆ ಇಬ್ಬರೂ ಪಾದರಸದಂತೆ ಹರಿದಾಡಿ ಅಷ್ಟೂ ಜನರ ಊಟ ಉಪಚಾರವನ್ನೂ ನಿಭಾಯಿಸಿದರು. ಬೆವರುತ್ತಾ ಇದ್ದರು ದಿಟ, ಆದರೂ ಸುಸ್ತಾದಂತೆ ಕಾಣಿಸಲಿಲ್ಲ. ವಿಮಾನದಲ್ಲಿ ಇಂಡಿಯಾದಿಂದ ತಂದಿದ್ದ ಊಟವನ್ನೇ ಬಡಿಸಿದ್ದರಾದ್ದರಿಂದ, ಊಟದ ವಿಚಾರ ಹೇಳುವಂತಹದೇನೂ ಇಲ್ಲ. ಹಸಿವೂ ಇತ್ತಿಲ್ಲ.

ಅಪಶಕುನದ ಮೇಲೆ ಅಪಶಕುನ ಆಗಿತ್ತು. ನವಮಿ ದಿನ ಪ್ರಯಾಣ ಹೊರಟಾಗ ಇಲ್ಲಿ ಬಂದರೆ ರಾಣಿ ಆಫ್ ಝೂನ್ಸಿ ನೆಲದ ಮೇಲೆ ಮುನಿಸಿಕೊಂಡು ಕೂತಿದ್ದಾಳೆ. ಈ ತನಕ ಪರವಾಗಿಲ್ಲ, ಜೀವ ಗಟ್ಟಿಯಾಗಿದೆ. ಆದರೆ ಆಕಾಶದಲ್ಲಿ ಹಾರುವಾಗಲೂ ರಾಣಿ ಕೋಪಿಸಿ ಕೊಂಡರೆ ? ಅವಳ ಕೆಂಪು ಮಡಿ ಶೃಂಗಾರ ನಮ್ಮನೆಯವರೆಗೂ ? ಎಂತೆಂತ ಕೆಟ್ಟ ಯೋಚನೆ ಅಂತ. ಪ್ರಯಾಣದ ವಿಮೆ ಮಾಡಿತ್ತಿಲ್ಲ ನಾನು. ಆಕಸ್ಮಿಕ ಆದರೆ ಗಂಡನ ಅಡಚಣೆ ಇಲ್ಲದೆ, ಲಕ್ಷ ರೂಪಾಯಿ ಕೈಗೆ ಬಂದರೆ ಹೆಣ್ಣು ಸೌಜನ್ಯದಿಂದ ಬಾಳುವುದು ಕಷ್ಟ ಅಂತ ಅನ್ನಿಸಿತಾದ್ದ ರಿಂದ ವಿಮೆ ಮಾಡಿತ್ತಿಲ್ಲ.

ಕತ್ತಲಲ್ಲಿ ರಿಪೇರಿ ಮಾಡ್ತಾ ಇದಾರೆ. ರಷ್ಯನ್ ಇಂಜಿನಿಯರುಗಳೇ ರಿಪೇರಿ ಮಾಡ್ತಾ ಇದ್ದಾರೆ. ಆದರೂ ಅಪಶಕುನ ಆದಮೇಲೆ ನಮ್ಮ ಮುಖಂಡರನ್ನೂ ಆ ಮಾತು ಈ ಮಾತು ಆಡ್ತಾ, ಇಲ್ಲಿಂದ ತಿರುಗಿ ದಿಳ್ಳಿಗೆ ಹೋಗುಕ್ಕೆ ಅನುಕೂಲ ಇದೆಯೇ ಅಂತ ಕೇಳಿದೆ. ಆತ "ನಾನೂ ವಿಚಾರ ಮಾಡಿದೆ. ಆದರೆ ಇಲ್ಲಿಂದ ಹಿಂತಿರುಗಬೇಕಾದರೆ ತಿರುಗಿ ಪರವಾನಗಿ ಪಡೆಯಬೇಕು ಅದಕ್ಕೆ 3-4 ದಿನಗಳಾಗುತ್ತೆ. ಅಷ್ಟು ಹೊತ್ತಿಗೆ ಮಾಸ್ಕೋದಲ್ಲಿ ಇರ್ತೀವಿ, ಅಲ್ಲಿಂದ ಹಿಂತಿರುಗುವುದು ಸುಲಭ. ಇಲ್ಲದೆ ಇದ್ದರೆ... ಹಿಂತಿರುಗುವ ಯೋಚನೆಯೇ ಇರುಲ್ಲವಲ್ಲ" ಅಂತ ಸಮಾಧಾನದ ಉತ್ತರ ಹೇಳಿದ.

ನಿಲ್ದಾಣದ ವಿಶ್ರಾಂತಿ ಹಜಾರದಲ್ಲಿ ಕೂತಿದ್ದೆವು. ಸುಮಾರು ರಾತ್ರಿ ಒಂಭತ್ತು ಗಂಟೆಗೆ ವಿಮಾನ ಸರಿಯಾಗಿದೆ, ಹೊರಡುತ್ತದೆ, ಎಲ್ಲರೂ ಬನ್ನಿ ಎಂದು ಕರೆದರು.

ಕಾಲು ಎಳೆದುಕೊಂಡೇ ವಿಮಾನದತ್ತ ಹೋದೆ. ಗುಂಪಿನಲ್ಲಿ ಗೋವಿಂದ ಅಂತ ಹತ್ತಿದೆ. ರಾಣಿ ಆಫ್ ಝೂನ್ಸಿ ರೆಕ್ಕೆ ಕೆದರಿ ಹಾರಲು ತೊಡಗಿದಳು. ಎಷ್ಟು ಸುಸೂತ್ರವಾಗಿ ಝೇಂಕಾರ ಮಾಡುತ್ತ ಬಸುರಿ ದುಂಬಿಯಂತೆ ಹಾರಿದಳು ಅಂತ ! ಸಂಜೆ ಮುಂದೆ ಮುನಿಸಿಕೊಂಡ ರಾಣಿ ರಾತ್ರಿಯಾಗುತ್ತಲೂ ಹೀಗೆ ಮೋಜು ಮಾಡುತ್ತಾಳೆ ಎಂದು ದಿಟವಾಗಲೂ ಅನ್ನಿಸಿರಲಿಲ್ಲ. ರಾಣಿಯ ಚಂಚಲ ಪ್ರಕೃತಿಯನ್ನೇ ಉದಾಹರಣೆಗಳ ಸಹಿತ ಯೋಚನೆ ಮಾಡುತ್ತಿದ್ದಾಗಲೇ ಕೂತಲ್ಲೇ ತೂಕಡಿಕೆ ಬಂತು.

ಎಚ್ಚರಿಕೆ ಆದಾಗ ಮಾಸ್ಕೋ ವಿಮಾನ ನಿಲ್ದಾಣದಲ್ಲಿ ಇಳಿಯುತ್ತಿದ್ದೆವು. ರಾತ್ರಿ ಎರಡು ಗಂಟೆಯ ಸಮಯ. ಮಳೆ ಬೀಳುತ್ತಾ ಇತ್ತು. ವಿಮಾನ ನಿಲ್ದಾಣ ಬಂದ್ ಆಗಿತ್ತು. ಆದರೂ ನಮ್ಮ ರಾಣಿ ಇಳಿಯುವುದಕ್ಕೆ ಪರವಾನಿಗೆ ಕೊಟ್ಟಿದ್ದರು. ಬೈಠಕ್ ಖಾನೆಯನ್ನೂ ತೆರೆದು ನಾವೆಲ್ಲಾ ಕೂತುಕೊಳ್ಳಲು ಅವಕಾಶ ಕೊಟ್ಟರು. ಬೆಳಕು ಯಾವಾಗ ಮೂಡುತ್ತೋ ? ಬಸ್ಸುಗಳು ಯಾವಾಗ ಬಂದು ಕರಕೊಂಡು ಊರಿಗೆ ಹೋಗುತ್ತೋ ಎಂದು ಬಕಪಕ್ಷಿಗಳಂತೆ ಕೂತಲ್ಲೇ, ನಿಂತಲ್ಲೇ ಬಾಯಿ ಬಾಯಿ ಬಿಡುತ್ತಿದ್ದೆವು.

# ಮಸ್ಕ್ವಾ

ಮಾಸ್ಕೊ ಊರ ನಿವಾಸಿಗಳು ತಮ್ಮ ಊರನ್ನು ಮಸ್ಕ್ವಾ ಎಂದೇ ಕರೆಯುತ್ತಾರೆ. ಊರ ಬಳಿಯಲ್ಲೇ ಹರಿಯುವ ಮಸ್ಕ್ವಾ ನದಿಯ ನಿಮಿತ್ತ, ಅಥವಾ ಮಸ್ಕ್ವಾ ನದಿಯ ಬಳಿಯಲ್ಲೇ ಊರು ಬೆಳೆದಿದ್ದರಿಂದ, ಊರನ್ನೂ ಮಸ್ಕ್ವಾ ಎಂದು ಕರೆಯುತ್ತಾರೆ. ನದೀಗೆ ಆ ಹೆಸರು ಯಾಕೆ ಬಂತು ಅಂತ ವಿಚಾರಿಸಲಿಲ್ಲ. ನದಿ ಮೂಲ, ಋಷಿ ಮೂಲ ಹುಡುಕಬಾರದು ಅಂತ ನಮ್ಮ ಹಿರಿಯರು ಕಲಿಸಿತ್ತಿಲ್ಲವೇ ?

ಮಸ್ಕ್ವಾ ವಿಮಾನ ನಿಲ್ದಾಣದಲ್ಲಿ ನಿಶಿ ರಾತ್ರಿ 2 ಗಂಟೆಯಿಂದ, ಸ್ವಲ್ಪ ಹೊತ್ತು ಕೂತು, ಕಾಲು ತೊಡೆ ಝೋವು ಹಿಡಿದಾಗ, ಸ್ವಲ್ಪ ಹೊತ್ತು ನಿಂತು, ಅದೂ ಬೇಜಾರಾದಾಗ ಸ್ವಲ್ಪ ಹೊತ್ತು ಅಡ್ಡಾಡಿ, ಬೆಳಗಿನ ಝಾವ 5-5.30ರ ವರೆಗೆ ಕಾಲ ಹಾಕಿದೆವು. ಉಷಃ ಕಾಲ ಶುರುವಾಯಿತು ಅಂತ ಹಕ್ಕಿ ಪಕ್ಷಿಗಳು ನಮ್ಮೂರಿನಲ್ಲಿ ನಿದ್ರೆಗೆಡಿಸುವಂತೆ ಅಲ್ಲಿಯೂ ಕಿಚಿಕಿಚಿ ; ಟುವಿಟ್ಟುವೂಯ ಉದಯ ರಾಗವನ್ನೂ ಹಾಡಿದುವು. ಮಸುಕು ಮಸುಕು ಬೆಳಕಾಯಿತು. ವಿಮಾನ ನಿಲ್ದಾಣದ ಬೈಠಕ್ ಖಾನೆಯಿಂದ ಹೊರ ಹೊರಟು ಬಸ್ಸುಗಳು ಬರುವೆಡೆಗೆ ಅಡ್ಡಾಡ ಹೋದೆವು. ಸುಮಾರು ಚಳಿಯಾಗುತ್ತ ಇತ್ತು. ಹೊಟ್ಟೆಯೂ ಹಸಿದಿತ್ತು. ನಿದ್ರೆಯೂ ಇದ್ದಿಲ್ಲ. ಆದುದರಿಂದ ಲವಲವಿಕೆ ಉಂಟಾಗಲಿ ಅಂತ ಬಿರಬಿರ ನಡೆದೆ. ರಸ್ತೆಯ ಎರಡೂ ಪಕ್ಕಗಳಲ್ಲಿ ದೊಡ್ಡ ದೊಡ್ಡ ಮರಗಳನ್ನು ವಾರಣವಾಗಿ ಬೆಳೆಸಿದ ತೋಟಗಳಿದ್ದುವು. ಕಿವಿಗೆ ಜನಿವಾರ ಸಿಕ್ಕಿಸಿಕೊಂಡು, ಆ ಮರಗಳ ಹತ್ತಿರ ಹೋಗಿ, ಬಂದೆ. ಹಿಂತಿರುಗಿ ನಿಲ್ದಾಣಕ್ಕೆ ಬಂದಾಗ ಅಲ್ಲಿನ ಕಾಫಿ ಹೋಟಲ್ ಬಾಗಿಲು ತೆಗೆದಿದ್ದರು. ಬಿಸಿ ಬಿಸಿ ಕಾಫಿ ಮಾರುತ್ತಿದ್ದರು. ರೂಪಾಯಿ ಇತ್ತು ಆದರೆ ರೂಬಲ್ ಇತ್ತಿಲ್ಲ. ರೂಬಲ್ ಇದ್ದ ತಂಡದ ಒಬ್ಬನ ಸೌಜನ್ಯದಿಂದ ಕಾಫಿ ಕುಡಿದೆ. ರೂಬಲ್ ಎಲ್ಲಿ ಸಿಕ್ಕಿತು ಎಂದು ಕೇಳಿದೆ. ಹೊರ ಅಂಗಳದಲ್ಲಿ ಹಣದ ಕೌಂಟರ್ ತೆರೆದಿದ್ದಾರೆ. ರೂಪಾಯಿಗೆ ಎರಡು ರೂಬಲ್ ಕೊಡುತ್ತಾರೆ ಅಂತ ಹೇಳಿದ. ನಾನೂ ಹೋಗಿ ರೂಪಾಯಿಗಳನ್ನು ರೂಬಲ್‌ಗಳಿಗೆ ಮಾರ್ಪಡಿಸಿಕೊಂಡೆ.

ಉದ್ದಾನೆ ಕಸಪರಿಕೆ ಹಿಡಕೊಂಡು ತಲೆಯಿಂದ ಕಾಲು ತನಕ ದಪ್ಪ ಉಡುಪು ಧರಿಸಿದ್ದ ಕಸಗುಡಿಸುವವರು ಓಡಾಡುತ್ತಲೇ ಕಸ ಗುಡಿಸುಕ್ಕೆ ಶುರು ಮಾಡಿದರು. ಸೂರ್ಯನೂ ಕಾಣಿಸಿಕೊಂಡ. ಬಸ್ಸುಗಳೂ ಬಂದುವು. ಎರಡು ಬಸ್ಸುಗಳ ತುಂಬಾ ಮದುವೆ ಮನೆ ಬೀಗರುಗಳ ತರಹ ತುಂಬಿಕೊಂಡೆವು. ಷಹರಿಗೆ ಹೋಗಲು ಹತ್ತು ಹದಿನಾರು ಮೈಲಿ ಪ್ರವಾಸವನ್ನು ಬಸ್ಸುಗಳು ಶುರು ಮಾಡಿದವು.

ನಿಲ್ದಾಣದಿಂದ ಷಹರಿಗೆ ಹೋಗುವ ಮಾರ್ಗದಲ್ಲಿ ರಸ್ತೆಯ ಎರಡೂ ಕಡೆಗಳಲ್ಲಿ ಏಳೆಂಟು ಹಳ್ಳಿಗಳು ಕಂಡುವು. ನಮ್ಮ ಹಳ್ಳಿಗಳಲ್ಲಿ ಇರುವ ಹಾಗೆಯೇ ಎಂಟು ಹತ್ತು ಮನೆಗಳು. ಕೆಲವು ಅಡಕವಾದ ಮಹಡಿ ಇರುವ ಮನೆಗಳು. ಮನೆ ಮುಂದೆ ಕೈ ತೋಟ. ಮನೆಗಳಿಗೂ ರಸ್ತೆಯಲ್ಲೂ ಕೂಡ ವಿದ್ಯುದ್ದೀಪಗಳು. ಆದರೆ ಸೋಜಿಗ ಕಂಡುದು ಸುಮಾರು ಮನೆಗಳ ಮೇಲೆ ಟೆಲಿವಿಷನ್ ಕಂಬಗಳು ! ರಷ್ಯಾದ ಹಳ್ಳಿಹಳ್ಳಿಗಳಲ್ಲೂ ಟೆಲಿವಿಷನ್ ಹರಡಿರುವಾಗ ನಮ್ಮ ಭಾರತದಲ್ಲಿ ಈಗ ತಾನೆ ದಿಳ್ಳಿಯೊಂದರಲ್ಲಿ ಟೆಲಿವಿಷನ್ ಪ್ರಸಾರವನ್ನು ಪ್ರಾಯೋಗಿಕ ಪರೀಕ್ಷಾರ್ಥವಾಗಿ ಆರಂಭಿಸಿದ್ದಾರೆ !

ಸ್ವಲ್ಪ ಯೋಚಿಸಿದಾಗ ಅರ್ಥವಾಯಿತು. ರಷ್ಯಾದಲ್ಲಿ ನಭೋಮಂಡಲದ ಅಭ್ಯಾಸಕ್ಕಾಗಿ ಸತತ ಪ್ರಯತ್ನ ನಡೆಸುತ್ತಿದ್ದಾರೆ. ಈ ಪ್ರಯತ್ನದಲ್ಲಿ ಟೆಲಿವಿಷನ್ ಮುಂದುವರೆಯು ವುದು ಅತ್ಯಗತ್ಯ. ಹಾಗಾಗಿ ಟೆಲಿವಿಷನ್ ತಯಾರಿಕೆಯು ಹೆಚ್ಚಾಗಿರಲೇ ಬೇಕು. ಅಂದಮೇಲೆ ಹಳ್ಳಿಹಳ್ಳಿಗೂ ಹರಡುವುದು ಸಹಜ. ಹಳ್ಳಿಗರಿಗೆಲ್ಲಾ ಬೇಕಾದ ಊಟ, ಬಯಸಿದ ತಿಂಡಿ ಸಿಗದೆ ಇರಬಹುದು : ಇಷ್ಟಪಟ್ಟ ಬಟ್ಟೆ, ಬೂಡ್ಸು ದೊರಕದೆ ಇರಬಹುದು, ಆದರೆ ಜುಟ್ಟಿಗೆ ಮಲ್ಲಿಗೆ ಇದ್ದಂತೆ ಮನೆ ಮೇಲೆ ಟೆಲಿವಿಷನ್ ಸ್ತಂಭಗಳು ಎದ್ದು ನಿಂತಿವೆ ಎನ್ನಿಸಿತು.

ದಾರಿಯಲ್ಲಿ ಅಲ್ಲಲ್ಲೇ ರೈತರು ಲಾರಿಗಳಲ್ಲಿ ಜಮೀನಿನ ಕಡೆಗೆ ಹೋಗುತ್ತಿದ್ದರು. ಎರಡು ಮೂರು ಹೆಣ್ಣಾಳುಗಳು, ನಾಲ್ಕಾರು ಗಂಡಾಳುಗಳು, ಆಪಾದಮಸ್ತಕ ಬಟ್ಟೆ ಧರಿಸಿ, ಆ ಛಳಿಯಲ್ಲೇ ಜಮೀನಿನ ಕೆಲಸಕ್ಕೆ ಹೊರಟಿದ್ದರು. ಸಹಕಾರ ಕೃಷಿ ಪದ್ಧತಿ ಇರಬೇಕು. ಹೋಗಿ ಬರುಕ್ಕೆ ಮೋಟಾರು ಲಾರಿ ! ತನ್ನ ಸ್ವಂತ ಜೇಬಿನಿಂದ ಖರ್ಚುಮಾಡಿ ಹೋಗಬೇಕಾಗಿದ್ದಲ್ಲಿ ಅಲ್ಲಿನ ರೈತ ಕೂಡ ನಮ್ಮವನಂತೆ ಪ್ರಾಯಶಃ ನಡೆದೇ ಹೋಗುತ್ತಿದ್ದ. ಜಮೀನಿನ ಹತ್ತಿರವೇ ಗುಡಿಸಿಲನ್ನೂ ಹಾಕಿಕೊಂಡು ವಾಸಿಸುತ್ತಿದ್ದ ಎನ್ನಿಸಿತು. ಆದರೆ ಗಂಡಸರ ಜತೆಗೂ ತೋಳು ಕೊಟ್ಟು ನಿಂತು ಜಮೀನಿನಲ್ಲಿ ಟ್ರಾಕ್ಟರ್ ನಡೆಸುವುದು, ಉಳುವುದು, ಇತ್ಯಾದಿಗಳನ್ನು ಹೆಂಗಸರೂ ಸಮ ಸಮ ಶ್ರಮವಹಿಸಿ ದುಡಿಯುತ್ತಿದ್ದರು. ನಮ್ಮಲ್ಲೂ ಹೆಂಗಸರು ಕೂಲಿ ಮಾಡುತ್ತಾರೆ. ಗಂಡು ಆಳು ಅಗೆದು, ಉತ್ತು, ನೀರು ಹಾಯಿಸಿ ಬಿತ್ತರೆ, ಹೆಣ್ಣು ಆಳು ಕಳೆ ಕೀಳುವುದು, ಫಸಲು ಕುಯ್ಲಾದಮೇಲೆ ಗಾಳಿ ಬಂದಾಗ ತೂರಿಕೊಳ್ಳುವುದು ಇತ್ಯಾದ ಸುಲಭ ಕೆಲಸವನ್ನು ಮಾಡುವುದು ವಾಡಿಕೆ.

ಗೋಡೆ ಕಟ್ಟುಕ್ಕೆ ನಮ್ಮಲ್ಲಿ ಗಂಡಾಳು ನಿಂತರೆ, ಇಟ್ಟಿಗೆ ಎತ್ತಿ ಕೊಡೋದೂ ಹೆಣ್ಣಾಳಿನ ಕೆಲಸ. ರಷ್ಯಾ ರೈತರಲ್ಲಿ ಈ ತೆರನ ಕೆಲಸದ ಹಂಚಿಕೆ ಕಂಡುಬರಲಿಲ್ಲ.

ರಸ್ತೆಯಲ್ಲಿ ಬಸ್ಸಿನಲ್ಲಿ ಹೋಗುವಾಗ ಪಕ್ಕದ ಹಳ್ಳಿಗಳಲ್ಲಿ ಕೆಲವು ನಿಮಿಷ ಕಂಡು, ಈ ರೀತಿ ಅಭಿಪ್ರಾಯ ಸೂಚಿಸುವುದು ಮಂಕುತನ ಅನ್ನುವುದು ನನಗೂ ತಿಳಿದಿದೆ. ಆದರೆ ಕಂಡಾಗ ನನ್ನ ಮನಸ್ಸಿನಲ್ಲಿ ತೋಚಿದ್ದನ್ನು ಬರೆದು, ಮುಂದೆ ಆದ ಅನುಭವಗಳಿಂದ ಖಂಡಿತ ಮಾಡಿಕೊಳ್ಳುವುದು, ಅಥವಾ ತಪ್ಪಾಗಿದ್ದರೆ ತಿದ್ದಿಕೊಳ್ಳುವುದು ಸರಿ, ಎನ್ನಿಸಿತು. ಆದುದರಿಂದ ಸಾಕ್ಷಾತ್ತಾಗಿ ವರದಿ ಒಪ್ಪಿಸುತ್ತಿದ್ದೇನೆ.

ಮಸ್ಕ್ವಾ ಮಹಾ ಪಟ್ಟಣದೊಳಗೆ ಹೋಗುವ ವೇಳೆಗೆ ರಸ್ತೆಗಳಲ್ಲಿ ಜನರ ಸಂಚಾರ ಶುರುವಾಗಿತ್ತು. ಲಾರಿಗಳಲ್ಲಿ 10-12 ಅಡಿ ಅಗಲ, 8-10 ಅಡಿ ಉದ್ದ, ಅರ್ಧ ಮುಕ್ಕಾಲು ಅಡಿ ದಪ್ಪದ ಸಿಮೆಂಟ್ ಚಪ್ಪಡಿಗಳನ್ನು ಸಾಗಿಸುತ್ತಿದ್ದರು. ಸಾಲು ಸಾಲಾಗಿ ಈ ಲಾರಿಗಳ ಮೆರವಣಿಗೆ ಸಾಗುತ್ತಿತ್ತು. ಅವುಗಳನ್ನೇ ಆಶ್ಚರ್ಯದಿಂದ ನೋಡುತ್ತಿದ್ದ ನನ್ನನ್ನು, ನಮ್ಮ ತಂಡದ ಸಹಾಯಕ್ಕೆಂದು ನೇಮಿತಳಾಗಿದ್ದ ಮಹಿಳಾ ಮಾರ್ಗದರ್ಶಿ ನೋಡಿದಳು. ನಂತರ ಬಳಿಗೆ ಬಂದು ಅಚ್ಚ ಇಂಗ್ಲಿಷಿನಲ್ಲಿ "ರಸ್ತೆಯ ಪಕ್ಕದಲ್ಲಿ ನೋಡಿ, 10-12 ಅಂತಸ್ತಿನ ಮನೆಗಳ ಕಬ್ಬಿಣದ ಆಧಾರ ಪಂಜರವನ್ನು, ಮೊದಲೇ ತಯಾರಿಸಿದ ಈ ಸಿಮೆಂಟ್ ಗೋಡೆಗಳನ್ನೂ ಕಟ್ಟಡದ ಪಂಜರಕ್ಕೆ ಜೋಡಿಸುತ್ತಾರೆ. ಹೀಗೆ ಕಟ್ಟುವುದರಿಂದ 400 ಸಂಸಾರಗಳು ವಾಸ ಮಾಡಬಹುದಾದ ದೊಡ್ಡ ಕಟ್ಟಡವನ್ನೂ ದಿನಕ್ಕೆ ಒಂದರಂತೆ ಕಟ್ಟಬಹುದು. ಈ ವರ್ಷ ಆಗಲೇ 8000 ಇಂತಹ ದೊಡ್ಡ ಕಟ್ಟಡಗಳನ್ನೂ ಕಟ್ಟಿಯಾಗಿದೆ. ಆದರೂ ಎಲ್ಲ ಜ[illegible]ಗೂ ಪ್ರತ್ಯೇಕ ಗೃಹಗಳು ಇನ್ನೂ ದೊರೆತಿಲ್ಲ." ಎಂದು ವಿವರಣೆ ಕೊಟ್ಟಳು. ನಮ್ಮ ದೇಶದಲ್ಲೂ ಪ್ರಿಫ್ಯಾಬ್ ಮನೆಗಳಿಗೆಂದು ಒಂದು ಕಾರ್ಖಾನೆಯನ್ನೇ ಕೋಟ್ಯಾಂತರ ರೂಪಾಯಿಗಳ ಬಂಡವಾಳ ಹಾಕಿ ಶುರು ಮಾಡಿದರು. ಆರಂಭಶೂರತ್ವ - ಕಡೆಗೆ ಕಾರ್ಖಾನೆಯ ಸ್ಥಾಪನೆಗೆ ಕಟ್ಟಡ ಸಿಗಲಿಲ್ಲ ಎಂದು ತಿಲ ತರ್ಪಣ ಬಿಟ್ಟರು - ಆ ಹೊತ್ತಿಗೆ 20-30 ಲಕ್ಷದಷ್ಟು ನಷ್ಟವಾಗಿತ್ತು, ಸರಕಾರಕ್ಕೆ ; ಎಂದು ಓದಿದ ಜ್ಞಾಪಕ.

ಊರಿನೊಳಗೆ ಸುಮಾರು 3-4 ಮೈಲಿಯಾದ ನಂತರ ನಾವು ಇಳಿದುಕೊಳ್ಳ ಬೇಕಾದ ಹೋಟೇಲ್ ಯುಕ್ರೇನ್ಯಾವನ್ನೂ ತಲುಪಿದೆವು.

25 ಅಂತಸ್ತುಗಳಿದ್ದ ಹೊಸದಾಗಿ ಕಟ್ಟಲ್ಪಟ್ಟ ಭಾರಿ ಹೋಟೇಲು.

2500 ಜನರು ಏಕ ಕಾಲದಲ್ಲಿ ಅಲ್ಲಿ ವಾಸಿಸಲು ಎಲ್ಲಾ ಅನುಕೂಲಗಳನ್ನೂ ಮಾಡಿದ್ದರು. ಎರಡು ದೊಡ್ಡ ಊಟದ ವಠಾರಗಳು, 500 ಜನರು ಒಂದೊಂದರಲ್ಲಿಯೂ ಒಟ್ಟಿಗೆ ಪಾಶ್ಚಾತ್ಯ ರೀತಿಯಲ್ಲಿ ಊಟ ಮಾಡಬಹುದು. ಇವಲ್ಲದೆ ಸಣ್ಣ ಪುಟ್ಟ ಊಟದ ಹಜಾರಗಳು. 25ನೇ ಅಂತಸ್ತಿನ ಮೇಲೆ ಪಾನೀಯ ಗೃಹ. ಅಲ್ಲಿಯೂ ಊಟ ಒದಗಿಸುತ್ತಾರೆ. ಅಲ್ಲಿಂದ ಮಾಸ್ಕೋ ನಗರವನ್ನೆಲ್ಲಾ ನೋಡಬಹುದು.

ಆರನೆ ಅಂತಸ್ತಿನ ತನಕ ಹೋಗುವವರಿಗಾಗಿ ಆರು ಎತ್ತೇಣಿಗಳು ಒಂದು ಕಡೆ. ಆರನೆ ಮಹಡಿಯಿಂದ ಮೇಲಕ್ಕೆ ಹೋಗುವವರಿಗಾಗಿ ಇನ್ನೂ ಆರು ಎತ್ತೇಣಿಗಳು ಎದುರುಗಡೆ. ಹೀಗೆ ಲಿಫ್ಟ್ ಸೌಕರ್ಯ.

ಹೋಟೆಲಿಗೆ ಹೋಗುತ್ತಿದ್ದ ಹಾಗೆಯೇ ದೊಡ್ಡ ಅಂಗಳ. 500-600 ಜನ ಅಲ್ಲಿ ಕೂರಬಹುದು, ಅಷ್ಟು ವಿಶಾಲವಾದುದು. ಆದರೆ ಅಲ್ಲಿ 4 ಸೋಫಾ. ಇದೇಕೆ ಹೀಗೆ ? ಎಂದು ನಮ್ಮ ಗೈಡ್ ಮಹಿಳೆಯನ್ನು ಕೇಳಿದಾಗ ತುಂಬಾ ಕುರ್ಚಿ ಸೋಫಾಗಳನ್ನು ಹಾಕಿ ಅನುಕೂಲಮಾಡಿ ಕೊಟ್ಟರೆ, ಪ್ರವಾಸಿಗರೆಲ್ಲಾ ಇಲ್ಲೇ ಕೂತು ಸಂತೆ ಎಬ್ಬಿಸಿಬಿಡುತ್ತಾರೆ. ಅವರ ಕೆಲಸ ಮುಗಿದ ಮೇಲೆ ಇಲ್ಲಿರಬಾರದು ಎಂದೇ ಈ ವ್ಯವಸ್ಥೆ ಎಂದಳು. ಜಾಣರು ಅನ್ನಿಸಿತು, ಅರ್ಧಗಂಟೆ ಅಲ್ಲಿ ಕಾದು ನಿಂತಾಗ ಕಾಲು ನೋವುತ್ತಾ ಇದ್ದರೂನೂ. ಕಡೆಗೆ 13ನೇ ಮಹಡಿಯ ಒಂದನೇ ನಂಬರ ಕೊಠಡಿ ನನ್ನದು ಎಂದು ಹೇಳಿದರು. ಎತ್ತೇಣಿಯ ಬಳಿಗೆ ಹೋಗಿ ಸ್ವಲ್ಪ ಹೊತ್ತು ಕಾದು ಕಡೆಗೆ ಮೀಸಲಾದ ಕೊಠಡಿಗೆ ಹೋದೆ.

ಭವ್ಯವಾದ ಕೊಠಡಿ. ಭಾರಿ ಮಂಚ. ಅದುಮಿದರೆ ಅರ್ಧ ಅಡಿ ಗುಳಿ ಬೀಳುವಂತಹ ಸುಪ್ಪತ್ತಿಗೆ. ಎರಡು ಅಡಿ ಅಗಲ, ಎರಡು ಅಡಿ ಉದ್ದ ಅರ್ಧ ಅಡಿ ದಪ್ಪದ, ಎರಡು ಚಚೌಕ ದಿಂಬುಗಳು. ನೋಡಿದರೇ ಬೆಚ್ಚಾಗುವಂತಹ ರಗ್ಗು, ಮಗ್ಗಲು ಹಾಸಿಗೆ. ಕೊಠಡಿಯ ಒಂದು ಪಕ್ಕದಲ್ಲಿ ಬರೆಯುವ ಮೇಜು, ಕುರ್ಚಿ, ಕಾಗದ ಇತ್ಯಾದಿ. ಕೊಠಡಿಗೆ ಸೇರಿದಂತೆ ಸ್ನಾನ ಶೌಚದ ಕೊಠಡಿ, ಬಿಸಿ ನೀರು, ತಣ್ಣೀರಿನ ನಳಗಳು, ದಿನಾಲೂ ಬದಲಾಯಿಸಲ್ಪಡುತ್ತಿದ್ದ 2 ಟವಲುಗಳು, ಒಂದು ಸ್ನಾನಕ್ಕೆ, ಒಂದು ಮುಖ ಒರೆಸಿಕೊಳ್ಳುಕ್ಕೆ. ರೇಡಿಯೋ ಮತ್ತು ಟೆಲಿವಿಷನ್ ಸೌಕರ್ಯ !

ಹುಟ್ಟಿದಾಗಿನಿಂದಲೂ, ಈ ಸುಖ ಸೊಬಗು ಶ್ರೀಮಂತಿಕೆ ಕಂಡಿದ್ದಿಲ್ಲ, ಅತ್ತೆ ಮನೆ ಸೌಕರ್ಯವೂ ಅಷ್ಟಕ್ಕಷ್ಟೇ ! ಇದರ ಎದುರಿಗೆ. ಪರ ಊರಿನವರು ಬಂದರೆ, ಒಳ್ಳೆಯ ಅಭಿಪ್ರಾಯ ಹೊಂದಲಿ ಎಂದೇ ಇಷ್ಟೆಲ್ಲಾ ಮಾಡಿರಬೇಕು ಎಂದು ನನ್ನ ಕುಹಕ ಬುದ್ಧಿಗೆ ಅನ್ನಿಸಿತು.

ಪ್ರಾತಃವಿಧಿಗಳನ್ನು ತೀರಿಸಿಕೊಂಡು, ಉಡುಪು ಬದಲಾಯಿಸಿ ಕೆಳಗಿಳಿದು ಬಂದೆ. ತಂಡದವರೆಲ್ಲರೂ ಸಿದ್ಧವಾಗಿದ್ದರು. ರಷ್ಯನ್ ಗೈಡ್ ಮಹಿಳೆಯೂ ಬಸ್ಸೂ ಹೊರಡಲು ಅಣಿಯಾಗಿದ್ದರು. ಆಸ್ಪತ್ರೆಯ ಭೇಟಿಗೆ ಹೊರಟೆವು.

ಮಸ್ಕ್ವಾದಲ್ಲಿ ದೊಡ್ಡ ಆಸ್ಪತ್ರೆಗಳಲ್ಲಿ ಅದೊಂದು 1200 ಜನ ರೋಗಿಗಳಿಗೆ ಮೀಸಲಾಗಿದ್ದ ಆಸ್ಪತ್ರೆ. 130 ವೈದ್ಯರು ಅಲ್ಲಿ ಸೇವೆ ಸಲ್ಲಿಸುತ್ತಿದ್ದರು. ಶಸ್ತ್ರಚಿಕಿತ್ಸೆ ಮೊದಲುಗೊಂಡು ಎಲ್ಲಾ ವೈದ್ಯಕೀಯ ನೆರವೂ ಅಲ್ಲಿ ಏರ್ಪಾಡಾಗಿತ್ತು. ಈ ಆಸ್ಪತ್ರೆಯಲ್ಲಿ ಸಮ ಸಮ ಗಂಡು ಹೆಣ್ಣು ವೈದ್ಯರುಗಳು. ಷಹರಿನ ಅಪಘಾತಗಳಿಗೂ ಮೀಸಲಾಗಿದ್ದ ಈ

ಆಸ್ಪತ್ರೆಯಲ್ಲಿ ಗಂಡು ಡಾಕ್ಟರುಗಳು ಹೆಚ್ಚಾಗಿದ್ದಾರೆ ಎಂದು ತಿಳಿಸಿದರು. ರಿಸರ್ಚ್ ವಿಭಾಗವೂ ಚಟುವಟಿಕೆಯಿಂದ ನಡೆಯುತ್ತಿತ್ತು..

ನಮ್ಮ ಆಸ್ಪತ್ರೆಗಳಲ್ಲಿ ದೈನಂದಿನ ಮಾಮೂಲು ಕೆಲಸ ಮಾಡುವುದಕ್ಕೇ ವ್ಯವಧಾನವಿಲ್ಲ. ಇನ್ನು ಓದಿ, ವ್ಯಾಸಂಗ ಮಾಡಿ, ಮನನ ಮಾಡಿ, ರಿಸರ್ಚ್ ಮಾಡಬೇಕಾದರೆ ಹೊತ್ತೇ ಸಿಗುವುದಿಲ್ಲ. ಹಾಗಿರುವಾಗ ಇಲ್ಲಿನ ಆಸ್ಪತ್ರೆಯಲ್ಲಿ ರಿಸರ್ಚ್ ವಿಭಾಗ ಪ್ರಗತಿಯನ್ನು ಹೇಗೆ ಹೊಂದಿತು ಎಂದು ಅನುಮಾನ ಬಂತು. ಇಂಗ್ಲೀಷ್ ಮಾತಾಡುತ್ತಿದ್ದ ಒಬ್ಬ ರಷ್ಯನ್ ಡಾಕ್ಟರನ್ನು ಹಿಡಿದು ಕೇಳಿಯೇಬಿಟ್ಟೆ. ಆತ ಹೇಳಿದ, ನಮ್ಮ ಆಸ್ಪತ್ರೆಗಳಲ್ಲಿ ವೈದ್ಯರ ಸಂಖ್ಯೆ ಹೆಚ್ಚು. ಹಾಗಾಗಿ ವೈದ್ಯನು 6–7 ಗಂಟೆ ಕೆಲಸ ಮಾಡಿದ ಮೇಲೆ, ಇನ್ನೊಬ್ಬನಿಗೆ ಅವಕಾಶ ಕೊಟ್ಟು ಹೊರಟುಹೋಗಬೇಕು. ಹೋಗಿ ಏನು ಮಾಡ್ತಾನೆ ? ಮನೆಗೆ ಹೋದರೆ ಹೆಂಡತಿ ಮಕ್ಕಳು ಕೆಲಸಕ್ಕೆ ಅಥವಾ ಶಾಲೆಗೆ ಹೋಗಿರುತ್ತಾರೆ. ಕ್ಲಬ್ಬಿಗೆ ಹೋಗಿ ಇಸ್ಪೀಟ್ ಆಡಬೇಕು ಅಥವಾ ವೃಥಾ ಕಾಲಹರಣ ಮಾಡಬೇಕು. ಅದಕ್ಕಾಗಿಯೇ ಸುಮಾರು ವೈದ್ಯರು ರಿಸರ್ಚ್ ವಿಭಾಗಕ್ಕೆ ಹೋಗಿ ತಮಗೆ ಅಭಿರುಚಿಯಿದ್ದ ವಿಷಯವನ್ನು ಅಭ್ಯಾಸ ಮಾಡುತ್ತಾರೆ. ಆದುದರಿಂದಲೇ ನಮ್ಮಲ್ಲಿ ರಿಸರ್ಚ್ ಪ್ರಗತಿ ಸಾಧಿಸಿದೆ ಎಂದ. ಹಾಗೂ ರಿಸರ್ಚ್ ವಿಭಾಗದಲ್ಲಿ ಕೆಲಸ ಮಾಡುವಾಗ, ಇಂತಹ ಯಂತ್ರೋಪಕರಣ ಬೇಕು ಎನ್ನಿಸಿದರೆ, ''ಹೀಗೆ ಈ ಪ್ರಯೋಗ ಪರೀಕ್ಷೆಗೆ ಇಂತಹ ಯಂತ್ರೋಪಕರಣ ಅಗತ್ಯ. ಅಮೆರಿಕಾ ಮತ್ತು ಯೂರೋಪಿನ ಆಸ್ಪತ್ರೆಗಳಲ್ಲಿ ಈ ಸೌಕರ್ಯ ಇದೆ,'' ಎಂದು ಮೇಲಧಿಕಾರಿಗಳಿಗೆ ತಿಳಿಸಿದರೆ, ಪೈಪೋಟಿಯ ಉದ್ದೇಶದಿಂದಲಾದರೂ ಆ ಅಧಿಕಾರಿಗಳು ಆ ಯಂತ್ರೋಪಕರಣಗಳನ್ನೂ ಒದಗಿಸುತ್ತಾರೆ'' ಎಂದು ಹೇಳಿದ. ಸ್ವಲ್ಪ ಮುಗುಮ್ಮಾಗಿ ನಗುತ್ತಾ, ನನ್ನ ಬೆನ್ನು ತಟ್ಟುತ್ತಾ.

ರಷ್ಯನ್ ಡಾಕ್ಟರೂ ಕೇವಲ ನಮ್ಮ ಹಾಗೆಯೇ !

# ಮಾಸ್ಕೋದಲ್ಲಿ ನಟಾಷಾ !

ಆಸ್ಪತ್ರೆಯನ್ನು ನೋಡಿಕೊಂಡು ಅಲ್ಲಿನ ಡಾಕ್ಟರುಗಳೊಡನೆ ಆದರದ ಮಾತುಕತೆಗಳನ್ನಾಡಿ, ಅವರು ನಡೆಸುತ್ತಿದ್ದ ಪ್ರಯೋಗಗಳನ್ನು ಅರಿತು ನಾವು ನಮ್ಮ ದೇಶದಲ್ಲಿ ಯಾವ ಯಾವ ಪ್ರಯೋಗಗಳನ್ನು ನಡೆಸುತ್ತಿದ್ದೇವೆಂಬುದನ್ನು ಅವರಿಗೆ ತಿಳಿಸಿ, ಹಿಂತಿರುಗಿ ಬಸ್ಸಿಗೆ ಬಂದು ಕುಳಿತಾಗ ಸುಮಾರು 12-20 ಗಂಟೆಯಾಗಿತ್ತು. ನಮ್ಮ ವಾಹನದಲ್ಲಿ ಸುಮಾರು ಮೂವತ್ತು ಜನ ಭಾರತೀಯ ವೈದ್ಯರಿದ್ದೆವು. ನಾನು ಕುಳಿತಿದ್ದ ಕಡೆಯ ಸಾಲಿನಲ್ಲಿ ಐವರಿದ್ದೆವು. ಎದುರಿಗೆ ಮುಂದಿನ ಸಾಲಿನಲ್ಲಿ ಹೊಸ ಹೆಣ್ಣು ಮುಖವೊಂದು ಕಾಣಿಸಿತು.

ನಮ್ಮೂರ ಹುಡುಗಿಯರ ಮುಖವಲ್ಲ. ಬೆಳದಿಂಗಳಿಂದ ತುಂಬಿದ್ದ ಹಾಲು ಮುಖ. ತೆಳ್ಳನೆ ಆಯಕಟ್ಟು. ಕಿರುನಗೆ ನಕ್ಕಾಗ ಬಸ್ಸಿನ ಸೂರಿಗೆಲ್ಲಾ ಬೆಳದಿಂಗಳು ಹರಡುತ್ತಿತ್ತು. ನೋಡಿದ ಕಣ್ಣುಗಳಿಗೆ ತಂಪು ಗಾಣುತ್ತಿತ್ತು. ಪ್ರಾಯ 18-20 ಇರಬಹುದು.

ನನ್ನ ಪಕ್ಕದಲ್ಲಿ ಪಂಜಾಬಿನ ವೈದ್ಯರೊಬ್ಬರು ಕುಳಿತಿದ್ದರು. ಆತನಿಗೆ ಸುಮಾರು 35-40ರ ಪ್ರಾಯ. ಐದೂವರೆ ಅಡಿ ಎತ್ತರದಾತ. ಅಷ್ಟೇ ಅವನ ಸುತ್ತಳತೆಯೂ ಕೂಡ. ಸಾಕಷ್ಟು ಧಡಿಯ ಅನ್ನಿ!

ಕುಲು ಕುಲು ನಗುತ್ತಾ ಅವನು ಎದುರು ಕುಳಿತಿದ್ದ ಯುವತಿಯ ಕೈ ಹಿಡಿದು ಹಸ್ತ ಸಾಮುದ್ರಿಕ ಹೇಳಲು ಶುರು ಮಾಡಿದ.

''ಎಲ್ಲರನ್ನೂ ಪ್ರೀತಿಸುವ ಸ್ವಭಾವ ನಿಮ್ಮದು'' ಎಂದ.

ನನಗೆ ಗಾಭರಿಯಾಯ್ತು. ಹೊರ ದೇಶದ ಹುಡುಗಿಯೆದುರಿಗೆ ಇವನೇನಾದರೂ ಆಭಾಸದ ಭವಿಷ್ಯ ನುಡಿದರೆ, ನಮ್ಮ ದೇಶಕ್ಕೆ ಅಪಕೀರ್ತಿ ಬರಬಹುದು ಎನ್ನಿಸಿತು. ಹುಡುಗಿಯ ಮನಸ್ಸೂ ನೋವಾಗಬಹುದು ಎನ್ನಿಸಿತು. ಆದಕಾರಣ ತಕ್ಷಣ ಆಕೆಯ ಬಲಗೈಯನ್ನು ಅವನ ಕೈಗಳಿಂದ ಬಿಡಿಸಿ ನನ್ನ ಅಂಗೈಯಲ್ಲಿಟ್ಟುಕೊಂಡು,

"ತಮ್ಮಾ! ಇದು ಕಲಾರಾಧಕರ, ಆತ್ಮವರಿಯುವ ದಾರ್ಶನಿಕರ ಹಸ್ತ! ಕಾರ್ಮಿಕರ ಹಸ್ತದಲ್ಲಿ ಇಂತಹ ಅದೃಷ್ಟ ರೇಖೆ ಇದ್ದರೆ ಎಲ್ಲರನ್ನು ಪ್ರೀತಿಸುವ ಸ್ವಭಾವ ಎಂದು ಹೇಳಬಹುದು. ಆದರೆ ದಾರ್ಶನಿಕರ ಹಸ್ತದಲ್ಲಿ ಈ ತೆರನ ಅದೃಷ್ಟ ರೇಖೆಯನ್ನು ಬೇರೆ ತರಹ ಅರ್ಥ ಮಾಡಿಕೊಳ್ಳಬೇಕು"ಎಂದು ಹೇಳಿದೆ.

ಪಂಜಾಬಿ ವೈದ್ಯ ಮುಖದಲ್ಲಿ ಬೆವರಿಳಿಸುತ್ತಾ ಸುಸ್ತು ಹೊಡೆದ. ಸೋಲನ್ನು ಒಪ್ಪಿಕೊಂಡಂತೆ ಒರಗಿ ಕೂತುಕೊಂಡ.

ಧೈರ್ಯದಿಂದ ನಾನು ಮುಂದುವರೆದೆ.

"ಮಗಳೇ ! ನೀನಾರೋ ನಾನರಿಯೆ ! ಆದರೆ ಅಪಕ್ವ ವಿದ್ಯೆಯಿಂದ ಈ ತಮ್ಮ ಹೇಳೋದನ್ನು ಕೇಳಲಾರದೆ ನಾನು ಕೈ ಹಾಕಬೇಕಾಯ್ತು.

"ನಿನ್ನದು ದಾರ್ಶನಿಕರ ಕಲಾರಾಧಕರ ಹಸ್ತ. ಅಂದ ಮೇಲೆ ಯೋಚನೆ ಮಾಡಿ, ಆಗುಹೋಗುಗಳನ್ನು ಲೆಕ್ಕ ಹಾಕಿ ಬಾಳಿ ಬದುಕುವ ಲಭ್ಯವಿಲ್ಲ. ಮನಸ್ಸಿಗೆ ತೋಚಿದ್ದನ್ನು ತುಂಬೆದೆಯಿಂದ ಮಾಡಿ ನರಳುತ್ತಾ, ಬಾಳಿನಲ್ಲಿ ಎಲ್ಲರಂತಿರದೆ ಮನಸ್ಸಿನಲ್ಲೇ ಮಂಡಿಗೆಯನ್ನು ಮೆಲ್ಲುವ ಸ್ವಭಾವ ನಿನ್ನದು. ಅದೇ ನಿನ್ನ ಹುಟ್ಟು ಗುಣ" ಎಂದೆ. ಕತ್ತೆತ್ತಿ ಆವಳ ಮುಖವನ್ನು ನೋಡಿದೆ. ಆ ಹುಡುಗಿಯು ನನ್ನನ್ನೇ ದುರುಗುಟ್ಟುತ್ತ ನೋಡುತ್ತಿದ್ದಳು. ತಲೆಯೆತ್ತಿದಾಗ ನನ್ನ ಮುಖವನ್ನು ನೋಡಿ ಕ್ಷಣಾರ್ಧದಲ್ಲಿ ಮಂದಹಾಸವನ್ನು ಬೀರಲು ಯತ್ನಿಸಿದಳು. ಅಷ್ಟೆ! ಯತ್ನಿಸಿದಳು. ಕಾತುರತೆಯಿಂದ "ಸಂಸಾರ ಜೀವನ ಹೇಗೆ ನೋಡಿ ಹೇಳಿ" ಎಂದಳು. ಆ ವಯಸ್ಸಿನಲ್ಲಿ ಹುಡುಗಿಯರಿಗೆಲ್ಲಾ ಮುಂದಿನ ಮದುವೆ ಯೋಚನೆಯೇ ಸಹಜವಲ್ಲವೇ ! ಅದಕ್ಕೇ ಹುಡುಗಿಯ ಮುಖ ನೋಡಿ ನನಗೆ ಅಯ್ಯೋ ! ಎಂದೆನಿಸಿತು. ಆಕೆಯನ್ನು ಸಂತೋಷಪಡಿಸೋಣ ಎಂದೂ ಬಲವತ್ತರವಾದ ಆಸೆ ತೋರಿತು.

ಅವಳ ಅಂಗೈಯನ್ನು ಹಿಗ್ಗಲಿಸಿ ನನ್ನ ಎಡ ಅಂಗೈಯಲ್ಲಿ ಹಿಡಿದು ಬಲಗೈ ತೋರಬೆರಳಿಂದ ರೇಖೆಗಳನ್ನು ತೋರಿಸುತ್ತಾ ನಾನಂದೆ.

"ನೋಡು ! ಮಗಳೆ ! ನಿನ್ನ ಬುದ್ಧಿರೇಖೆಯು ಚಂದ್ರನ ಗುಡ್ಡದ ತನಕ ಹರಿದು ಹೋಗಿದೆ. ಅಂದಮೇಲೆ, ನಿನ್ನ ಜಾಣತನವು ಅಸಾಧಾರಣವಾದುದು. ಮಿಕ್ಕವರು ಮೂರು ತಾಸುಗಳಲ್ಲಿ ತಿಳಿಯುವುದನ್ನು ನೀನು ಮೂರೇ ನಿಮಿಷಗಳಲ್ಲಿ ಅರ್ಥ ಮಾಡಿಕೊಳ್ಳುತ್ತೀ ! ಲೋಕ ಪ್ರಸಿದ್ಧ ಕವಿಯಾಗುವ ಪ್ರತಿಭೆಯನ್ನು ಈ ರೇಖೆ ಸೂಚಿಸುತ್ತದೆ" ಎಂದು ತಲೆಯೆತ್ತಿ ನೋಡಿದೆ.

ಆಕೆಯ ಮುಖ ಅರಳಿತ್ತು. ಕಿವಿಯಿಂದ ಕಿವಿ ತನಕ ನಗು ಹರಡಿತ್ತು. ಅರುಂಧತಿಯ ಕಾಲದಿಂದ ರೂಪವತಿಯನ್ನು ನೀನು ಜಾಣೆ ಅಂದರೆ ಯಾವ ಹೆಣ್ಣು ತಾನೆ ಹಿಗ್ಗಲ್ಲ!!

ಧೈರ್ಯ ಬಂತು. ತಿರುಗಿ ಅಂಗೈ ಕಡೆ ನೋಟ ಹರಿಸಿದೆ. ಹೇಳಿದೆ. ''ಆದರೆ ನೋಡು ! ದಾಂಪತ್ಯ ರೇಖೆಗೆ, ಬುದ್ಧಿ ರೇಖೆಯಿಂದ ಕವಲೊಡೆದ ತೆಳ್ಳನೆ ರೇಖೆಯೊಂದು ಅಡ್ಡ ಬಂದಿದೆ. ಒಲವಿನಿಂದ ಮದುವೆಯಾಗಬಯಸಿದರೂ, ಬುದ್ಧಿಯು ಬೇಡವೆಂದು ಹೇಳುತ್ತದೆ. ಆದರೆ ಬುದ್ಧಿಯ ಮಾತಿಗೆ ಹ್ಲೂಗೊಡಬೇಡ. ಎದೆ ಹೇಳಿದಂತೆ ಮಾಡು ! ಸ್ವಲ್ಪ ದಿನ ಕಷ್ಟಗಳು ಮುತ್ತಬಹುದು. ಆದರೆ ಆಮೇಲೆ ಬಲುಕಾಲ ಬಲು ಸುಖವಾದ ಜೀವನಮಾಡಬಹುದು'' ಎಂದು ಹೇಳಿದೆ.

ಅಷ್ಟು ಹೊತ್ತಿಗೆ ಬಸ್ಸು ನಮ್ಮ ಹೋಟಲನ್ನು ತಲುಪಿತು. ಎಲ್ಲರೂ ಇಳಿದು ನಮ್ಮನಮ್ಮ ಕೊಠಡಿಗೆ ಹೋದೆವು. ಬೇಗಬೇಗ ಉಡುಪು ಬದಲಾಯಿಸಿ ಊಟಕ್ಕೆ ಹೋಗದೆ ಇದ್ದರೆ, ಊಟವೇ ಸಿಗಲಾರದು ಎಂಬ ಭಯವಿದ್ದುದರಿಂದ ಅವಸರ ಪಡುತ್ತಲೇ ಇದ್ದೆವು.

* * * *

ಮಧ್ಯಾಹ್ನವೆಲ್ಲಾ ಪಟ್ಟಣ ಪ್ರದಕ್ಷಿಣೆ ಹಾಕಿ ರಷ್ಯನ್ ಗೆಳೆಯರಿತ್ತ ಸೌಹಾರ್ದ ಕೂಟದಲ್ಲಿ ಭಾಗವಹಿಸಿ, ತಿರುಗಿ ನಮ್ಮ ಹೋಟಲಿಗೆ ಬಂದಾಗ ರಾತ್ರಿ ಎಂಟು ಗಂಟೆಯಾಗಿತ್ತು. ಸುಸ್ತು ಬಡಿದುಹೋಗಿದ್ದೆ. ದಿಂಬೊಂದನ್ನು ಕೊಟ್ಟರೆ ಇದ್ದಲ್ಲೇ ಬಿದ್ದುಕೋತೀನಿ ಎನ್ನುವಷ್ಟು ಬಳಲಿದ್ದೆ.

ಹದಿಮೂರನೇ ಮಹಡಿ ಹತ್ತಿ ಹೋಗಿ, ಕೈಕಾಲು ತೊಳೆದುಕೊಂಡು ಊಟಕ್ಕೆ ಬರುವುದರ ಬದಲು ಎರಡನೇ ಮಹಡಿಯಲ್ಲಿದ್ದ ಭೋಜನದ ಅಂಗಳದಲ್ಲಿ ಊಟ ಮಾಡಿಬಿಟ್ಟೇ ಕೊಠಡಿಗೆ ಹಿಂದಿರುಗೋಣ ಎಂದುಕೊಂಡೆ. ಸುಸ್ತು ಬಡೆದ ಬ್ರಾಹ್ಮಣನಿಗೆ ತರಕಾರಿಗಳನ್ನು ಎಷ್ಟೇ ಚೆನ್ನಾಗಿ ಬೇಯಿಸಿ, ಅಂದವಾಗಿ ಬಡಿಸಿದರೂ ಕೂಡ, ನಮ್ಮೂರ ಮಸಾಲೆ ಇಲ್ಲದೆ ಇದ್ದರೆ ಸ್ವಲ್ಪ ಪೆಚ್ಚೆ ! ಹೊರವಾಗಿ ಬೆಳೆದ ಬಡಿಸುತ್ತಿದ್ದ ಹೆಣ್ಣು ಮಕ್ಕಳ ಒತ್ತಾಯಕ್ಕಾದರೂ ತಿನ್ನಲೇಬೇಕಾಯ್ತು. ಹೇರಳವಾಗಿ ಕೊಟ್ಟ ಹಣ್ಣುಗಳನ್ನು ಕಬಳಿಸಿದೆ. ನಂತರ ಹದಿಮೂರನೆ ಮಹಡಿಯತ್ತ ಎತ್ತೇಣಿಯನ್ನು ಹತ್ತಿದೆ.

ಹದಿಮೂರನೆ ಮಹಡಿ ಸಿಕ್ಕಿತು. ಎತ್ತೇಣಿಯು ನಿಂತಿತು. ಬಾಗಿಲು ತೆರೆದಾಗ ನಾನು ಹೊರಬಿದ್ದೆ. ಮಧ್ಯದಲ್ಲಿ ಒಂದು ಪುಟಾಣಿ ತೊಟ್ಟಿ, ನಾಲ್ಕಾರು ಕುರ್ಚಿಗಳು ಇರುತ್ತವೆ. ಆ ತೊಟ್ಟಿಯಿಂದ ನಾಲ್ಕೂ ದಿಕ್ಕುಗಳಿಗೆ ನಾಲ್ಕು ಉದ್ದಾನೆ ಪಡಸಾಲೆಗಳು ಪಸರಿಸುತ್ತವೆ. ಅವುಗಳಲ್ಲಿ ಹೋದರೆ ಎರಡೂ ಕಡೆಗಳಲ್ಲಿ ಕೊಠಡಿಗಳಿರುತ್ತವೆ. ಪುಟಾಣಿ ತೊಟ್ಟಿಯಲ್ಲಿ ಯಾವಾಗಲೂ ಒಬ್ಬಾಕೆಯು ಹಾಜರಿ ಇರುತ್ತಾಳೆ. ಕೊಠಡಿ ಬೀಗದ ಕೈಯನ್ನು ಅವಳ ಹತ್ತಿರವೇ ಕೊಟ್ಟು ಹೊರಗೆ ಹೋಗೋದು. ಕಳ್ಳನ ಕೈಲಿ ಗಂಟು ಕೊಟ್ಟಹಾಗೇ ! ಹಿಂದಿರುಗಿದಾಗ ಆಕೆಯ ಬಳಿ ಬೀಗದ ಕೈ ವಾಪಸು ಪಡೆದು ನಮ್ಮ ಕೊಠಡಿ ಸೇರಿಕೊಳ್ಳುವ ಕ್ರಮ.

ಜೀಗದ ಕೈ ಪಡೆಯಲು ಮೇಜಿನ ಬಳಿಗೆ ಹೋದೆ. ಹಾಜರಿ ಇದ್ದ ಆಕೆಯು ಜೀಗದ ಕೈ ಕೊಟ್ಟಾಗ, ತೊಟ್ಟಿಯ ಕುರ್ಚಿಗಳ ಮೇಲೆ ಕುಳಿತಿದ್ದ ಒಬ್ಬ ಸ್ತ್ರೀಯು ಕೋಕಿಲ ಕಂಠದಿಂದ ''ಮಾವಾ !'' ಅಂತ ಕರೆಯುತ್ತಾ ಮೇಜಿನ ಬಳಿಗೆ ಬಂದಳು. ಯಾರನ್ನು ಕರೆಯುತ್ತಾಳೋ ಅಂತ ಸುತ್ತ ನೋಡಿದೆ. ನಾನೊಬ್ಬನೇ ! ಇನ್ನೂ ಯಾರೂ ಇತ್ತಿಲ್ಲ. ಕೂಗಿದಾಕೆಯ ಕಡೆ ನೋಡಿದೆ. ಎಲ್ಲೋ ನೋಡಿದ ಮುಖ. ದಿನಬೆಳಗಾದರೆ ರಾತ್ರಿ ಮಲಗುವ ತನಕ ಹತ್ತಾರು ಹೊಸ ಮುಖಗಳನ್ನು ಕಾಣುವ ದಿನಚರಿ. ಅಂದಮೇಲೆ ಬೇಗ ಗುರ್ತು ಸಿಗಲಿಲ್ಲ.

''ಜ್ಞಾಪಕ ಬರಲಿಲ್ಲವೇ ! ಮಾಮಾ ! ಬೆಳಿಗ್ಗೆ ಆಸ್ಪತ್ರೆಯಿಂದ ನಿಮ್ಮ ಜತೆಯಲ್ಲೇ ಬರಲಿಲ್ಲವೇ !'' ಎಂದು ಕೇಳಿದಳು.

ಓಹೋ ! ಹಸ್ತಸಾಮುದ್ರಿಕದ ಹುಡುಗಿ ! ದಿಟ್ಟಿಸಿ ನೋಡಿದೆ. ಅವಳೇ !

''ಚೆನ್ನಾಗಿ ನೆನಪಿದೆ. ಇಲ್ಲೇ ಇದೀಯಾಮ್ಮಾ ಕೊಠಡಿ ನಂಬರು ಯಾವುದು ? ಅಪ್ಪ ಅಮ್ಮ ಕೂಡ ಇಲ್ಲೇ ಇದಾರೆಯೇ ?'' ಎಂದು ಕೇಳಿದೆ.

''ಮೆಡಿಕಲ್ ಕಾಲೇಜಿನ ಹಾಸ್ಟಲಲ್ಲಿ ನಾನಿರೋದು. ನಾಲ್ಕನೇ ವರ್ಷದ ವ್ಯಾಸಂಗ ಮಾಡುತ್ತಿದ್ದೇನೆ. ನಿಮ್ಮನ್ನು ಭೇಟಿಯಾಗಬೇಕೆಂದೇ ಇಲ್ಲಿಗೆ ಬಂದು ಕಾಯುತ್ತ ಕುಳಿತ.'' ಎಂದಳು ಆ ಹುಡುಗಿ.

''ಬಾಮ್ಮ ಹಾಗಾದರೆ ! ಏನು ವಿಚಾರ ಕೇಳಬೇಕಿತ್ತು,'' ಎಂದು ಹೇಳುತ್ತಾ ಕುರ್ಚಿಯ ಬಳಿಗೆ ಹೆಜ್ಜೆ ಹಾಕಿದೆ.

''ನಿಮ್ಮ ಕೊಠಡಿಗೆ ಹೋಗೋಣ. ಅಲ್ಲೇ ಮಾತನಾಡುತ್ತೇನೆ'' ಎಂದಳು.

ನನಗೆ ಸ್ವಲ್ಪ ಅನುಮಾನ ! ಯಾವುದೋ ದೇಶ. ಎಲ್ಲೋ ಹೋಗಿದ್ದೇನೆ. ಇಂಗ್ಲಿಷ್ ಕಲಿತ ಈ ಹುಡುಗಿಯ ಹತ್ತಿರ, ಕೊಠಡಿ ಬಾಗಿಲು ಹಾಕಿಕೊಂಡು ಮುಪ್ಪಿನ ಮುದುಕ ಏನು ಮಾತಾಡ್ತಾ ಇರುತ್ತಾನೆ ಎಂದು ಯಾರಾದರೂ ನೋಡಿದವರು ಏನಾರು ಅಂದುಕೊಳ್ಳದೆ ಇರುತ್ತಾರೆಯೇ ? ಹಾಗೆ ಅಂದುಕೊಂಡೋರು ಸುಮ್ಮನೆ ಇರುತ್ತಾರೆಯೇ ? ನಾಲ್ಕು ಜನ ಹಿಡಿದುಕೊಂಡು ತದಕಿದರೆ ನನ್ನಾಟ ಮುಗಿದ ಹಾಗೇ. ಅದಕ್ಕಿಂತ ಕ್ರೂರವಾದುದು ಕೋರ್ಟಿಗೆ ಎಳೆಯೋದು. ಅವರ ಭಾಷೆ ಬರುಲ್ಲ, ಎಂದೆಲ್ಲಾ ಯೋಚನೆಗಳು ಬಂದವು. ಆ ವೇಳೆಗೆ ಆ ಹುಡುಗಿ, ನನ್ನ ಕೊಠಡಿ ಬಳಿಗೆ ಹೋದಳು. ಜೀಗದ ಕೈ ತೆಗೆದುಕೊಂಡಾಗ ಆಕೆ ನನ್ನ ಕೊಠಡಿಯ ನಂಬರನ್ನು ತಿಳಿದುಕೊಂಡಿದ್ದಿರಬೇಕು. ನಾನೂ ಅವಳನ್ನು ಹಿಂಬಾಲಿಸಿದೆ. ಕೊಠಡಿಯ ಬಾಗಿಲಬಳಿ ಅವಳು ನಿಂತಳು. ನಾನು ಹೋಗಿ ಬಾಗಿಲು ತೆಗೆದೆ ಅವಳೇ ಮೊದಲು ನುಗ್ಗಿ ದೀಪ ಹಚ್ಚಿದಳು. ನಾನು ಒಳಕ್ಕೆ ಹೋದೆ. ಆಕೆ ಬಾಗಿಲನ್ನು ಹಾಕಿ ಒಳಕ್ಕೆ ಬಂದು ಕುರ್ಚಿಯಮೇಲೆ ಕುಳಿತಳು. ನಾನೂ ಕುಳಿತೆ.

''ಏನು ವಿಚಾರ. ಮಗಳೇ ! ನಗುಸರಸಿಹಾಗೆ ಬೆಳಿಗ್ಗೆ ಬಸ್ಸಿನಲ್ಲಿ ಕಾಣಿಸಿಕೊಂಡೆ, ಈಗ, ಬಲ ಅತ್ತೆಮನೆ ಸೊಸೆಯಹಾಗೆ ಕಾಣಿಸುತ್ತೀಯಲ್ಲ!'' ಎಂದೆ.

''ಮಾಮ ! ಈ ಬೆಳಿಗ್ಗೆ ನೀವು ಕೈ ನೋಡಿ ಭವಿಷ್ಯ ಸೂಚಿಸೋತನಕ ಖುಷಿಯಿಂದಿದ್ದೆ ಈಗ ಬಲು ಯೋಚನೆ ತುಂಬಿಕೊಂಡಿದೆ. ಅದಕ್ಕೇ ಇಷ್ಟು ಹೊತ್ತಾದರೂ ನಿಮಗೆ ತೊಂದರೆಕೊಟ್ಟರೂ ಪರವಾಗಿಲ್ಲ ಎಂದುಕೊಂಡು ಬಂದೆ. ನನ್ನ ವಿಚಾರ ಹೇಳ್ತೇನೆ ಸ್ವಲ್ಪ ಕೇಳಿ, ನಂತರ ಕೈನೋಡಿ ಬುದ್ಧಿ ಹೇಳಿ'' ಎಂದಳು.

''ಆಗಲಮ್ಮ'' ಎಂದು ಆರಾಮವಾಗಿ ಕುಳಿತೆ.

''ಮೂರು ವರ್ಷದ ಹುಡುಗಿಯಾಗಿದ್ದಾಗ, ಅಮ್ಮ ಕೆಲಸಕ್ಕೆ ಹೋಗುತ್ತಿದ್ದಳು. ಬಸ್ಸಿನಲ್ಲಿ ನನ್ನನ್ನು ಬಾಲಮಂದಿರಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಅಮ್ಮನ ಜತೇಲೇ ಇರಬೇಕು ಎಂದು ನನಗೆ ತುಂಬಾ ಆಶೆ ಇರುತ್ತಿತ್ತು. ಬೆಳೆದ ಮೇಲೆ ಮೆಡಿಕಲ್ ಕಾಲೇಜಿನ ವಿದ್ಯಾರ್ಥಿಯಾದಾಗ ನನ್ನ ಮಕ್ಕಳನ್ನು ಐದಾರು ವರ್ಷಗಳಾಗುವ ತನಕ ನಾನೇ ಸಾಕಬೇಕು ಎಂದು ತೀವ್ರ ಹಂಬಲವುಂಟಾಯಿತು. ನಮ್ಮ ದೇಶದಲ್ಲಿ ಮದುವೆಯಾದರೆ ಇದು ಕಷ್ಟಸಾಧ್ಯವಾಗಬಹುದು. ವಿದೇಶೀಯರ್‍ಯಾರಾದರೂ ದೊರೆತರೆ, ಒಲಿದರೆ, ಅವರನ್ನು ಮದುವೆಯಾಗಬೇಕೆಂದು ನಿರ್ಧರಿಸಿದೆ. ಅಪ್ಪ ಅಮ್ಮನೂ ಒಪ್ಪಿದರು. ಎರಡು ವರ್ಷಗಳ ಹಿಂದೆ ಅಂತಹವನೊಬ್ಬ ಸಿಕ್ಕಿದ. ಬಲು ಜಾಣ. ವಿದೇಶದಿಂದ ಓದಲು ಇಲ್ಲಿಗೆ ಬಂದಿದ್ದ, ಅವನನ್ನು ಮದುವೆಯಾದೆ. ಎರಡು ವರ್ಷಗಳ ಅನುಭವದಿಂದ, ಅವನು ಅಷ್ಟೆಲ್ಲಾ ಸೊಬಗಲ್ಲ ಎಂದು ಖಚಿತವಾಯ್ತು. ವಿವಾಹವಿಚ್ಛೇದನ ಮಾಡಿಕ್ಕೊಳ್ಳೋಣ ಎಂದು ಅಪ್ಪ ಅಮ್ಮನೊಡನೆ ಮಾತಾಡಿ ತೀರ್ಮಾನಿಸಿದೆ. ಕೆಲವು ವಾರಗಳ ಹಿಂದೆ :

''ಆದರೆ ಈ ಬೆಳಿಗ್ಗೆ ನೀವು ಕೈ ನೋಡಿ ಹೇಳಿದಿರಿ. ಬುದ್ಧಿಯ ಮಾತಿಗೆ ಹ್ನೂಗೊಡಬೇಡ ಎಂದಿರಿ. ಈಗ ಅನುಮಾನ ಬಂದಿದೆ. ಕೈ ಹಿಡಿದವನ ಜತೆ ಈಗ ಒದ್ದಾಡಿದರೆ ಮುಂದಕ್ಕೆ ಸುಖ ಶಾಶ್ವತವಾಗುತ್ತೇನೋ ಎಂದು ಆಸೆ ಹುಟ್ಟಿದೆ. ಅದಕ್ಕೇ ಮನಸ್ಸು ಕಳವಳದಿಂದ ಕೂಡಿದೆ. ಸಂದೇಹದಿಂದ ತುಂಬಿದೆ. ತಿರುಗಿ ಕೈ ನೋಡಿ ಏನು ಮಾಡಬೇಕೋ ಹೇಳಿ'' ಎಂದಳು.

ಒಂದು ನಿಮಿಷ ಸ್ತಬ್ಧನಾದೆ. ಈ ನಟಾಷಾ, ಈ ತೆಳ್ಳಾನೆ ಸುರಸುಂದರಿ, ವೈದ್ಯ ವಿದ್ಯಾಭ್ಯಾಸ ಮಾಡುತ್ತಿರುವ ಹುಡುಗಿ, ಇಷ್ಟು ಆತ್ಮೀಯವಾಗಿ, ಇಷ್ಟು ನಂಬಿಕೆ ಆದರದಿಂದ, ಈ ಬೆಳಗಿನ ತನಕ ಕಾಣದೆ ಇದ್ದ ನನ್ನನ್ನು ಕಂಡು, ನನ್ನ ಹಸ್ತಸಾಮುದ್ರಿಕ ಕೇಳಿದ ಮಾತ್ರಕ್ಕೆ ನನ್ನನ್ನು ಮಾಮ ಎಂದು ಕರೆದು ಸಲಹೆ ಕೇಳಲು ಬಂದಿದ್ದಾಳಲ್ಲ, ಎಂದು ದೈನ್ಯ ಭಾವನೆ ನನ್ನನ್ನು ತುಂಬಿತು.

ನನ್ನ ಹಸ್ತ ಸಾಮುದ್ರಿಕದ ಗುಟ್ಟೆಲ್ಲಾ ಮೆದುಗೈಗಳನ್ನು ಹಿಡಿದುಕೊಂಡು ತಡವರಿಸುವುದರಲ್ಲೇ ಮುಗಿಯುತ್ತಿತ್ತು. ದಿಟವಾಗಲೂ ನಾನು ಆ ಶಾಸ್ತ್ರವನ್ನು ಅಭ್ಯಾಸ ಮಾಡಿದ್ದಿಲ್ಲ. ಅಂದಮೇಲೆ ಏನು ಮಾಡಲಿ ?

ಸಹಜವಾದ ವ್ಯವಹಾರ ಜ್ಞಾನವನ್ನು ಉಪಯೋಗಿಸಿಕೊಂಡೆ. ಕೇಳಿದೆ ''ಮಗಳೇ ! ನಿನ್ನನ್ನು ಮದುವೆಯಾದ ವಿದೇಶೀಯನು ಭಾರತೀಯನೇ ?'' ಎಂದು. ''ಅಲ್ಲ'' ಎಂದಳು ನಟಾಷಾ !

''ಹಾಗಾದರೆ ಅಂಗೈ ತೋರಿಸು.'' ಎಂದೆ

ಅಂಗೈ ನೋಡುತ್ತಾ ಹೇಳಿದೆ.

''ವಿವಾಹ ವಿಚ್ಛೇದನ ಮಾಡಿಕೋ ! ನಿನ್ನ ಬಾಳು ಹಸನಾಗುತ್ತೆ'' ಎಂದು.

ಕಾರಣ ಇಷ್ಟೆ ! ಇಂತಹ ಚೆಂದುಳ್ಳಿ ಹೆಣ್ಣು ನಮ್ಮ ದೇಶಕ್ಕೆ ಬಂದರೆ, ಬಹಳ ಚೆನ್ನ. ಹಾಗಾಗದಿದ್ದರೆ, ಅವಳ ದೇಶದಲ್ಲೇ ಇದ್ದು ಆ ದೇಶದ ಭಾವೀ ಜನಾಂಗದ ತಾಯಿಯಾಗಿರಲಿ. ಬೇರೆ ದೇಶಗಳಿಗೆ ಹೋಗುವುದು ಬೇಡ ಎಂದೇ ಆಲೋಚನೆ.

ಆಕೆ ಜಟ್ಟಂತ ಎದ್ದಳು. ನನ್ನ ಕೈ ಕುಲುಕಿದಳು. ತುಂಬಾ ವಂದನೆಗಳು ಎಂದಳು. ಬೆಳದಿಂಗಳು ಆಕೆಯ ಮುಖವನ್ನೆಲ್ಲಾ ತುಂಬಿ ಹರಿಯುತ್ತಿತ್ತು.

''ಮಾಮ ! ನಿಮಗೆ ತೊಂದರೆ ಕೊಟ್ಟುದಕ್ಕೆ, ಸುಸ್ತಾಗಿದ್ದಾಗಲೂ ಸತಾಯಿಸಿದ್ದಕ್ಕೆ, ನನ್ನ ಮೇಲೆ ಕೋಪ ಇಲ್ಲವೇ ?'' ಎಂದು ಕೇಳಿದಳು.

''ಈಗ ಕೋಪ ಇಲ್ಲ ಮಗಳೇ ! ಆದರೆ ನೀನು ಎರಡನೇ ಮದುವೆ ಮಾಡಿಕೊಂಡಾಗ, ನನ್ನನ್ನು ಕರೆಯದೇ ಇದ್ದರೆ, ಅದು ನನಗೆ ಗೊತ್ತಾದರೆ, ನಿನ್ನ ಮೇಲೆ ಕೋಪ ಬರುತ್ತೆ'' ಎಂದು ನಗುತ್ತಾ ಹೇಳುವಾಗ, ಜೇಬಿನಿಂದ ನನ್ನ ವಿಳಾಸವಿದ್ದ ಚೀಟಿಯೊಂದನ್ನು ಆಕೆಗೆ ಕೊಟ್ಟೆ.

ಆಕೆಯು ಹೊರಡಲುದ್ಯುಕ್ತಳಾದಳು. ನಾನು ಕುರ್ಚಿಯಿಂದ ಎದ್ದು ನಿಂತೆ, ಅವಳನ್ನು ಎತ್ತೇಣಿಯ ಬಾಗಿಲ ತನಕ ಕಳಿಸಿ ಬರೋಣ ಎಂದು.

ಕುರ್ಚಿಯಿಂದ ಏಳುವುದನ್ನು ಕಂಡ ಆಕೆ, ಎರಡೂ ಕೈಗಳಿಂದ ನನ್ನೆರಡೂ ಭುಜಗಳನ್ನು ಅದುಮಿ ಕೂರಿಸಿ ''ಮಾಮ ! ನೀವು ವಿಶ್ರಾಂತಿ ತೆಗೆದುಕೊಳ್ಳಿ ! ನಾನು ಹೋಗುತ್ತೇನೆ. ಕಾಗದ ಬರೆಯುತ್ತೇನೆ ಆಮೇಲೆ'' ಎಂದು ಹೇಳಿ ಹೋದಳು.

* * * *

ಕುರ್ಚಿಯ ಮೇಲೆ ಕೂತಿದ್ದೆ. ಎರಡೇ ನಿಮಿಷಗಳಲ್ಲಿ ಕೊಠಡಿಯ ಸಂಗಾತಿಯು ಏದುಬ್ಬಸಪಡುತ್ತ ಬಂದು "ಯಾರೋ! ಆ ಹುಡುಗಿ! ಇಲ್ಲಿಗೇಕೆ ಬಂದಿದ್ದಳೋ!" ಎಂದು ಕೇಳುತ್ತಾ ಮಂದಹಾಸವನ್ನು ಮುಖದಲ್ಲಿ ತೋರಿದ.

"ಮಗಳು ಬಂದಿದ್ದಳು ಕಣೋ! ಕಷ್ಟ ತೋಡಿಕೊಳ್ಳಲು" ಎಂದೆ. "ಯಾರ ಮಗಳೋ! ಅತ್ತೆಯ ಮಗಳೇನೋ!" ಎಂದ ಆವ.

# ಲೆನಿನ್‌ಗ್ರಾಡ್

## 1

### ನಮ್ಮ ಸರ್ಕಾರ ಬಲು ಚೆನ್ನಾಗಿ ಕೆಲಸಮಾಡುತ್ತಿದೆ

ಯಾವುದಾದರೂ ಸಾಧನೆಮಾಡಿ ಕುಂಡಲಿನೀ ಶಕ್ತಿಯನ್ನು ಚೇತನಗೊಳಿಸಿದರೆ, ಆ ಶಕ್ತಿಯು ಮೂಲದಿಂದ ಮೇಲಕ್ಕೇರಿ, ಮನಸ್ಸಿನ ತೆರೆತೆರೆಗಳ ಹಿಂದೆ ಅಡಗಿರುವ ಸಚ್ಚಿದಾನಂದದ ಅನುಭವವನ್ನು ಕೊಡುತ್ತದೆ ಎಂದು ನಮ್ಮ ಹಿರಿಯರು ಹೇಳಿದ್ದನ್ನು ಕೇಳಿದ್ದೆ. ಹಾಗೆ ಸಾಧಿಸಿದವರು ಹಾಡಿದ್ದನ್ನು ಓದಿದ್ದೆ. ಬಾಳಿನಲ್ಲಿ ಮುಂದೆಲ್ಲ ಅವರು ಎಲ್ಲರಂತೆಯೇ ಇದ್ದರೂ, ದೇಹದ ನೋವು, ಮನಸ್ಸಿನ ಬಾಧೆಗಳು ಅವರ ಮೇಲೆ ತೀವ್ರ ಪರಿಣಾಮ ಮಾಡುತ್ತಿಲ್ಲವೆಂಬುದನ್ನು ನೋಡಿದ್ದೆ. ಅಂದಮೇಲೆ ಮನಸ್ಸಿನಲ್ಲಿ ಹುದುಗಿರುವ ಅದೃಶ್ಯವಾದ ಯಾವುದೋ ಒಂದು ಅಂಶದ ಅರಿವಾದರೆ ದೇಹಬಾಧೆಗಳೂ ಮನೋಚಪಲತೆಯೂ ನಿರ್ಮಲವಾಗುವುದೆಂದು ತಿಳಿದಿದ್ದೆ.

ರಷ್ಯಾದಲ್ಲಿನ ಹಿರಿಯ ವೈಜ್ಞಾನಿ ಅಕೆಡೆಮಿಷಿಯನ್ ಬೈಖೋವ್ ಎಂಬಾತ ಮೆದುಳಿನಮೇಲೆ ಹೇರಳ ಪ್ರಯೋಗ ನಡೆಸಿ ಪುಸ್ತಕಗಳನ್ನು ಬರೆದಿದ್ದ. ಅತ್ಯಾಧುನಿಕ ಶಾಸ್ತ್ರಗಳ ಹಿರಿಯ ಪಂಡಿತ ತಾ ಬರೆದ ಪುಸ್ತಕದಲ್ಲಿ ಇದೇ ಮಾತನ್ನು ಅವತರಣಿಕೆಯಲ್ಲಿ ಪ್ರಕಟಿಸಿದ್ದ.

ರಷ್ಯಾಕ್ಕೆ ಹೋದರೆ ಗೀದರೆ ಆತನ ಹತ್ತಿರ ಈ ವಿಷಯವನ್ನು ಚರ್ಚಿಸಬೇಕು ಎಂದು ಆಸೆಪಟ್ಟುಕೊಂಡಿದ್ದೆ. ಹೋಗುವುದು ಎಂದು ಗೊತ್ತಾದಾಗ ಆತನಿಗೆ ಕಾಗದವೊಂದನ್ನು ವಿವರವಾಗಿ ಬರೆದು ಈ ವಿಷಯ ನಿಮ್ಮಲ್ಲಿ ಚರ್ಚಿಸಬೇಕೆಂದಿದ್ದೇನೆ. ಈ ತರಹ ಹೇಳಿಕೆಗಳು ನಮ್ಮ ಪುಸ್ತಕಗಳಲ್ಲಿವೆ. ಅವನ್ನು ಆಧುನಿಕ ಪ್ರಯೋಗ ನಡೆಸಿ ನಿರ್ಧಾರಮಾಡಿದರೆ ಲೋಕದ ಜ್ಞಾನ ಭಂಡಾರಕ್ಕೆ ಕಾಣಿಕೆಯಾಗುತ್ತೆ ಎಂದು ಬಿನ್ನವಿಸಿದ್ದೆ.

ಸೋವಿಯತ್ ರಾಯಭಾರಿ ಕಚೇರಿ ದೆಹಲಿ ; ಅವರಿಗೂ ಈ ಕಾಗದದ ಒಂದು ಪ್ರತಿಯನ್ನು ಬರೆದು ಕಳಿಸಿದ್ದೆ. ಅವರ ಸಹಾಯವನ್ನು ಕೋರಿದ್ದೆ. ಭೇಟಿಗೆ ಎಲ್ಲ ಅನುಕೂಲ ಗಳನ್ನು ಮಾಡುತ್ತೇವೆ ಎಂದು ಅವರಿಂದ ಭರವಸೆಯನ್ನು ಪಡೆದಿದ್ದೆ.

ಅಕೆಡೆಮಿಷಿಯನ್ ಬೈಖೋವ್ ಲೆನಿನ್‌ಗ್ರಾಡಿನಲ್ಲಿರುವುದು ಎಂದು ತಿಳಿದಿತ್ತು. ಅದಕ್ಕೇ ಮಾಸ್ಕೋದಿಂದ ಲೆನಿನ್‌ಗ್ರಾಡಿಗೆ ಹೊರಟ ರಾತ್ರಿ ಪುಸ್ತಕಗಳಿಂದ ಲೇಖನಗಳಿಂದ ತುಂಬಿದ ಹೆಗಲ ಚೀಲವನ್ನು ಹೊತ್ತುಕೊಂಡು ಉತ್ಸಾಹದಿಂದ ನೆಗೆಯುತ್ತಾ ರೈಲ್ವೆ ನಿಲ್ದಾಣಕ್ಕೆ ಹೋದೆ.

ಮಾಸ್ಕೊದಿಂದ ಲೆನಿನ್‌ಗ್ರಾಡಿಗೆ ಒಂದು ರಾತ್ರಿ ಪ್ರಯಾಣ. ರೆಡ್ ಆ್ಯರೋ ಎಕ್ಸ್‌ಪ್ರೆಸ್ ಎಂಬ ಈ ರೈಲು ಅಂಬು ಬಿಟ್ಟಂತೆ ನೇರವಾಗಿ ಎಲ್ಲೂ ಸೊಟ್ಟ ತಿರುಗದೆ ನೆಟ್ಟಗೆ ಹೋಗುತ್ತೆ. ದಿವ್ಯವಾದ ರೈಲು ! ನಾಲ್ಕು ಜನ ಸುಖವಾಗಿ ಮಲಗಬಹುದಾದ ಅಣಿಯಾದ ಅಂತಃಪುರ. ಶುಚಿಯಾದ ಹಾಸಿಗೆ ಹೊದ್ದಿಗೆಗಳು. ರೇಡಿಯೋ, ತಿರುಗಿಸಿದರೆ ಮಾಸ್ಕೊ ಆಕಾಶವಾಣಿ.

ರೈಲುಗಳನ್ನು ಸ್ತ್ರೀಲಿಂಗ ಎಂದು ಕೆಲವು ಜನಾಂಗಗಳು ನಿರ್ಧರಿಸಿವೆ. ಇದು ಎಂದಿನಿಂದಲೂ ನನಗೆ ಆಶ್ಚರ್ಯಮೂಡಿಸಿತ್ತು. ಹೊಗೆಯುಗುಳಿ ಬುಸು ಬುಸುಗುಡುವ ಈ ಧೂಮಶಕಟವನ್ನು ಸ್ತ್ರೀಲಿಂಗ ಎಂದು ಏಕಾರು ಕರೆಯುತ್ತಾರೆ ? ಆದರೆ ರೆಡ್ ಆ್ಯರೋ ಎಕ್ಸ್‌ಪ್ರೆಸ್ ನೋಡಿದಮೇಲೆ ಸಂದೇಹ ನಿವಾರಣೆಯಾಯಿತು. ಇಂಜಿನ್ ಚಾಲಕಳು ಹೆಂಗಸು. ಹೆಸರು ಪ್ರಾಯಶಃ ಸುಭದ್ರೆ ಎಂದಿದ್ದಿರಬೇಕು : ರೈಲಿನ ರಕ್ಷಕಳು ಗಾರ್ಡು ಹೆಂಗಸು. ಗಾಡಿ ಗಾಡಿಗೂ ಸುಪರ್ದುನೋಡಿಕೊಳ್ಳುವಾಕೆಯು ಹೆಣ್ಣು. ಟಿಕೀಟುಗಳನ್ನು ತನಿಖೆಮಾಡುವಾಕೆಯರೂ ಹೆಣ್ಣು ಹೆಂಗಸರು. ಅಂದಮೇಲೆ ಹೆಣ್ಣು ರೈಲು ಎಂದು ನಾಮಕರಣ ಮಾಡಿದ್ದು ನ್ಯಾಯ ಎಂದೆನಿಸಿತು. ಷರಾಯಿ, ಅಂಗಿ, ಟೋಪಿ ಸಮವಸ್ತ್ರ ಧರಿಸಿದ್ದ ಇವರುಗಳೆಲ್ಲಾ ಹೆಂಗಸರು ಎಂದು ನಿರ್ಧರಿಸಲು ಅಷ್ಟೇನೂ ಪ್ರಯಾಸವಾಗುತ್ತಿರಲಿಲ್ಲ. ಎದ್ದುಬ್ಬಿ ನಿಂತ ಚೆಲುವೇ ಹೇಳುತ್ತಿತ್ತು.

ಬೆಳಗಿನ ಝಾವದ ಹೊತ್ತಿಗೆ ಗಾಡಿಯ ಹೆಣ್ಣುಗಳು ಕೊಟ್ಟ ಚಹಾದಲ್ಲೇ ಸಂಧ್ಯಾವಂದನೆಮಾಡಿ ಮುಗಿಸಿದೆ. ಲೆನಿನ್‌ಗ್ರಾಡ್ ತಲುಪುವ ಹೊತ್ತಿಗೆ ಭೇಟಿಗೆ ಸಿದ್ಧವಾಗಿದ್ದೆ.

ನಮ್ಮ ಜತೆಯಲ್ಲಿ ಮಾರ್ಗ ಸಖಿಯಾಗಿ ಮಾಸ್ಕೊದಿಂದ ಬಂದಿದ್ದಾಕೆಗೆ ನನ್ನ ಭೇಟಿಯ ವಿಚಾರವನ್ನು, ನನ್ನ ಪುಸ್ತಕ, ಲೇಖನಗಳ ಕಂತೆಯನ್ನು ತೋರಿಸಿ, ಹೇಳಿದ್ದೆ. ಆಕೆ ಬಲು ಮುತುವರ್ಜಿವಹಿಸಿ ಇಲ್ಲೇ ಇರಿ. ಈ ಭೇಟಿಯ ವಿಷಯ ನಾನು ಟೆಲಿಫೋನ್‌ಮಾಡಿ ತಿಳಿದು ಹೇಳುತ್ತೇನೆ. ಅದಾದಮೇಲೆ ಮಿಕ್ಕವರ ಕಾರ್ಯಕ್ರಮಕ್ಕೆ ತೊಡಗುತ್ತೇನೆ. ಎಂದು ಹೇಳಿ ಟೆಲಿಫೋನಿನ ಬಳಿಗೆ ಹೋದಳು.

ಬೆಳಗಿನ ಫಲಾಹಾರಕ್ಕೆ ಆಗ ನಾವೆಲ್ಲರೂ ಕುಳಿತಿದ್ದೆವು. ಫಲಾಹಾರ ಮುಗಿಯುವ ಹೊತ್ತಿಗೆ ಆಕೆ ಬಂದಳು. ಬಂದು ನನ್ನ ಭುಜ ತಟ್ಟಿ ಹೇಳಿದಳು. "ಅಕಾಡೆಮಿಷಿಯನ್

ಬೈಖೋವ್ ಅವರು ನಿಧನಹೊಂದಿ ಒಂದು ವರ್ಷ ಆಯಿತು. ಆತನ ಕಾರ್ಯಕ್ಷೇತ್ರವು ರಿಪೇರಿಗಾಗಿ ಈ ನಾಲ್ಕೂ ತಿಂಗಳೂ ಮುಚ್ಚಿದೆ'' ಎಂದು.

ಚಂದ್ರನಿಗೆ ಗುರಿ ಇಟ್ಟು ಹೊಡೆಸೋ ಸರ್ಕಾರ ಬಲು ಬಲು ಶಿಸ್ತು ಎಂದಿದ್ದೆ. ದೇಶದ ಹಿರಿಯ ವೈಜ್ಞಾನಿಕ ; ಪ್ರಪಂಚದಲ್ಲೇ ಹೆಸರಾಂತನಾದವನು, ನಿಧನವಾಗಿದ್ದುದು ಆ ದೇಶದ ರಾಯಭಾರಿ ಕಛೇರಿಗಳಿಗೆ ತಿಳಿದೇ ಇಲ್ಲ!

ನಮ್ಮ ಸರ್ಕಾರದ ಅವ್ಯವಸ್ಥೆನೋಡಿ ಮರುಕಪಟ್ಟು ರೇಗುತ್ತಿದ್ದೆ. ಈಗ ನಮ್ಮ ಸರ್ಕಾರ ಬಲು ಚೆನ್ನಾಗಿ ಕೆಲಸ ಮಾಡುತ್ತೆ ಅಂತ ಆತ್ಮವಿಶ್ವಾಸವೇ ಬಂದಿದೆ.

## 2

## ಮಾರ್ಗಸಖಿ

ಹಿರಿಯಾಸೆಯಿಟ್ಟುಕೊಂಡು ಬಂದ ಕೆಲಸಕ್ಕೆ ಸುಂಕವಿಲ್ಲದೆ ಹೋಯ್ತು. ಹೋಗಲಿ. ಎಲ್ಲರ ಜತೆಗೂ ಹೋಗಿ ಕಂಡಿದ್ದನ್ನು ಕಣ್ಣುಬಿಟ್ಟು ನೋಡೋಣ ಎಂದು ಸಮಾಧಾನ ತಂದುಕೊಂಡೆ.

ಲೆನಿನ್‌ಗ್ರಾಡಿನ ಮಾರ್ಗಸಖಿಯೊಬ್ಬಳು ಆ ಊರಿನ ಸಂಚಾರಕ್ಕೆ ನಮಗೆ ನೆರವಾದಳು. ಹೊರವಾಗಿ ಬೆಳೆದಿದ್ದ ಆ ಸುಂದರಮುಖದ ಹುಡುಗಿ ಅದೆಷ್ಟು ಚೆನ್ನಾಗಿ ಇಂಗ್ಲೀಷ್ ಮಾತನಾಡುತ್ತಿದ್ದಳು ಅಂತೀರಿ ? ಅಮೆರಿಕನ್ನರು ಇಂಗ್ಲೀಷು ಮಾತನಾಡುತ್ತರಲ್ಲಾ! ಅದೇ ಧ್ವನಿ. ಅದೇ ಮಾತಿನ ಸರಣಿ, ಅದೇ ತರಹ ಮೂಗಿನಲ್ಲೇ ಧ್ವನಿ ಹೊರಡಿಸಿ ತುಟಿಗಳ ಕುಣಿತದಿಂದಲೆ ಮಾತು ಹೊರಡಿಸುವ ಚಾಕಚಕ್ಯತೆ. ಈಕೆಯು ತುಟಿಗಳನ್ನು ಈ ರೀತಿ ಕುಣಿಸಲು ಎಷ್ಟು ಅಮೆರಿಕನ್ ತುಟಿಗಳು ಕುಣಿಕುಣಿದು ಒತ್ತಿ ಕಲಿಸಿತೋ ದೇವರೇ ಬಲ್ಲ! ದೇವರೆಲ್ಲಿ ಬಂತು ಅಲ್ಲಿ!! ಆ ತುಟಿಗಳೇ ಬಲ್ಲುವು !! ಲೆನಿನ್‌ಗ್ರಾಡಿನ ಚರಿತ್ರೆ, ಭೌಗೋಳಿಕ ಸಂಪತ್ತು, ಸಂಗೀತದ ತೌರಾದುದು ಏಕೆ, ಕಲಾಕುಶಲತೆಯ ಕೇಂದ್ರವಾದುದು ಹೇಗೆ ಎಲ್ಲವನ್ನು ಎಷ್ಟು ಚೆನ್ನಾಗಿ ಹೇಳಿದಳು ಅಂತೀರಿ !

ನಾಲೆ ನಾಲೆಗಳ ಮಧ್ಯದ ಸುಂದರ ನಗರಿಯ ಸಂಚಾರ ಬಲು ಹರ್ಷದಾಯಕ ವಾಗಿತ್ತು. ಮಧ್ಯಾಹ್ನದ ಭೋಜನಕ್ಕೆ ಕುಳಿತಾಗ ಆ ಹರುಷದ ಅರಿವು, ತಿಂದ ಪ್ರಮಾಣವನ್ನು ನೋಡಿದಾಗ, ತಿಳಿಯಿತು.

ಅಪರಾಹ್ಣ "ಹರ್ಮಿಟೇಜ್"ಗೆ ಹೋಗುತ್ತೇವೆ ಎಂದು ಮಾರ್ಗಸಖಿ ತಿಳಿಸಿದಳು.

3

# ಹರ್ಮಿಟೇಜ್

ಕ್ಯಾಥರಿನ್ ದಿ ಗ್ರೇಟ್ ಆ ಚಕ್ರವರ್ತಿನಿಯ ಹೆಸರು. ಅವಳು ಕಡೆಗಾಲದಲ್ಲಿರಲು ಬಯಸಿದ್ದ ಅರಮನೆಯ ಹೆಸರೇ ''ಹರ್ಮಿಟೇಜ್ !'' ಅಲ್ಲಿಯೇ ಜಗತ್ಪ್ರಸಿದ್ಧವಾದ ಕಲಾ ವಸ್ತು ಪ್ರದರ್ಶನಾಲಯ ಇದೆ. ಅದನ್ನೇ ನೋಡಹೋಗುತ್ತಿದ್ದೆವು. ದಾರಿಯಲ್ಲಿ ಒಂದು ಅರಮನೆಯು ಕಂಡಿತು. ಭವ್ಯವಾಗಿತ್ತು. ಮಾರ್ಗಸಖಿ ಹೇಳಿದಳು. ''ಕ್ಯಾಥರಿನ್ ಚಕ್ರವರ್ತಿನಿಯ ಪ್ರಾಯದಲ್ಲಿ ಆಕೆಯು ಒಲವಿನಾಡಿಯೊಬ್ಬನಿಗಾಗಿ ಈ ಅರಮನೆಯನ್ನು ಸುಖಪಟ್ಟ ಅವಳು ಕಟ್ಟಿಸಿಕೊಟ್ಟಳು. ಆತ ಅದನ್ನು ಇಸ್ಪೀಟಾಟದಲ್ಲಿ ಜೂಜಾಡಿ ಮಾರಿಕೊಂಡ. ಅದನ್ನು ತಿರುಗಿ ಆಕೆಯು ಕೊಂಡುಕೊಂಡು, ಮರಳಿ ಅವನಿಗೆ ಬಹುಮಾನವಾಗಿ ಕೊಟ್ಟಳು. ತಿರುಗಿ ಅವನು ಜೂಜಾಡಿ ಕಳೆದುಕೊಂಡ. ಆಗ ಆಕೆ ಬೇಸರಪಟ್ಟ ಹರ್ಮಿಟೇಜ್ ಕಟ್ಟಿಸಿಕೊಂಡು ಅಲ್ಲಿ ಕಡೆಯ ದಿನಗಳನ್ನು ಕಳೆಯುತ್ತೇನೆ ಎಂದು ನಿರ್ಧರಿಸಿ ಕಟ್ಟಿಸಲು ಆಜ್ಞೆಯಿತ್ತಳು. ಕಟ್ಟಿ ಮುಗಿಯೋ ಹೊತ್ತಿಗೆ ಹದಿನೈದೋ ಏನೋ ವರ್ಷಗಳಾಗಿತ್ತು. ಈಗ ಈ ಒಲವಿನಾಡಿಯ ಅರಮನೆಯಲ್ಲೇ ನಮ್ಮ ರಾಜಕೀಯ ಕಮ್ಯೂನಿಸ್ಟ್ ಪಕ್ಷದ ಕೇಂದ್ರದ ಕಚೇರಿಯಿದೆ'' ಎಂದು. ಒಲವಿನಾಡಿಯ ಕೇಂದ್ರ ಕಚೇರಿ ಬಲು ಠೌಲಿನದು !

''ಹರ್ಮಿಟೇಜೆ''ಗೆ ಹೋದೆವು. ಮೂವತ್ತು ಮೂರು ಕೋಟಿ ಸಾಧು ಸಂತರು ಸುಖಬಾಳ ನಡೆಸಬಹುದಾದ, ದಿವ್ಯ ಒಡ್ಡೋಲಗ ಮಾಡಬಹುದಾದ, ಭವನವದು. ಬೆಂಗಳೂರಿನ ಮನೆಬಾಡಿಗೆಯ ಪ್ರಮಾಣವನ್ನು ಕಂಡ ನನಗೆ, ಆ ಭವನಕ್ಕೆ ಏನಿಲ್ಲಾ ಅಂದರೂ, ವರ್ಷಕ್ಕೆ ನಮ್ಮ ಘನ ಸರ್ಕಾರದ ಮೊತ್ತ ಆದಾಯವು ಸಾಲದೆ ಬರಬಹುದೇನೋ ಎನ್ನಿಸಿತು. ಅಷ್ಟು ದೊಡ್ಡದಾದ ವಿಸ್ತಾರವಾದ ಎತ್ತರ ಅಂತಸ್ತುಗಳ, ಕಟ್ಟಡವದು ! ಮೆಟ್ಟಿಲು ಹತ್ತಿ ಮಹಡಿಗೆ ಹೋಗೋ ಹೊತ್ತಿಗೆ ಸುಸ್ತು ಬಡಿದುಹೋಗುತ್ತಿದ್ದು ಆ ಭವನದಲ್ಲಿ.

ಆಕೆಯು ತನ್ನ ಪ್ರಾಯದ ಮೋಜಿನಲ್ಲಿ ಸಂಗ್ರಹಿಸಿದ್ದ, ಬಳುವಳಿಯಾಗಿ ಪ್ರಪಂಚದ ಇತರ ರಾಜಮಹಾರಾಜರುಗಳಿಂದ ಪಡೆದಿದ್ದ ದಿವ್ಯವಸ್ತುಗಳನ್ನೆಲ್ಲ ಇಲ್ಲಿ ಇಡಲಾಗಿದೆ. ಆಕೆಯು ಪ್ರಯಾಣ ಮಾಡುತ್ತಿದ್ದ, ಚಿನ್ನ ಬೆಳ್ಳಿಯ ಗಾಡಿಗಳಿಗೆ ಕಟ್ಟುತ್ತಿದ್ದ, ಕುದುರೆಗಳ ಚಿನ್ನದ ಜೀನು ಹೊನ್ನಿನ ಅಲಂಕಾರಗಳನ್ನು ಪ್ರದರ್ಶಿಸಿದ್ದಾರೆ. ಆಕೆಯ ಒಡ್ಡೋಲಗದ ವಸ್ತ್ರಾಭರಣ ಗಳು ಕೊಠಡಿಗಳ ತುಂಬಾ ಶೇಖರಿಸಲ್ಪಟ್ಟಿವೆ.

ಇದನ್ನೆಲ್ಲಾ ಆಗ ಮಾಡಿದ ಆಕೆಯ ಪ್ರಜೆಗಳು ಹೊಟ್ಟೆಗಿಲ್ಲದೆ ಸತ್ತರು ಎಂದಳು ಮಾರ್ಗಸಖಿ.

ಆದರೆ ಆಕೆಯು ಸಂಗ್ರಹಿಸಿದ್ದ ತೈಲಚಿತ್ರಗಳು ಇವೆಲ್ಲಕ್ಕಿಂತ ಅಮೋಘವಾಗಿವೆ. ಅಲ್ಲಿರುವ ತೈಲಚಿತ್ರಗಳನ್ನು ಇಂದಿನ ಬೆಲೆಗೆ ಮಾರಾಟ ಮಾಡಿದರೆ, ರಷ್ಯಾದವರು ಮೂರನೆ ಮಹಾಯುದ್ಧಕ್ಕೆ ಸಾಕಾಗುವಷ್ಟು ಹಣವನ್ನು ಗಳಿಸಬಹುದು ಎಂದು ಅನ್ನಿಸಿತು.

ಮಾರ್ಗಸಖಿಯು ಮೂರು ನಾಲ್ಕು ದೊಡ್ಡ ಹಜಾರಗಳಲ್ಲಿ ದುರುದುರು ನಡೆದು ಮುಂದೆ ಹೋದಳು. ಅವಳ ಹಿಂದೆಯೇ ನಾವೂ ನಡೆದವು. ನಡೆಯುವಾಗ ಒಂದು ಹಜಾರದ ಗೋಡೆಯ ಮೇಲೆ''ಪಿಕಾಸೋ'' ರಚಿತ, ''ನೃತ್ಯಕಾರರ'' ಚಿತ್ರವನ್ನು ಕಂಡೆ. ಅದನ್ನು ನೋಡಲು ಕಾಲಾವಕಾಶವಿರಲಿಲ್ಲ. ಹಿಂಬಾಲಿಸಬೇಕಾಯ್ತು ಮಾರ್ಗಸಖಿಯನ್ನು. ಇಂಡಿಯಾ ಕೋಣೆಗೆ ಆಕೆ ನಮ್ಮನ್ನು ಕರಕೊಂಡು ಹೋಗಿದ್ದಳು ಹತ್ತುಗಜ ಉದ್ದ ಇಪ್ಪತ್ತು ಗಜ ಅಗಲ ಇದ್ದ ಆ ಅರೆ ಕತ್ತಲೆ ಕೋಣೆಯಲ್ಲಿ ನಮ್ಮ ದೇಶದ, 11-15ನೇ ಶತಮಾನಗಳ, ಕತ್ತಿ ಗುರಾಣಿ, ಕಬ್ಬಿಣದ ಕವಚ, ಸಬ್ಬಲರಾಣಿ ತಿಟ್ಟಿನ ಆಯುಧ, ರೇಷ್ಮೆ ಕಿಂಕಾಬು, ಒಂಕಿ, ನಾಗಮುರಿಗೆ ಇವೇ ಇದ್ದುದು. ಬಿಕೋ ಅನ್ನುತ್ತಿತ್ತು ಆ ಅಡ್ಡಗಲದ ಅರೆಕತ್ತಲೆ ಕೋಣೆ.

ಭಾರತೀಯರು ನೀವು ನಿಮ್ಮ ದೇಶದ ವಸ್ತುಗಳ ಸಂಗ್ರಹಣೆ ಇಲ್ಲಿದೆ. ನೋಡ ಬಯಸುವಿರೇನೋ ಎಂದು ಕರೆತಂದೆ ಎಂದಳು ಮಾರ್ಗಸಖಿ. ಅಲ್ಲಿ ಯಾವುದೊಂದು ಜ್ಞಾನಭಂಡಾರದ ಹೊತ್ತಿಗೆಯೂ ಇರಲಿಲ್ಲ.

ಬೇಗ ಬೇಗ ಹಿಂತಿರುಗುವಾಗ ಪಿಕಾಸೋ ಚಿತ್ರಗಳಿದ್ದ ಬಳಿ ಮಾರ್ಗಸಖಿಯನ್ನು ತಡೆದೆ. "Miss Guide" ಇದು ಪಿಕಾಸೋ ಚಿತ್ರವಲ್ಲವೇ ಇಂತಹವುಗಳನ್ನು ತೋರಿಸಬಾರದೆ ಎಂದೆ. ನನ್ನ ಉಚ್ಚಾರಣೆ ಆಕೆಯನ್ನು ಚಕಿತಗೊಳಿಸಿರಬೇಕು, ಹೆಡೆಯೆತ್ತಿದ ಹಾವಿನಂತೆ ; ಮೂಗು ತುದಿಯನ್ನು ಮೇಲಕ್ಕೇರಿಸಿ ''ಭಾರತೀಯರು ನೀವು, ನವ್ಯ ಚಿತ್ರಗಳ ರಸವನ್ನು ಹೀರಲಾರಿರಿ ನೀವು ; ಅದಕ್ಕೇ ನಿಲ್ಲಲಿಲ್ಲ, ಇಲ್ಲಿ'' ಎಂದು ಪಲುಕಿದಳು.

ಕಿರುನಾಗವೇಣಿಯ ಅಟ್ಟಹಾಸವನ್ನು ಕಂಡು ನಕ್ಕು, ನೃತ್ಯಕಾರರ ಆ ಚಿತ್ರದ ಬಳಿಗೆ ತೋಳ್ಹಿಡಿದು ಆಕೆಯನ್ನು ದೂಡಿ, ''ನೋಡು ! ಮಗಳೇ ! ಈ ಚಿತ್ರದಲ್ಲಿರುವ ಸೊಬಗ ನೋಡು.'' ಮೂರೂ ನೃತ್ಯವವರೂ ನೆಲದಿಂದ ಜಿಗಿದೆದ್ದು ಹಾವಿನಂತೆ ಬಳುಕಿ ನಿಂತಿರುವ ಚಿತ್ರವಿದು. ಬಣ್ಣಗಳ ನೋಡು ! ತುಸುಗೆಂಪು ಒಡಲು, ತುಸು ಕಪ್ಪು ತಲೆಯು, ಬಿಸಿ ಬಿಸಿಯುಲಾಶಿಸುತ ಏನನ್ನೋ ಕಂಡು ಅದ ಹಿಡಿಯಲೆತ್ನಿಸುತ ನೆಲವ ಬಿಟ್ಟು ಜಿಗಿದಿಹರು. ಎಂಥ ಮೋಜಿನ ಸಾಹಸ. ಅದರಾಗಿರುವುದೇನು ? ನೆಲ ತಪ್ಪಿದೆ ಇಲ್ಲಿ. ಅದು ಸಿಗಲಿಲ್ಲ ಅಲ್ಲಿ. ಎಲ್ಲರಾ ಕಣ್ಸೆಳೆದು ಮನವನ್ನು ಥಳುಕಿಸಿ, ಗುರಿತಾಗದೆ, ತ್ರಿಶಂಕುವಿನಂತೆ ಚಿರಂಜೀವಿಗಳಾಗಿ ನರಕದಾಸೊಬಗ ತೋರುತಿದೆ. ನವ್ಯಚಿತ್ರದ ಸೊಗಸು, ನಮಗೆ ತಿಳಿಯದೆ ? ನವ್ಯ ನವ್ಯ ಎಂದುಸಿರಿಟ್ಟ ಋಷಿಗಳ ಮನೆತನದವರು ನಾವು'' ಎಂದು ಎಲ್ಲವನ್ನೂ ವಿವರಿಸಿದೆ. ಸುಸ್ತಾದೆ.

ಆಗವಳ ಮುಖ ನೋಡಬೇಕಿತ್ತು ! ಎಂತಹ ಬಯಕೆ ಮೂಡಿತ್ತು ಅಂತೀರಿ ! ಭಾರತೀಯರಿಗೆ ಇಷ್ಟೆಲ್ಲಾ ತಿಳಿದಿದೆ ಎಂದು ಗೊತ್ತಿರಲಿಲ್ಲ. ಈ ತನಕ ಬಂದವರು ಹಾಗೆ

ತೋರಿಸಿರಲಿಲ್ಲ. ಈ ಚಿತ್ರಗಳನ್ನು ಕಂಡರೆ ನನ್ನ ಎದೆ ಕುಣಿಯುವುದು. ನನ್ನ ಮನ ತಣಿಯುವುದು. ಏತಕೆ ಅಂತ ತಿಳಿದಿರಲಿಲ್ಲ. ಈಗ ಅರ್ಥವಾಗುತ್ತಿದೆ. ಇನ್ಮೇಲೆ ಇಲ್ಲಿಗೆ ಬಂದವರಿಗೆಲ್ಲಾ ಈ ನವ್ಯ ಚಿತ್ರಗಳ ತ್ರಿಶಂಕು ನರಕದ ಸೊಬಗನ್ನು ತಿಳಿಸುವೆನು ಎಂದಳು. ಆ ಚಿತ್ರದ ನೃತ್ಯಕಾರರು ಏನನ್ನು ಹಿಡಿಯಲು ಜಿಗಿದಿರುವರೋ ಅದನ್ನು ನಾನೂ ತಿಳಿಯಲು ಕಷ್ಟಪಡುವೆ ಎಂದಳು.

ಹರ್ಮಿಟೇಜಿನಿಂದ ಹೊರಗೆ ಬರುವಾಗ ಕಮ್ಯೂನಿಷ್ಟ್ ಪಕ್ಷವು ಪ್ರಕಟಸಿದ್ದ ಹೆಸರಾಂತ ಚಿತ್ರಪ್ರತಿಗಳ ಹೊತ್ತಗೆಯನ್ನು ಕೊಂಡುಕೊಂಡೆ. ನಮ್ಮ ದೇಶದಲ್ಲಿ ಸುಮಾರು 200 ರೂಪಾಯಿ ಬಾಳುವ ಆ ಹೊತ್ತಿಗೆಗೆ ಅಲ್ಲಿ 36 ರೂಪಾಯಿ ಕೊಟ್ಟೆ. ಅದರಲ್ಲಿ 80 ಚಿತ್ರಗಳಿತ್ತು. 60 ದೇವರ, ದೇವ ಸೇವಕರ ಕತೆಗಳಿಗೆ ಸಂಬಂಧಿಸಿದ್ದುದು. 10 ಪ್ರಕೃತಿಯ ಚಿತ್ರಗಳು ಇನ್ನುತ್ತು ಸಾಮಾನ್ಯ ಜನ ಜೀವನದ್ದು. ರಾಜಕೀಯಕ್ಕೆ ಬೆಂಬಲ ಕೊಡುವ ಜಾಹಿರಾತಿನ ಚಿತ್ರ ಒಂದೂ ಇರಲಿಲ್ಲ.

# ಇಲ್ಯೂಷಿಯನ್ ಪ್ರಸಂಗ

ಊಟದ ತೊಟ್ಟಿಯ ಒಂದು ತುದಿಯಲ್ಲಿ ಎರಡು ಮೇಜುಗಳನ್ನು ಸಸ್ಯಾಹಾರಿಗಳಿಗೆಂದು ಮೀಸಲಾಗಿರಿಸಿದ್ದರು. 26-28 ಜನ ಎರಡೂ ಮೇಜಿನ ಸುತ್ತ ಮುತ್ತಿಕೊಂಡಿದ್ದೆವು. ಹೋಟಲಿನ ಆಡಳಿತ ವರ್ಗದವರು ಎಷ್ಟೋ ಪ್ರಯಾಸಪಟ್ಟು, ಎಂತೆಂತದೋ ಪುಸ್ತಕಗಳನ್ನು ಓದಿಕೊಂಡು, ನಮಗೆ ಒಪ್ಪುವಂತಹ ಅಡಿಗೆ ಮಾಡಿಸಲು ಪ್ರಯತ್ನ ಮಾಡಿದ್ದರು. ಅಡಿಗೆಯವರೂ ಕೂಡ ಬಲು ಶ್ರದ್ಧೆಯಿಂದ, ತುಂಬಾ ತೊಂದರೆ ತೆಗೆದುಕೊಂಡು, ಅಡಿಗೆ ಮಾಡಿದ್ದರು. ಬಡಿಸುವುದಕ್ಕೆ ಬಂದ ಪರಿಚಾರಿಕೆಯರೂ ಕೂಡ ಬಹಳ ಆದರದಿಂದ, ತುಂಬಾ ಶ್ರಮವಹಿಸಿ ಬಡಿಸುತ್ತಿದ್ದರು. ಇನ್ನು ಸ್ವಲ್ಪ ಹಾಕಿಕೊಳ್ಳಿ ಎಂದು ಆ ಪರಿಚಾರಕ ಹೆಣ್ಣು ಮಕ್ಕಳು, ಬೀಗರ ಮನೆಯವರ ತರಹ ಬಲವಂತ ಮಾಡಿ ಬಡಿಸುತ್ತಿದ್ದರು. ಆದುದರಿಂದಲೇ ನಾವೂ ತುಂಬಾ ತೊಂದರೆ ತೆಗೆದುಕೊಂಡು, ಇಳಿಯಲಾರದ ಗಂಟಲಿನಲ್ಲಿ ತುತ್ತು ನುಗ್ಗಿಸಲು ವಿಶ್ವಪ್ರಯತ್ನ ಮಾಡುತ್ತಿದ್ದೆವು.

ಅಗಲವಾದ, ಆಳವಾದ, ಚೆಂದ ಕಾಣುವ ಚೀಣಾ ತಟ್ಟೆಯಲ್ಲಿ ಒಂದು ತರಹಾ ಗಂಜಿ ಬಡಿಸಿಕೊಂಡು ತಂದಿಡುತ್ತಿದ್ದರು. ಒಂದು ಚಮಚ ಬಾಯಿಗೆ ಬಿಟ್ಟುಕೊಂಡರೆ ಬಿಸಿಯಾಗೇನೋ ಇರುತ್ತಿತ್ತು. ಆದರೆ ಉಪ್ಪು ಸಾಲದೇನೋ ಅನ್ನಿಸುತ್ತಿತ್ತು. ಉಪ್ಪು ಹಾಕಿಕೊಂಡರೆ, ಉಪ್ಪಿನದಲ್ಲ ತಪ್ಪು, ಇನ್ನಾತರದೋ ಲೋಪ, ಅದಕ್ಕೇ ಈ ತಬ್ಬಲಿ ರುಚಿ ಎನಿಸುತ್ತಿತ್ತು. ಬಾಲ್ಯದಲ್ಲಿ ಜ್ವರ ನೆಗಡಿ ಬಂದಾಗಲೆಲ್ಲ, ನಮ್ಮಮ್ಮ ಇಂಥಹದೇ ಕಷಾಯವನ್ನೂ, ಹುರಿದಕ್ಕಿ ಗಂಜಿ ಎಂದು ಹೆಸರಿಟ್ಟು ಕುಡಿಸುತ್ತಿದ್ದಳು. ಇದೇ ಅಭ್ಯಾಸವಾಗಿ ಹುರಿದಕ್ಕಿ ಗಂಜಿಯ ತರಹ ಇರುವುದು ಯಾವುದನ್ನೇ ಆಗಲಿ ಕುಡಿದರೆ ಜ್ವರ ನೆಗಡಿ ಬಂದಹಾಗೇ ನನ್ನ ಮೈ ಇರುಸುಮುರುಸುಗೊಳ್ಳುತ್ತಿತ್ತು. ಈ ಗಂಜಿಯನ್ನು ಈ ಛಳಿ ರಾಜ್ಯದಲ್ಲಿ ಕುಡಿದರೆ ಖಂಡಿತ ಜ್ವರ ಬಂದುಬಿಡುತ್ತೆ ಅನ್ನುವ ಭಯ ಹುಟ್ಟಿ, ತಟ್ಟೆಯನ್ನು ಹಾಗೆಯೇ ಬಿಟ್ಟೆ. ಬರೀ ರೊಟ್ಟಿ ಚೂರು, ಬೆಣ್ಣೆಗಳಲ್ಲಿಯೇ ತೃಪ್ತೋಸ್ಮಿ ಎಂದೆ.

ಈ ಹೊತ್ತಿಗೆ ಮಾಂಸಾಹಾರಿಗಳೆಲ್ಲಾ ತಂತಮ್ಮ ತಟ್ಟೆಗಳನ್ನು ಪೂರ್ಣವಾಗಿ ಹೀರಿಬಿಡುತ್ತಿದ್ದರು. ಹೆಣ ತಿನ್ನುವವರಿಗೆ ರುಚಿಯ ಪ್ರಾಮುಖ್ಯತೆ ಅಷ್ಟಾಗಿ ಇರುಲ್ಲವೇನೋ?

ತಟ್ಟೆ ಬದಲಾಯಿಸಿ, ಎರಡನೇ ಸಾರಿ ಬಡಿಸುವುದು ತರಕಾರಿ, ಅನ್ನ ಮತ್ತು ಒಂದು ತರಹ ಗೊಜ್ಜು - ಸಾಸ್. ಎಂತೆಂತಹ ದಿವನಾದ ತರಕಾರಿ ಅಂತೀರಿ ! ಆಲೂಗಡ್ಡೆ, ಈರುಳ್ಳಿ, ಹುರುಳಿಕಾಯಿ, ದೊಡ್ಡ ಮೆಣಸಿನ ಕಾಯಿ, ಕೋಸು ಗೆಡ್ಡೆ, ಮೂಲಂಗಿ, ಬೀಟ್‌ರೂಟ್, ಒಂದೇ ಎರಡೇ ! ಎಳೆ ತರಕಾರಿಗಳು, ಅಂದ ಕಾಣುವ ಬೆಂದ ತರಕಾರಿಗಳು, ಇದನ್ನೂ ತಿಂದೇ ಬದುಕಬಹುದು ಎನ್ನುಸುತ್ತಿತ್ತು. ಆದರೆ ನೋಡಿ ! ಈ ಬೆಂದ ತರಕಾರಿಗಳನ್ನು ತಟ್ಟೆಯಲ್ಲಿಟ್ಟು, ಅದರ ಮೇಲೆ, ಅನ್ನದ ಮೇಲೆ ತುಪ್ಪ ಬಡಿಸುಲ್ಲವೇ ಹಾಗೆ, ಎಂತದೋ ಒಂದು ಜಿಡ್ಡು ಪದಾರ್ಥವನ್ನು ಸುರಿದು ಬಿಡುತ್ತಿದ್ದರು. ಲೋಳೆ ಲೋಳೆಯಾದ ಈ ಪದಾರ್ಥದ ವಾಸನೆಯೋ, ಕೊಳೆತ ಹುಲಿಯ ಕೊಬ್ಬಿನ ವಾಸನೆ ! ವಾಸನೆ ಬರುತ್ತಿದ್ದ ಹಾಗೆ ವಾಕರಿಕೆಗೇ ಶುರುವಾಗುತ್ತಿತ್ತು. ಎಷ್ಟೇ ಹಸಿವಿದ್ದರೂ ತಿನ್ನಲು ಸಾಧ್ಯವಾಗುತ್ತಿರಲಿಲ್ಲ.

ಅಕ್ಕಿ ಅಲ್ಲಿ ಸಿಗುತ್ತಿತ್ತು. ಆದರೆ ಎಲ್ಲರೂ ಗೋಧಿಯನ್ನೇ ತಿನ್ನುತ್ತಾರೆ. ಅದಕ್ಕೇ ಅವರಿಗೆ ಅಕ್ಕಿ ಮೇಲೆ ಆಸೆ, ನೆಂಟರ ಮೇಲೆ ಪ್ರೀತಿಯೇನೋ ? ಬೇಯಿಸಿದರೆ ಎಲ್ಲಿ ನೊಂದುಕೊಳ್ಳುತ್ತೊ ಅಂತ, ಎರಡು ಚೊಂಬು ಬಿಸಿ ನೀರನ್ನು ಅಕ್ಕಿಯ ಮೇಲೆ ಹಾಕಿ, ಬೇಗ ಒರೆಸಿ, ಮಡಿಯಾಗಿ ಅದನ್ನು ತಂದು ಬಡಿಸುತ್ತಿದ್ದರು. ಆಸೆಯಿಂದ ತಿನ್ನಲು ಶುರು ಮಾಡಿದ ನಾವು, ಬಾಯಿಗೆ ಅಕ್ಕಿ ಕಾಳು ಹಾಕಿಕೊಂಡು ಬೇಗ ಉಗಿದು, ಬಾಳನ್ನು ಶಪಿಸುತ್ತಿದ್ದೆವು. ಎರಡು ಮೂರು ಬಾರಿ ಭಾರಿ ಗ್ಲಾಸು ನೀರನ್ನು ಕುಡಿದು ತೇಗುತ್ತಿದ್ದೆವು.

ಮಾಂಸಾಹಾರಿಗಳಾದರೋ ಈ ವೇಳೆಯಲ್ಲಿ ಕಟಂ ಕಟಂ ಅಂತ ಎಲ್ಲರಿಗೂ ಕೇಳಿಸುವ ಹಾಗೆ ಅಗಿದಿದ್ದೂ ಅಗಿದಿದ್ದೇ ! ಲೊಟ್ಟೆ ಹೊಡೆದಿದ್ದೂ ಹೊಡೆದಿದ್ದೇ ! ಹಲ್ಲು ಸಂಧಿ ಗಳಿಗೆ ಕಡ್ಡಿ ಸಿಕ್ಕಿಸಿ ಚುಚ್ಚಿದ್ದೂ ಚುಚ್ಚಿದ್ದೇ ! ಬಾಯಿ ಒರೆಸಿಕೊಂಡಿದ್ದೂ ಒರೆಸಿಕೊಂಡಿದ್ದೇ !

ಇದ್ದ ಹೊಟ್ಟೆ ಉರಿ ಅವರನ್ನು ನೋಡಿದಾಗ, ಸ್ವಲ್ಪ ಸ್ವಲ್ಪವಾಗಿ ಹೆಚ್ಚಾಗುತ್ತಲೇ ಇತ್ತು.

ಅಂದು ಮಧ್ಯಾಹ್ನ ಈ ಹೊಟ್ಟೆ ಉರಿಯು ಉಲ್ಬಣವಾಗುವ ಹೊತ್ತಿಗೆ ನಮ್ಮೊಡನೆ ಊರಿಂದ ಬಂದಿದ್ದ ಮಾರ್ಗಸಖ ಬಂದ. ನನ್ನ ಪಕ್ಕದಲ್ಲೇ ಕುಳಿತುಕೊಂಡ. "ಯಾಕಪ್ಪಾ ! ಊಟಕ್ಕೆ ಇಷ್ಟು ಹೊತ್ತಾಗಿ ಬಂದೆ ? ಹೊತ್ತಿಗೆ ಸರಿಯಾಗಿ ಊಟ ಮಾಡದೆ ಇದ್ದರೆ ಆರೋಗ್ಯ ಕೆಡುತ್ತಲ್ಲಪ್ಪ ? ಊಟ ಆದ ಮೇಲೆ ಕೆಲಸ ಮಾಡಬಹುದಲ್ಲಾ" ಎಂದು ಆದರದಿಂದ ಹೇಳಿದೆ.

"ಮಾಸ್ಕೋದಿಂದ ನಾಡಿದ್ದು ಸ್ಟಾಕ್ ಹೋಂಗೆ ಹೋಗಲು, ಇಲ್ಯೂಷಿಯನ್ ವಿಮಾನವನ್ನು ಗೊತ್ತುಮಾಡಿದ್ದೆವು. ಆದರೆ ಮೂರು ದಿನಗಳ ಹಿಂದೆ ಇಲ್ಯೂಷಿಯನ್ ಒಂದು ಮಧ್ಯಾಕಾಶದಲ್ಲಿ ಸಿಡಿದುಹೋಯಿತು. ಹಾಗೆ ಸಿಡಿದುದರ ಕಾರಣವನ್ನು

ಕಂಡುಹಿಡಿಯಬೇಕೆಂದೂ, ಆತನಕ ಎಲ್ಲಾ ಇಲ್ಯೂಷಿಯನ್ ವಿಮಾನಗಳ ಹಾರಾಟವನ್ನು ಬಂದ್ ಮಾಡಬೇಕೆಂದು ಸರ್ಕಾರದ ಆಜ್ಞೆಯಾಗಿದೆ. ಆದಕಾರಣ ಕೊನೆಯ ಗಳಿಗೆಯಲ್ಲಿ ಬೇರೆ ಕಂಪೆನಿಯವರನ್ನು ಹಿಡಿದು, ತಾಜಾಮಾಡಿ, ನಮ್ಮ ಪ್ರಯಾಣದ ಏರ್ಪಾಡು ಮಾಡಬೇಕಾಯಿತು. ಅವರನ್ನ ಇವರನ್ನ ಕಂಡು, ಅಲ್ಲಿಗೆ ಇಲ್ಲಿಗೆ ಹೋಗಿ ಕಡೆಗೆ ಫಿನ್‌ಲೆಂಡ್ ವಿಮಾನ ಸಂಸ್ಥೆಯವರು ಒಪ್ಪಿಕೊಂಡರು. ಇದನ್ನೆಲ್ಲಾ ಸುಸೂತ್ರಗೊಳಿಸುವುದಕ್ಕೆ ಇಷ್ಟು ಹೊತ್ತಾಯಿತು, ಬೆಳಿಗ್ಗೆ ಕಾಫಿ ಕುಡಿದು ಹೊರಟಿದ್ದೆ'' ಎಂದು ವಿವರಣೆ ಕೊಟ್ಟ.

ಮಾಂಸಾಹಾರಿಗಳ, ಮೇಜುಗಳ ಬಳಿ, ಚಮಚ ಮುಳ್ಳುಗಳ ಟಣ್, ಟಣ್, ನಡೆಯುತ್ತಲೇ ಇತ್ತು. ಯಾಕೋ ತಲೆಯಲ್ಲಿ ಕುಹಕ ಉದ್ಭವಿಸಿತು.

ಎದ್ದೆ. ಆ ಮೇಜುಗಳ ಹತ್ತಿರ ಹೋದೆ. ಆತುರದಿಂದ, ಕಾತುರದಿಂದ ಅವರುಗಳನ್ನು ಕೇಳಿದೆ. ''ನಿಮಗೊತ್ತೆ ? ಆಕಾಶದಲ್ಲಿ ಇಲ್ಯೂಷಿಯನ್ ವಿಮಾನ ಸಿಡಿದು ಹೋಯಿತು ಮೊನ್ನೆ ಅನ್ನೋ ಸುದ್ದಿ!''

'ಸಿಡಿದರೇನಂತೆ ? ನಾನಿರಲಿಲ್ಲವಲ್ಲ ಅದರಲ್ಲಿ' ಎಂದ ತಿಂದುತೇಗುತ್ತಿದ್ದ ಮಾಂಸಾಹಾರಿಯೊಬ್ಬ.

''ಹೌದು ! ಅದರಲ್ಲಿ ನೀನಿತ್ತಿಲ್ಲ. ಅದೇ ನನ್ನ ಕೊರಗಿಗೂ ಕಾರಣ ? ಆದರೆ ಅದಕ್ಕಲ್ಲ ನಾನು ಹೇಳಿದ್ದು. ವಿಮಾನ ಸಿಡಿದ ಸುದ್ದಿ ಮಾಸ್ಕೊ ರೇಡಿಯೋ ಲಂಡನ್ನಿನ ಆಕಾಶವಾಣಿ, ಭಾರತದ ಆಕಾಶವಾಣಿ, ಇವುಗಳಲ್ಲೆಲ್ಲಾ ಪ್ರಸಾರವಾಗಿರುತ್ತೆ. ಸಿಡಿದ ಆ ಇಲ್ಯೂಷಿನ್ನಲ್ಲಿ ನಾವು ಪ್ರಯಾಣ ಮಾಡುತ್ತಿರಬಹುದು ಎಂದು ನಮ್ಮನಮ್ಮ ಮನೆಯವರಿಗೆ ಅನುಮಾನ ಬರುವುದಿಲ್ಲವೇ ? ಅನುಮಾನ ಬಂದು ಅವರೆಲ್ಲಾ ಕೊರಗುವುದಿಲ್ಲವೇ'' ಎಂದೆ. ಬಿಡಿಸಿ ಬಿಡಿಸಿ ಹೇಳಿದೆ.

ಮಾಂಸಾಹಾರಿ ಮೇಜುಗಳ ಬಳಿ ಕುಳಿತಿದ್ದವರೆಲ್ಲಾ ಛಂಗ್ ಎಂತ ಎದ್ದರು. ಹೆಂಗಸರು ಗಂಡಸರು ; ಕೂದಲು ನರೆತವರು, ಕೂದಲೇ ಇಲ್ಲದವರು ; ಮುದುಕರು ಹುಡುಗರು ; ಎಲ್ಲರೂ ಸರ್ರಂತ ಎದ್ದು ತಮ್ಮ ತಮ್ಮ ಮನೆಯವರಿಗೆ ಕ್ಷೇಮವಾಗಿದ್ದೇವೆ ಎಂದು ಕಾಗದ ಬರೆಯಲು ಓಡಿದರು.

ಸಸ್ಯಾಹಾರಿಗಳೂ ಕೂಡ ನನ್ನ ಮಾತನ್ನು ಕೇಳಿಸಿಕೊಂಡಿದ್ದರು. ಅವರೂ ಮೆಲ್ಲಮೆಲ್ಲಗೆ ಏಳುತ್ತಿದ್ದರು. ಅವರನ್ನು ಉದ್ದೇಶಿಸಿ ಹೇಳಿದೆ ''ಕೂತುಕೊಳ್ಳಿ ! ಬೇಗ ಕಾಗದ ಬರೆದರೆ, ಬರೆದು ಅಂಚೆಪೆಟ್ಟಿಗೆಗೆ ಹಾಕಿದರೆ, ಅದು ನಮ್ಮೂರನ್ನು ಬೇಗ ತಲಪುತ್ಯೇ ? ಸೆನ್ಸಾರ್‌ಆಗಿ, ಟ್ಯ್ರಾಷ್‌ಕಂಟಿನಲ್ಲಿ ಒಂದು ವಾರ ಕೊಳೆತು ನಮ್ಮ ದೇಶ ಸೇರುಕ್ಕೆ 8-10 ದಿನಗಳಾದರೂ ಆಗ ಬೇಕು. ಸಾವಧಾನವಾಗಿ ಕೂತು ಈಗ ಬರುವ ಐಸ್‌ಕ್ರೀಂ, ಮತ್ತು ಹಣ್ಣುಗಳನ್ನು

ಹೊಟ್ಟೆತುಂಬಾ ತಿನ್ನೋಣ. ಹೇಗೂ ಮಾಂಸಾಹಾರಿಗಳು, ಎತ್ತು ಈಯಿತು ಎಂದರೆ ಕೊಟ್ಟಿಗೆಗೆ ಕಟ್ಟುಕ್ಕೆ ಓಡಿ ಹೋಗಿದ್ದಾರೆ. ಅವರ ಪಾಲಿನದನ್ನೂ ಮೆಲ್ಲೋಣ ಎಂದು ಸಮಾಧಾನಪಡಿಸಿದೆ. ರೈಲುಗಾಡಿಯಲ್ಲಿ ಪ್ರಯಾಣ ಮಾಡುವಾಗ, ಅದರೊಳಗೆ ನಾವು ಗಡಗಡ ಓಡಿದರೆ, ಸ್ಟೇಷನ್ನೇನೂ ಬೇಗ ಸಿಗುಲ್ಲ ಅಲ್ಲವೇನ್ರಿ ಎಂದು ಸಾಮಿತಿಯನ್ನು ಕೊಟ್ಟೆ.

ಆ ವೇಳೆಗೆ ಐಸ್‌ಕ್ರೀಂ ತಂದರು. ಹಣ್ಣುಗಳನ್ನೂ ತಂದರು. ಸಸ್ಯಾಹಾರಿಗಳು ನಾವೆಲ್ಲಾ ಕುಳಿತು ಮೂರು ಮೂರು ಐಸ್‌ಕ್ರೀಂ ತಿಂದೆವು. ಮೂರು ಮೂರು ಗೊಂಚಲು ಬಿಳಿದ್ರಾಕ್ಷಿಗಳನ್ನೂ ಮುಗಿಸಿದೆವು. ಮೈನೆರೆದಂತಿದ್ದ ಸೇಬಿನ ಹಣ್ಣುಗಳನ್ನು ಚಪ್ಪರಿಸುತ್ತಾ ತಿಂದೆವು. ಒಂದೊಂದು ಸೇಬಿನ ಹಣ್ಣು ತೆಂಗಿನಕಾಯಿಸ ಗಾತ್ರ ಇತ್ತು.

ಆ ವೇಳೆಗೆ ಮಾಂಸಾಹಾರಿಗಳೆಲ್ಲರೂ ಕಾಗದಗಳನ್ನು ಬರೆದು, ಅಂಟಿಸಿ ಅಂಚೆಗೆ ಹಾಕುಕ್ಕೆ ಸಿದ್ಧಮಾಡಿಕೊಂಡು ಬಂದರು. ''ಇಲ್ಲಿ ಅಂಚೆಗೆ ಹಾಕಬೇಡಿ. ಸ್ಟಾಕ್ ಹೋಮಿಗೆ ಹೋದನಂತರ ಹಾಕಿ. ಆಗ ಬೇಗ ನಮ್ಮೂರನ್ನು ತಲುಪಬಹುದು'' ಎಂದು ವಿಶದೀಕರಿಸಿ ಸಲಹೆಯಿತ್ತೆ.

ಖಾಲಿ ಐಸ್‌ಕ್ರೀಂ ಬಟ್ಟಲುಗಳನ್ನು ದ್ರಾಕ್ಷಿ ಬೀಜಗಳ ತಟ್ಟೆಗಳನ್ನೂ ಕಂಡ ಮಾಂಸಾಹಾರಿಗಳ ಮುಖ ಸ್ವಲ್ಪ ಪೆಚ್ಚಾಗಿಯೇ ಕಂಡುವು. ಅವಸರ ! ಮಾಂಸಾಹಾರಿಗಳಿಗೆ, ಮಾಂಸ ಕಂಡರೆ ಹರಿದು ಮುಕ್ಕುತ್ತಾರೆ. ಆಗ ಮೆದುಳಿಗೆ ರಜಾ ಕೊಡುತ್ತಾರೆ.

ಮಾಸ್ಕೋವಿನ ರೀಜನಲ್ ಆಸ್ಪತ್ರೆಗೆ ಒಂದು ಬೆಳಿಗ್ಗೆ ಭೇಟಿ ಇತ್ತೆವು. ಹೃದಯದ ಆಪರೇಷನ್, ಮೆದುಳಿನ ಶಸ್ತ್ರ ಚಿಕಿತ್ಸೆ, ಮೊದಲಾದ ಅತಿ ಸೂಕ್ಷ್ಮ ಚಿಕಿತ್ಸೆಗಳನ್ನೆಲ್ಲಾ ಮಾಡಲು ಎಲ್ಲಾ ಸೌಕರ್ಯಗಳಿದ್ದ ಆಸ್ಪತ್ರೆ. ಹೊಸಾಹೊಸ ದೊಡ್ಡ ಕಟ್ಟಡ. ಆಸ್ಪತ್ರೆಯಲ್ಲಿ ಹಿರಿಯ ಡಾಕ್ಟರಿಣಿ ರಷ್ಯನ್ ಭಾಷೆಯಲ್ಲಿ ಸ್ವಾಗತಿಸಿ ಭಾಷಣ ಮಂದಿರಕ್ಕೆ ಕರೆದೊಯ್ದಳು. ತನ್ನ ಸಂಗಡಿಗ ವೈದ್ಯರನ್ನು ಪರಿಚಯ ಮಾಡಿಕೊಟ್ಟಳು. ನಮ್ಮೊಡನಿದ್ದ ರಷ್ಯನ್ ಗೈಡ್ ಮಹಿಳೆಯೇ ಭಾಷಾಂತರ ಮಾಡುತ್ತಿದ್ದಳು.

ಆ ಆಸ್ಪತ್ರೆಯಲ್ಲಿ ಸುಮಾರು 2000 ವೈದ್ಯರಿದ್ದಾರೆಂದೂ, ಅವರ ಪೈಕಿ 40 ಜನ ಗಂಡಸರೆಂದೂ, ವಿದ್ಯಾರ್ಥಿಗಳ ವ್ಯಾಸಂಗಕ್ಕೆ ಅಲ್ಲಿ ಅವಕಾಶ ಇತ್ತೆಂದೂ ಸುಮಾರು 1000 ಹಾಸಿಗೆಗಳಿದೆಯೆಂದೂ, ತಿಳಿಯ ಬಂದಿತು. ರಸ್ತೆಗಳಲ್ಲಿ ಓಡಿಯಾಡುವಾಗ ಕಂಡ ರಷ್ಯನ್ ಮಹಿಳೆಯರು ಮತ್ತು ಮಹನೀಯರು ಸಾಮಾನ್ಯವಾಗಿ ಸ್ಥೂಲಕಾಯದವರು. ಕೆಲವರನಕ ಬೂಸಕ್ಕಗಳೇ ! ಆದರೆ ಈ ಆಸ್ಪತ್ರೆಯಲ್ಲಿ ಕೆಲಸ ಮಾಡುತ್ತಿದ್ದ ಹೆಣ್ಣು ಮಕ್ಕಳೆಲ್ಲಾ ಬಲು ಚೆಂದ ಕಾಣುತ್ತಿದ್ದ ಸಮಕಾಯರು. ವೇಷ ಭೂಷಣಗಳಿಂದ ಸಿನಿಮಾ ತಾರೆಯರು ರಾತ್ರಿ ವೇಳೆಯಲ್ಲಿ ಹೇಗೆ ಚೆಂದ ಕಾಣುತ್ತಾರೋ, ಆ ತೆರನಾದ ಚೆಲುವನ್ನು ಈ ಹೆಣ್ಣು ಡಾಕ್ಟರುಗಳು ದೈನಂದಿನ ಕೆಲಸ ಮಾಡುವಾಗಲೂ ಕಾಣಿಸುತ್ತಿದ್ದರು. ಸ್ವಾಭಾವಿಕ ಚೆಲುವು ಹಾಗಿರಬೇಕಾದರೆ,

ಮನಸ್ಸಿನಲ್ಲಿರುವ ಆಸೆಯನ್ನು ನಿತ್ಯಜೀವನದಲ್ಲಿ ತೀರಿಸಿಕೊಂಡವರಿಗೇ ಸಾಧ್ಯ ! ಅವರ ಕೆಲಸದಲ್ಲಿ ಅವರಿಗೆ ಅತಿ ಸಂತಸ, ತೃಪ್ತಿ ಇದ್ದೇ ಇರಬೇಕು.

ಆಸ್ಪತ್ರೆಯ ಎಲ್ಲ ವಿಭಾಗಗಳಿಗೂ ಕರೆದುಕೊಂಡು ಹೋಗಿ ವಿವರಿಸಿದರು. ಮಧ್ಯಾಹ್ನ ಹನ್ನೆರಡರ ಹೊತ್ತಿಗೆ ಭೇಟಿ ಮುಗಿಯಿತು. ಒಂದು ಗಂಟೆಯ ಹೊತ್ತಿಗೆ ನಮ್ಮ ಹೋಟಲಿಗೆ ಬಂದೆವು.

ಹೋಟಲಿನ ಹಜಾರದಲ್ಲಿ ದೊಂಬಿಯೋ ದೊಂಬಿ. ಒಂದು ಕಡೆ ನೂರಿನ್ನೂರು ಅಮೆರಿಕನ್ನರು–ಇನ್ನೊಂದು ಕಡೆ 30–40 ಆಫ್ರಿಕಾ ಜನಾಂಗದವರು. ಎತ್ತೇಣಿಯು ಬಿಡುವಿಲ್ಲದುದರಿಂದ ಹತ್ತಿರ ಇದ್ದ ಒಂದು ಕುರ್ಚಿಯ ಮೇಲೆ ಕುಳಿತೆ. ಅತ್ತ ಆಫ್ರಿಕನ್ ಹುಡುಗಿಯೊಬ್ಬಳು ಬಂದಳು. 18–20ರ ಪ್ರಾಯ. ಮೂರು ಮಕ್ಕಳನ್ನು ಹೊತ್ತು ಹೆತ್ತ ದೇಹ. ಮುಖ ಬಲು ಎಳಕು. ಕೆಳದುಟಿಯೇ ಪ್ರಾಮುಖ್ಯ. ಬಂದ ತುಸು ನಗುವನ್ನು ಸೂಸುತ್ತಾ "ಇಂಡಿಯಾ ! ಇಂಡಿಯಾ !" ಅಂದಳು ನನ್ನೆದುರಿಗೆ. ಎದ್ದು ನಿಂತು ಹ್ಞೂ ಅನ್ನುವಂತೆ ಕೋಲೆ ಬಸವನ ತರಹ ತಲೆಯಾಡಿಸಿದೆ. ಅವಳ ಭಾಷೆಯಲ್ಲಿ ಏನೇನನ್ನೋ ಅಂದಳು. "ಅಯ್ಯೋ ! ಮಹರಾಯಿತಿ ! ಮುಪ್ಪಿನ ಮುದುಕ ನನ್ನ ಯಾಕೆ ಸತಾಯಿಸ್ತಿ. ನೀನು ಹೇಳೋದು ಒಂದೂ ಅರ್ಥವಾಗುಲ್ಲವಲ್ಲೇ ! ಏನು ಬೇಕಾಗಿತ್ತೆ ನಿನಗೆ ? ಏನು ತೆವಲು ಹಿಡಿದಿದೆಯೇ ?" ಎಂದು ಅಚ್ಚ ಕನ್ನಡದಲ್ಲಿ ನಾನೂ ಮಾತನಾಡಿದೆ.

ಆಗ ಆಕೆ ಕೋಲೆ ಬಸವಿ ತರಹ ತಲೆಯಾಡಿಸಿ, ನನ್ನ ಕೈ ಹಿಡಿದು ಕುಲುಕಿದಳು. ಬಂಧುವಿನಂತೆ ಆದರದಿಂದ ಆಲಂಗಿಸಿದಳು...

ಹೊರಟುಹೋದಳು ಬ್ಯಾ ಬ್ಯಾ ಮಾಡುತ್ತಾ.

ಮುಖದ ಮೇಲಿನ ಎಂಜಲನ್ನು ಒರೆಸಿಕೊಂಡು, ಜೇಬಿನಲ್ಲಿಟ್ಟ ಕನ್ನಡಕ ಒಡೆದು ಹೋಗಿದೆಯೇ ನೋಡಿಕೊಂಡು, ಮೈ ಕೊಡವಿಕೊಳ್ಳುವ ವೇಳೆಗೆ ಎತ್ತೇಣಿ ಇಳಿದು ಬಂದಿತ್ತು. ಅದನ್ನು ಹೊಕ್ಕು ನನ್ನ ಕೊಠಡಿಯನ್ನು ಸೇರಿದೆ.

ಮಧ್ಯಾಹ್ನ ಇಳಿದು ಬಂದು ಸಂಗಡಿಗರಿಗಾಗಿ ಕಾಯುತ್ತಿದ್ದೆ, ಹಜಾರದಲ್ಲಿ. ಅಮೆರಿಕನ್ನನೊಬ್ಬ ಹೊರಗೆ ಹೋಗುವಾಗ, ಮೇಲಂಗಿಗಳನ್ನು ಇಡುವಲ್ಲಿಗೆ ಹೋಗಿ ಅಲ್ಲಿದ್ದ ರಷ್ಯನ್ನನಿಂದ ತನ್ನ ಅಂಗಿಯನ್ನು ಪಡೆದ. ಒಂದು ರೂಬಲ್‌ನ್ನೂ ಆತನಿಗೆ ಕೊಟ್ಟ. ಆ ರಷ್ಯನ್ ನೌಕರ ಎಷ್ಟು ತಿರಸ್ಕಾರದಿಂದ ಆ ಹಣವನ್ನು ನೋಡಿ — "ಕೆಲಸ ಮಾಡುವುದಕ್ಕೆ ಸರ್ಕಾರ ಸಂಬಳ ಕೊಡುತ್ತದೆ. ಈ ತೆರನ ಭಕ್ಷೀಸ್ ಇಲ್ಲಿ ಚಾಲ್ತಿಯಲ್ಲಿಲ್ಲ. ಮಾನವನ ಆತ್ಮಾಭಿಮಾನಕ್ಕೆ ಅದು ಕುಂದು ತರುತ್ತದೆ." ಎಂದು ಉಪದೇಶ ಮಾಡಿದ ಅಂತ ! ನಮ್ಮಲ್ಲೂ ಹೀಗಾದರೆ ಎಷ್ಟು ಚೆನ್ನ ಎಂದುಕೊಂಡೆ.

ಆ ಸಂಜೆ ಸುಸ್ತಾಗಿ ನನ್ನ ಕೊಠಡಿಯಲ್ಲಿರುವಾಗ ಫೋನ್ ಮಾಡಿ ಚಹಾ ತರಿಸಿಕೊಂಡೆ. ಹೇಗಿದ್ದರೂ ಭಕ್ಷೀಷ್ ಇಸುಕೊಳ್ಳುವುದಿಲ್ಲ, ಅಂತ ಧೈರ್ಯವಾಗಿ ಒಂದು ರೂಬಲ್, ರಷ್ಯನ್ ಪರಿಚಾರಕನಿಗೆ ಕೊಟ್ಟೆ. ಅವ ಮರುಮಾತಾಡದೆ ಸಲಾಂ ಹೊಡೆದು, ಹಣ ತೆಗೆದುಕೊಂಡು ಹೋಗೇಬಿಟ್ಟ. ಹಣವಂತ ಅಮೆರಿಕನ್ ಭಕ್ಷೀಷ್ ಬಹಿರಂಗವಾಗಿ ಕೊಟ್ಟರೆ ಬೇಡ ; ಬಡವ, ಇದ್ದ ಐದು ರೂಬಲ್‌ನಲ್ಲಿ ಒಂದನ್ನು ಕಾಣದ ಹಾಗೆ ಕೊಟ್ಟರೆ ಕಸಿದುಕೊಂಡೇಬಿಡೋದು. ಇದೇ ಜೀವನದ ಮರ್ಮ ಕೂಡ, ಅನ್ನಿಸಿತು. ಕಂಡವರ ಎದುರಿಗೆ ಕೆಂಡದಂತಾ ಕುಂದಿಲ್ಲದ ನಡವಳಿಕೆ ; ಕಾಣುವವರಿಲ್ಲದಾಗ, ಭಂಡತನದ ಮೃಗ ಜೀವನ.

ಒಂದು ಸಂಜೆ ಭಾರತ ರಷ್ಯಾ ಮೈತ್ರೀ ಸಂಘದ ಆಶ್ರಯದಲ್ಲಿ, ಮಾನ್ಯ ಸಚಿವೆಯ ಅಧ್ಯಕ್ಷತೆಯಲ್ಲಿ ನಮ್ಮ ತಂಡದವರಿಗೆ ಸತ್ಕಾರ ಕೂಟವನ್ನು ಏರ್ಪಡಿಸಲಾಗಿತ್ತು. ಸಚಿವೆಯು ಸಾಮಾನ್ಯರಂತೆಯೇ ಉಡುಪು ಧರಿಸಿದ್ದಳು. ಆಕೆಯ ಸ್ವಾಗತ ಭಾಷಣವಾದಮೇಲೆ, ಹಿರಿಯ ರಷ್ಯನ್ ವೈದ್ಯನೊಬ್ಬಾತ, ಭಾಷಣ ಮಾಡುತ್ತಾ ಚರಕ, ಶುಶ್ರುತ, ವಾಗ್ಭಟ, ಇಂತಹ ಪ್ರಚಂಡ ವೈದ್ಯರನ್ನು ಕಾಣಿಕೆಯಿತ್ತ ಭಾರತಕ್ಕೆ ಇಡೀ ಮಾನವ ಕುಲದ ಪರವಾಗಿ ಅಭಿನಂದನೆ ಸಲ್ಲಿಸಿದ. ಅರವತ್ತು ಮಂದಿ ಭಾರತೀಯರಿದ್ದ ನಮ್ಮ ತಂಡದಲ್ಲಿ ಯಾವೊಬ್ಬ ತಾಯಿ ಮಗನಿಗಾದರೂ, ಚರಕ ಸಂಹಿತೆಯಾಗಲಿ, ಶುಶ್ರುತನ ಸೂತ್ರಗಳಾಗಲಿ, ವಾಗ್ಭಟನ ಅಧ್ಯಯನವಾಗಲಿ ಪರಿಚಯುವಿದ್ದಿಲ್ಲ. ತಲೆ ತಗ್ಗಿಸಿಕೊಂಡು ಆತ ಹೇಳಿದ್ದನ್ನೆಲ್ಲಾ ಕೇಳಿ ನಮ್ಮ ಹಿರಿಯರು ಭಾರತದಲ್ಲಿ ಇಷ್ಟುಮಟ್ಟಿನ ಪ್ರಾಜ್ಞತೆಯನ್ನು ಹೊಂದಿದ್ದರೇ ? ಎಂದು ಆಶ್ಚರ್ಯಪಟ್ಟೆವು.

ಸಂಜೆಯ ಸತ್ಕಾರಕೂಟವಾದಮೇಲೆ, ಹೋಟಲಿಗೆ ಹೋಗಿ, ಉಂಡು, ರಾತ್ರಿಯ ಬಾಲೆ ನೃತ್ಯ ಪ್ರದರ್ಶನಕ್ಕೆಂದು ನಾಲ್ವರು ಹೊರಟೆವು. ಮೂರು ತಿಂಗಳ ಹಿಂದೆಯೇ ನೃತ್ಯ ಮಂದಿರದ ಸ್ಥಳಗಳೆಲ್ಲಾ ನಿಯಮಿತವಾದುದರಿಂದ ಪ್ರವೇಶ ಅಸಾಧ್ಯ ಎಂದು ತಿಳಿಯಿತು. ನೃತ್ಯ ಮಂದಿರದವರು "ಸೂತ್ರದ ಬೊಂಬೆ ಆಟ ನಡೆಯುತ್ತೆ ; ಇಲ್ಲೇ ಹತ್ತಿರದಲ್ಲೇ, ಹೋಗಿ ನೋಡಬಹುದು" ಎಂದು ಸಲಹೆ ಕೊಟ್ಟರು. ಅಲ್ಲಿಗೆ ಹೋದೆವು. ಆ ಥಿಯೇಟರ್ ಕೂಡ ಕಿಕ್ಕಿರಿದು ತುಂಬಿತ್ತು. ಆದರೂ ನಮಗೆ ಸ್ಥಳ ಮಾಡಿಕೊಟ್ಟರು. ಒಂದು ಮನೆತನದವರಂತೆ, ಆ ಸೂತ್ರದ ಬೊಂಬೆ ಆಟ ಆಡಿದವರು. ಎಷ್ಟು ಚೆನ್ನಾಗಿ ಮೂರು ನಾಲ್ಕು ವ್ಯಕ್ತಿಗಳು, ಬೈಸಿಕಲ್ ಸವಾರಿ, ಹುಲಿ, ಸಿಂಹ, ಇತ್ಯಾದಿಗಳಿಂದ ಆಟವಾಡಿದರು ಅಂತ !

ರಾತ್ರಿ ಆಟ ಮುಗಿದಮೇಲೆ ಹೊರ ಬಂದಾಗ 1 ಗಂಟೆ. ಬಸ್ಸುಗಳು ಸಿಗಲಿಲ್ಲ. ನಡೆದು ಹಿಂತಿರುಗುವುದಕ್ಕೆ ರಸ್ತೆ ತಿಳಿಯದು ನಮಗೆ. ಕಡೆಗೆ ರಷ್ಯನ್ ಪೊಲೀಸಿನವನ ದಯೆಯಿಂದ ಟ್ಯಾಕ್ಸಿಯಲ್ಲಿ ಹೋಟಲಿಗೆ ಹಿಂತಿರುಗಿದೆವು.

ರಾತ್ರಿ ನಿದ್ರೆಯಲ್ಲಿ ಕೂಡ ಸೂತ್ರದ ಬೊಂಬೆಗಳ ಆಟದ ಕನಸೇ !

ಮಾರನೆಯ ದಿನ ಬೆಳಿಗ್ಗೆ ಹತ್ತು ಗಂಟೆ ಹೊತ್ತಿಗೆ ಮಸ್ಕ್ಯಾವ ವಿಮಾನ ನಿಲ್ದಾಣವನ್ನು ಸೇರಿ, ಸ್ವಾಕ್ ಹೋಂಗೆ ಪ್ರಯಾಣ ಮಾಡಲು, ವಿಮಾನವನ್ನು ಹತ್ತಿದೆವು. ಮಾಸ್ಕೋನಲ್ಲಿ ಬಂದಿಳಿದಾಗ ನಮ್ಮ ಪ್ಯಾಸ್‌ಪೋರ್ಟ್‌ಗಳನ್ನು ಅಧಿಕಾರಿಗಳು ತೆಗೆದುಕೊಂಡಿದ್ದರು. ಅವರ ದೇಶವನ್ನು ಬಿಡುವಾಗಲೇ ಆ ಪ್ಯಾಸ್‌ಪೋರ್ಟ್‌ಗಳನ್ನು ಹಿಂತಿರುಗಿ ಕೊಟ್ಟಿದ್ದು.

# ಸ್ಟಕ್-ಹೋಂ

"ಸ್ಟಕ್ ಹೋಮಿನ ಹೆಸರಿನಲ್ಲಿ, ನಿಮ್ಮನ್ನು ಸ್ವಾಗತಿಸುತ್ತೇನೆ" ಎನ್ನುತ್ತಾ ವಿಮಾನ ನಿಲ್ದಾಣದಲ್ಲಿ "ಮಾರ್ಗಮಿತ್ರ"ನು ನಮ್ಮನ್ನು ಎದುರ್ಗೊಂಡ. ಹುಡುಗನಾಗಿದ್ದಾಗ "ಸ್ಟಾಕ್ ಹೋಂನಲ್ಲಿ ಜರ್ಮನ್ ಸಿಲ್ವರ್ ಪಾತ್ರೆಗಳು" ಅಂತ ಉರು ಹೊಡೆದಿದ್ದ ನನಗೆ ಇವನ್ಯಾಕೆ ಸ್ಟಕ್ ಹೋಂ ಅಂತಾನೆ, ಸರಿಯಾಗಿ ಇಂಗ್ಲೀಷಿನಲ್ಲಿ ಉಚ್ಚಾರ ಮಾಡುಕ್ಕೂ ಬರುಲ್ವಲ್ಲ ಅಂತ ಒಂದು ಕ್ಷಣ ಅನ್ನಿಸಿತು. ಆದರೆ ಹಿಂಡಿಗೆ ಹಿಂಡೇ ಬಸ್ ಹತ್ತಿರಕ್ಕೆ ಸುಂಕದ ಕಟ್ಟೇನ ತಟಾಯಿಸ್ಕೊಂಡು ಓಡುತ್ತಾ ಇತ್ತು. ಹೊರಲಾರದ ಅಂಗಿ ಹೊತ್ತು ನಾನೂ ಧಸ ಬುಸ ಅಂತ ಹಿಂಡು ಸೇರಬೇಕಾಯ್ತು. ಅಂದಮೇಲೆ ಯೋಚನೆಗೆ ಅವಕಾಶವೆಲ್ಲಿ?

* * * *

ಬಸ್‌ನಲ್ಲಿ ಎಲ್ಲರೂ ಕುಳಿತೆವು. ತುಂತುರು ಹನಿ ಹಾಕುತ್ತಾ ಇತ್ತು. ಆ ಊರಿನ ಮಾರ್ಗಮಿತ್ರ ಪ್ಯಾಲೆಸ್ ಹೋಟಲಿನಲ್ಲಿ ನಿಮಗೆಲ್ಲಾ ಅಣಿ ಮಾಡಿದ್ದೇವೆ ಎಂದು ಹೇಳಿ ನಮ್ಮೂರಿನ ಮಾರ್ಗದರ್ಶಕರೊಡನೆ ಮಾತಾಡ್ತಾ ಕೂತುಬಿಟ್ಟ. ಬಸ್ ಹೊರಟಿತು.

ನಮ್ಮ ಮಲೆನಾಡು ತರಹಾನೆ ಆ ಊರು. ಬೆಟ್ಟದ, ಗುಡ್ಡದ ಅಂಚಿನಲ್ಲೇ ರಸ್ತೆ. ಎಂಟ್ಹತ್ತು ಅಂತಸ್ತಿನ ಮನೆಗಳು, ಆ ಗುಡ್ಡಗಳ ಮೇಲೇನೇ. ಎತ್ತರವಾಗಿ ಬೆಳೆದಿದ್ದ ಮರಗಳು. ಫರ್ಲಾಂಗಿಗೊಂದು ಸಣ್ಣ ಸೇತುವೆ. ಕೆಳಗೊಂದು ನಾಲೆ. ಎಲ್ಲಾ ದಕ್ಷಿಣ ಕನ್ನಡದ ತರಹಾನೆ! ಅದೇ ಸೊಗಸು, ಅದೇ ಚಂದ.

ಪೇಟೆ ದೊಡ್ಡ ರಸ್ತೆ ಸಿಕ್ಕಿತು ಎದುರು-ಬದುರು, ನಾಲ್ಕು-ನಾಲ್ಕು ಮೋಟಾರು ಬಸ್ಸುಗಳು ಎದೆಗೆ ಎದೆ ಸಮುಗೂಡಿಸಿ ಹೋಗಬಹುದಾದ ರಸ್ತೆ. ಮಧ್ಯದಲ್ಲೆಲ್ಲೋ ರಸ್ತೆ ಎಡಕ್ಕೆ ಬಸ್ಸು ನಿಂತಿತು. ಎಲ್ಲರೂ ಇಳಿದೆವು. ಪ್ಯಾಲೆಸ್ ಹೋಟೇಲ್ ಅಂತ ದೊಡ್ಡ ವಿದ್ಯುತ್ ಹಲಗೆ ಮಿಣುಕುತ್ತಿತ್ತು.

ಹೋಟಲೊಳಕ್ಕೆ ಕಾಲಿಟ್ಟೆವು. ಮೊದಲು ಹೋದ ಧಡಿಯ ಸ್ವಲ್ಪ ಜಾರಿದ. ಜಾರಿದವ ಬೇಗ ಎಚ್ಚೆತ್ತು ಸಗಣಿ ಮೇಲೆ ನಡೆಯೋನ ಹಾಗೆ ಮೆಲ್ಲಮೆಲ್ಲಗೆ ಖಾಲಿ ಇದ್ದ ಕುರ್ಚಿ ಬಳಿಗೆ ಹೋಗಿ ಕುಳಿತ. ಇದನ್ನು ನೋಡುತ್ತಿದ್ದಾಗ ನಾನು ಬಾಗಿಲ ಹತ್ತಿರವಿದ್ದ ಕಾಲ್ಹಾಸೆ ಮೇಲೆ ನಿಂತಿದ್ದೆ. ಹುಷಾರಾದೆ. ಹೆಜ್ಜೆಯ ಮೇಲೊಂದ್ಹೆಜ್ಜೆಯನಿಕ್ಕುತ, ಗೆಜ್ಜೆಯ ಕಾಲ ಶಬ್ದವ ಮಾಡದೆ, ಮೆಲ್ಲಗೆ ಹತ್ತಿರವಿದ್ದ ಕುರ್ಚೀನ ನಾನೂ ಹಿಡಿದು ಕೂತೆ. ಕೂತ ಮೇಲೆ ಬೂಡ್ಸಿನ ಅಂಗಾಲು ನೋಡಿದೆ ಸಿಡುಬೆದ್ದ ಕಲೆ ಅದಕ್ಕಿತ್ತು. ಅಷ್ಟು ಹೊತ್ತಿಗೆ ಸರ್ ಅಂತ ಹರಿದ ಶಬ್ದವಾಯಿತು. ಕಣ್ಣೆತ್ತಿದೆ. ಏನು ಕಂಡಿದ್ದು ಅಂತೀರಿ !

ನಾನು ಕೂತಿದ್ದ ಕಡೆಯಿಂದ ಎಡಭಾಗದಲ್ಲಿ ಇಪ್ಪತ್ತು ಹೆಜ್ಜೆ ಹಾಕಿದರೆ ಹೋಟೆಲಿನ ಕಚೇರಿ ವರ್ಗದವರು ಕೆಲಸ ಮಾಡುವ ದೊಡ್ಡ ಮೇಜು. ಬಲ ಭಾಗದಲ್ಲಿ ಇಪ್ಪತ್ತು ಹೆಜ್ಜೆ ನಡೆದರೆ ಮಹಡಿಗೆ ಹೋಗುವ ಎತ್ತೇಣಿಗಳ ಕೊಠಡಿ.

ಕಣ್ಣೆತ್ತಿ ನೋಡಿದಾಗ, ಎಡಗಡೆ ಕೌಂಟರಿನಿಂದ, ಬಲಗಡೆ ಎತ್ತೇಣಿ ಬಳಿಗೆ ನಲವತ್ತೂ ಗಜ ದೂರವನ್ನು ಸುರಸುಂದರಿಯೊಬ್ಬಳು "ಜಾರು"ತ್ತಿದ್ದಳು. ಸುಮಾರು ಆರಡಿ ಎತ್ತರವಿರ ಬಹುದು ಆಕಿ, ಆ ಊರಿನವರೆಲ್ಲರ ತರಹ ! ಸೊಂಟಕ್ಕೆ ಅವಳೇನಾದರೂ ಪಟ್ಟಿ ಮಾಡಿಸಬೇಕಾದರೆ ಹನ್ನೆರಡು ಅಂಗುಲದ್ದೇ ಸಾಕಾಗ್ತಿತ್ತು. ಎಳೆ ಮುಖ. ಇನ್ನೂ ಚಿಗಳಿತಿಂದ ಕಳೇನೇ ಇರಲಿಲ್ಲ. ಚೂಪಾದ ಹಿಮ್ಮಡಿ ಇದ್ದ ಥಳಥಳಿಸುತ್ತಿದ್ದ ಷೂಗಳನ್ನು ಹಾಕಿಕೊಂಡಿದ್ದಳು. ಕೌಂಟರಿನ ಹತ್ತಿರ ಹೋಗಿ ತನ್ನ ಕೊಠಡಿಯ ಬೀಗದಕ್ಕೆ ತೆಗೆದುಕೊಂಡಿದ್ದಳು. ಅವಸರದ ವಯಸ್ಸು, ಬೇಗ ತಿರುಗುತ್ತಿದ್ದಳು. ಆಗಲೇ ಹಿಮ್ಮಡಿಯ ಚೂಪು ನುಣುಪಾದ ನೆಲದಮೇಲೆ ಅಪ್ಪಾಲೆ ತಿಪ್ಪಾಲೆ ತಿರುಗಿತ್ತು. ಅದೇನೇನೋ ಸರ್ರ್ ! ಅಂತ ನನ್ನ ಎಚ್ಚರಗೊಳಿಸಿದ್ದು ! ನೋಡ್ತಾನೇ ಇದೀನಿ. ಬಲಗಾಲನ್ನು ಮುಂದಿಟ್ಟಳು. ಜಾರಿದಳು. ಬಲಗಾಲು ಮುಂದ್ಹೋಯ್ತು. ಎಡಗಾಲು ಹಿಂದಾಯ್ತು. ಕತ್ತರಿ ತರಹ ಕೂತುಕೊಂಡಳು. ಅರೆಕ್ಷಣ ಚಿಮ್ಮಿ ನಿಂತಳು. ತಿರುಗಿ ನಾಲ್ಕು ಗಜ ಜಾರಿದಳು. ನಾಲ್ಕು ಸರ್ತಿ ಹೀಗೆ "ಕತ್ತರಿ ನಾಚು" ಮಾಡೋವೇಳೆಗೆ ಎತ್ತೇಣಿ ಬಾಗಿಲ ಹತ್ತಿರಕ್ಕೆ ಹೋಗಿದ್ದಳು. ಎತ್ತೇಣಿ ಬಾಗಿಲು ತೆಗೆದಿತ್ತು. ಅದನ್ನು ಸೇರಿಕೊಂಡಳು ಮುಖ ಒರೆಸಿಕೊಂಡಳು. ಎತ್ತೇಣಿ ಬಾಗಿಲು ಮುಚ್ಚಿಕೊಂಡಿತು. ಆಗ ನಾನು ಮುಖ ಒರೆಸಿಕೊಂಡೆ. ಎಲ ಎಲಾ! ನನಗೆ ಹೀಗಾಗಿದ್ದರೆ, ನಾನು ಮೊದಲೇ ಹುಷಾರಾಗಿಲ್ಲದಿದ್ದರೆ ಇದ್ದುದೊಂದು ಷರಾಯನ್ನ ಹರಿದುಕೊಂಡು ಬಿಡ್ತಿದ್ದೆನಲ್ಲಾ ! ದೇವರೇ ಕಾಪಾಡಿದ. ನೆಲನೋಡಿಕೊಂಡು ನಡೀಬೇಕು ಈ ಹೋಟಲಲ್ಲಿ ಬಂದೋರು ಹೋದೋರನ್ನ ನೋಡ್ತಾ ಇದ್ದರೆ ಉಡುಪಿಗೆ ಊನ, ಅನ್ನೋ ವಿಷಯವನ್ನು ಮಂದಟ್ಟು ಮಾಡಿಕೊಂಡೆ.

"ಈ ಬೆಳಿಗ್ಗೇನೆ ಊರು ನೋಡಿಕೊಂಡು ಬರೋಣ ! ಮಳೆ ಬರ್ತಾ ಇದೆ. ಆಸ್ಪತ್ರೆಗಳನ್ನು ನೋಡಲು ಈಗ ಸಾಧ್ಯವಿಲ್ಲ, ಬೇಗ ಫಲಾಹಾರ ಮುಗಿಸಿ" ಎಂದು "ಮಾರ್ಗ ಮಿತ್ರ" ಹೇಳಿದ. ಫಲಾಹಾರ ಅಂತಿದ್ದ ಹಾಗೇನೇ ಎಲ್ಲರೂ ಶಾಖಾಹಾರಿಗಳು ಧೌಡು

ಒಡಿದೆವು ಇದ್ದ ಬ್ರೆಡ್ಡು ಬೆಣ್ಣೆಗಳನ್ನೆಲ್ಲಾ ಲಪಟಾಯಿಸಿಬಿಟ್ಟರೆ ಆಮೇಲೆ ಹೇಗಾರೂ ಆಗಲಿ ಅಂತ. ನಮ್ಮ ಮೇಜಿನ ಬಳಿಗೆ ಬಂದ ಮಾಣಿ ಬಲು ಚೆನ್ನಾಗಿ ಇಂಗ್ಲೀಷ್ ಮಾತನಾಡುತ್ತಿದ್ದ. 18-20ರ ಚೆಂದುಳ್ಳಿ ಗಂಡು : ನಿಮ್ದು ಯಾವೂರಪ್ಪ ಯಾವ ಸೀಮೆಯೋನು ಎಂದು ಕೇಳಿದೆ. ಅವನಂದ, ''ನಾನು ಇಂಗ್ಲೆಂಡಿನೋನು, ಲಂಡನ್ನೇ ಹುಟ್ಟೂರು. ಅಡಿಗೆ ಕೆಲಸ ಕಲಿತುಕೊಳ್ಳುಕ್ಕೆ ಅಂತ ಮೂರನೆ ವರ್ಷದ ವ್ಯಾಸಂಗಕ್ಕೆ ನಮ್ಮನ್ನ ಹೊರದೇಶಗಳಿಗೆ ಕಳಿಸ್ತಾರೆ ನನ್ನ ಇಲ್ಲಿಗೆ ಕಳಿಸಿದರು. ಶಾಖಾಹಾರದ ಪ್ರವೀಣತೆಗೆ ನಾನು ವ್ಯಾಸಂಗ ಮಾಡ್ತಾ ಇದೀನಿ'' ಅಂದ ''ಹಾಗಾರೆ ನಮಗೆ ಒಳ್ಳೇದೇ ಆಯಿತು. ಏನಡಿಗೆ ಇವತ್ತು ನಿಮ್ಮನೇಲಿ, ನಮಗೆ ಸಪ್ಪೆ ಅಂದರೆ ಸೇರುಲ್ಲ ನೋಡಪ್ಪ ! ಕಡೆಗೆ ಉಪ್ಪಿನಕಾಯೋ, ಚಟ್ನಿಪುಡೀನೋ ಇದ್ದರೆ ಸಾಕು'' ಎಂದೆ. ಅವ ನಕ್ಕ. ಹೊರಟುಹೋದ ಏನೇನೋ ತಂದು ಬಡಿಸಿದ. ಬಡಿಸಿದ ಊಟಕ್ಕಿಂತ ಹಾಕಿದ ತಟ್ಟೆ ಎಷ್ಟು ಲಕ್ಷಣವಾಗಿತ್ತು, ಅಂತ, ಹೊಳೀತಾ ಇತ್ತು.

ಒಂದು ಚಮಚ ಬಾಯಿಗೆ ಹಾಕಿಕೊಂಡೆ. ತಬ್ಬಲಿ ರುಚಿ. ಅಸಹ್ಯ ಆಗೋ ಹಾಗೇನಿತ್ತಿಲ್ಲ. ಆದರೆ ಅದಕ್ಕೆ ತಂದೆ ತಾಯಿ ಇತ್ತಿಲ್ಲ. ಗೋತ್ರ ಪ್ರವರ ಇತ್ತಿಲ್ಲ. ಎಲ್ಲೋ ಹುಟ್ಟಿ ಹೇಗೋ ಬೆಳೆದು, ಬೇಯಿಸಿಕೊಂಡು ಬಿದ್ದಿತ್ತು ನಮ್ಮ ಮುಂದೆ. ಬ್ರೆಡ್ಡು ಚೂರನ್ನು ತೆಗೆದುಕೊಂಡೆ. ಅದೇತಾನೇನೇ ಆ ದೇಶಗಳಲ್ಲಿ ಜೀವನದ ಊರುಗೋಲು !

ಅಷ್ಟು ಹೊತ್ತಿಗೆ ಆ ಇಂಗ್ಲೀಷ್ ಮಾಣಿ ಬಂದ. ಒಂದು ಸಣ್ಣ ಡಬ್ಬೀನ ತಂದಿದ್ದ. ಅದನ್ನು ನನ್ನೆದುರಿಗೆ ಇಟ್ಟ. ''ಲಂಡನ್ನಿನಲ್ಲಿದ್ದಾಗ ದೇವರಾಯ ಸಮುದ್ರದವರು ಒಬ್ಬರು ಸಂಸಾರ ಮಾಡಿಕೊಂಡಿದ್ದರು. ಅವರ ಮನೆಗೆ ಆಗಾಗ್ಗೆ ಹೋಗ್ತಾ ಇದ್ದೆ. ಅವರ ಮನೇಲಿ ಹಿಟ್ಟನ್ನು ಉಬ್ಬಿಸಿ ಬನ್ ತರಹ ತಿಂಡಿ ಮಾಡ್ತಾ ಇದ್ದರು. ಆ ಪುಡೀನ ಅದಕ್ಕೆ ಹಾಕಿಕೊಂಡು ಬೆಣ್ಣೆ ಸವರಿ ತಿಂದರೆ ರುಚಿ ಏರುತ್ತಿತ್ತು. ಅವರಿಂದಲೇ ನಾನು ಒಂದು ಪುಟ್ಟಡಬ್ಬ ಇಸುಕೊಂಡು ಈ ಊರಿಗೆ ಬಂದೆ ಬೇಜಾರಾದಾಗ ಕೈನೆರವಾಗಿರಲಿ ಅಂತ. ನಿಮ್ಮನ್ನು ನೋಡಿದಾಗ, ಕೊಡೋಣ ಸ್ವಲ್ಪ ಅನ್ನಿಸ್ತು ಅಂದ. ಕರಿಬೇವಿನಸೊಪ್ಪು, ಮೆಂತ್ಯ, ಹುರಿಗಡಲೆ, ದಿಟವಾಗಲೂ ಅಂತ ಚಟ್ಣಿಪುಡೀನ ನಮ್ಮೂರಲ್ಲಿದ್ದಾಗಲೂ ತಿಂದಿರಲಿಲ್ಲ. ಏನು ತಂದು ಬಡಿಸಿದ್ದನೋ ಅದಕ್ಕೆಲ್ಲ ಇದನ್ನು ಕಲೆಸಿ ತಿಂದೆ, ತೇಗಿದ. 'ಅನ್ನದಾತಾ ಸುಖೀಭವ' ಅಂತ ಹೇಳಿ ಆ ಮಾಣಿಗೆ 'ದೀರ್ಘಾಯುಷ್ಯಮಸ್ತು' ಅಂತ ಸಂಸ್ಕೃತದಲ್ಲೇ ಆಶೀರ್ವಾದ ಮಾಡಿದೆ.

ಅಲ್ಲಿಂದ ಬಸ್ಸಿನಲ್ಲಿ ಎಲ್ಲರೂ ಕುಳಿತೆವು. ಮಾರ್ಗಮಿತ್ರ ತನ್ನ ವರದಿಯನ್ನು ರಷ್ಯಾದಲ್ಲಿನಂತೆಯೇ ಶುರುಹಚ್ಚುತ್ತಾನೆ ಅಂತಿದ್ದೆ. ಆದರ ಅವನು ನಾಲಿಗೇನು ಛೂಬಿಟ್ಟಾಗ, ಅದಕ್ಕೇನು ಅಂಕೆ ಶಿಕ್ಷೆ ಇದ್ದಹಾಗಿರಲಿಲ್ಲ. ಸರ್ಕಾರ, ಅಧಿಕಾರಗಳು ಅನ್ನೋ ಭಯವೇ ಇರಲಿಲ್ಲ. ''ನಮ್ಮದು ಸಮತಾ ಸಮಾಜ. ನಮ್ಮ ನೆರೆಯವರದು ಅಂತ ಪೂರ್ವದ ಕಡೆಗೆ ಬೆರಳ ತೋರಿಸಿ, ಕಮ್ಯೂನಿಸಂ ! ನಮ್ಮಲ್ಲೂ ಕಮ್ಯೂನಿಷ್ಟರು ಇದಾರೆ. ಸಾಕಷ್ಟು ಇದಾರೆ. ಆದರೆ ಪ್ರಜೆಗಳ್ಯಾರೂ ಲಕ್ಷ್ಯವೇ ಮಾಡುಲ್ಲ. ಇವರಾದರೇನು, ಅವರಾದರೇನು, ಇಬ್ಬರೂ

ಒಂದೇ ಮಾಡೋದು. ಅವರು ಮಾಡೋದು ಮಾಡಿಕೊಳ್ಳಲಿ. ನಮಗೆ ಮಾತನಾಡುಕ್ಕೆ ಸ್ವಾತಂತ್ರ್ಯ ಇದ್ದರೆ ಸಾಕು'' ಎಂದು ಪೀಠಿಕೆ ಹಾಕುತ್ತ.

ಆ ಸ್ಥಳ, ಈ ಕಟ್ಟಡ, ದೊಡ್ಡ ನಾಲೆ, ಚಿಕ್ಕ ನಾಯಿ ಎಲ್ಲವನ್ನೂ ವಿವರಿಸ್ತಾ ವಿವರಿಸ್ತಾ, ''ನೀವೇನಾದರೂ ಕೇಳೋದಿದ್ದರೆ ಕೇಳಿ'' ಅಂತ ಹೇಳಿದ.

ಅಷ್ಟೂ ದೂರ ರಸ್ತೆಯ ಎರಡೂ ಕಡೆಗಳಲ್ಲಿ, ನಮ್ಮ ಹಳ್ಳಿ ಸಂತೇಲಿ ಗಾಡಿಗಳನ್ನು ಒಂದರ ಹಿಂದೆ ಒಂದು ಬಿಚ್ಚಿ ಬಿಟ್ಟಿರುಲ್ಲವೇ, ಹಾಗೆ, ಅಲ್ಲಿ ತರಹಾವಾರಿ ಮೋಟಾರುಗಳು ನಿಂತಿದ್ದುವು. ಒಂದು ರಸ್ತೇಲಿ ಸುಮಾರು 60-80. ಎಂಟಡಿ ಕಂಚಿ ಕಡಸಿನಿಂದ ಶುರುವಾಗಿ, ಹದಿನಾರಡಿ ಹುಲಿ, ಮೂವತ್ತಡಿ ತಿಮಿಂಗಿಲದ ತರಹ ಇದ್ದ ಮೋಟಾರು ಗಾಡಿಗಳು — ಇವನ್ನು ಕಂಡು ಹೊಟ್ಟೆಗಿಚ್ಚಾಗಿತ್ತು.

''ಇದೇನು ಇಷ್ಟು ಮೋಟಾರುಗಳು, ಈ ಊರಲ್ಲಿ! ಬಿಕೋ ಅಂತ ಬೀದಿ ಬಸವಗಳ ಹಾಗೆ ಬಿದ್ದಿವೆಯಲ್ಲಾ'' ಎಂದು ಕೇಳಿದೆ.

ಮಾರ್ಗಮಿತ್ರ ರಸ್ತೇನ ನೋಡಿದ. ''ನಿಮ್ಮ ಪ್ರಶ್ನೆ ಅರ್ಥವಾಯಿತು. ನಮ್ಮೂರಲ್ಲಿ ಆರು ಜನಕ್ಕೆ ಒಂದು ಮೋಟಾರುಕಾರು ಇದೆ. ಎಲ್ಲ ತರಹಾ ಕಾರುಗಳೂ ಇವೆ. ಮೂರು ಜನಕ್ಕೆ ಒಂದು ಮನೆ ಇದೆ. ಇಬ್ಬರಿದ್ದರೆ ಮನೆ ; ಮೂರು ಜನ ಇದ್ದರೆ ಸಂತೆ ಅಲ್ಲವೇ ? ಮೂರು ಹೆಂಗಸರಿದ್ದಾರೆ ಒಬ್ಬ ಗಂಡಸಿಗೆ. ಎಲ್ಲ ತರಹಾ ಹೆಂಗಸರೂ ಇದ್ದಾರೆ ಎಲ್ಲಾರೂ ಸಂಪಾದಿಸ್ತಾರೆ. ಗಂಡಸರು ಖುಷಿಯಾಗಿದ್ದಾರೆ. ಅದಕ್ಕೇ ನೋಡಿ, ಜೋಡೀಗೊಂದು ಕಾರು ಬೇಕೇಬೇಕು. ಮನೆ ಮಡದಿ ಇದ್ದರೆ ಬೇಕೇಬೇಕು. ಮನೆ ಇಲ್ಲದೆ ಇದ್ದರೆ ಅತ್ಯವಶ್ಯಕ'' ಎಂದ.

ನನಗೆ ಎರಡು ಕಾರಿದೆ ಆದರೆ ನನ್ನ ಹೆಂಡತಿಗೆ ಗೊತ್ತಿಲ್ಲ ಅಂತ ಕಣ್ಣು ಹೊಡೆದೆ. 50 ರ ಪ್ರಾಯ ಮಾರ್ಗಮಿತ್ರನಿಗೆ. ಈಗರ್ಥವಾಯ್ತು ''ಸ್ಟಾಕ್ ಹೋಂ'' ಅಂತ ಯಾಕೆ ಕರೀತಾರೆ ಅಂತ. ಸ್ಟಾಕ್ ಇಲ್ಲ ಹೋಂನಲ್ಲಿ ಪಾಪ ! ಸ್ಟಾಕ್ !

ಮಾರನೆಯ ದಿನ ಸ್ಟಾಕ್ ಹೋಂಇನ ಪ್ರಸಿದ್ಧ ಸೆರಾಫಿಂ ಆಸ್ಪತ್ರೆಗೆ ಯಾತ್ರೆ ಹೊರಟೆವು. ಪುಟಾಣಿ ರಾಜ್ಯದಂತಿರುವ ಈ ಅಗಾಧ ಆಸ್ಪತ್ರೆಯಲ್ಲಿ ಒಂದು ಕಡೆಯಿಂದ ಎದುರು ತುದಿಗೆ ಹೋಗಬೇಕಾದರೆ, ತಿರುಪತಿ ಬೆಟ್ಟ ಹತ್ತಿದಷ್ಟು ಸುಸ್ತಾಗುತ್ತದೆ. ವೈದ್ಯ ವಿಜ್ಞಾನದ ಎಲ್ಲ ಭಾಗಗಳೂ ಇಲ್ಲಿ ಅತ್ಯುತ್ತಮ ರೀತಿಯಲ್ಲಿ ಕೆಲಸ ಮಾಡುತ್ತಿವೆ. ವೈದ್ಯರೆಲ್ಲರೂ ಹೊಟ್ಟೆ ತುಂಬಿದ ಸಂತಸದಿಂದಿದ್ದವರಂತೆ ಕಾಣಿಸಿದರು. ರೋಗಿಗಳೂ ಹಾಗೆ. ಬಡವರು ಯಾರು ಶ್ರೀಮಂತರು ಯಾರು ಎಂದು ಆಸ್ಪತ್ರೆಯ ರೋಗಿಗಳಲ್ಲಿ ಗುರುತಿಸುವುದು ಕಷ್ಟ ಕಂಡಿತು.

ಇಷ್ಟಕ್ಕೆಲ್ಲಾ ಆಗುವ ಖರ್ಚನ್ನು ಸರಕಾರ ಹೇಗೆ ವಹಿಸಲು ಸಾಧ್ಯ ಎಂದು ಅಚ್ಚರಿಪಟ್ಟೆ. ನಮ್ಮ ಜತೆಯಿದ್ದ ಸ್ವೀಡಿಷ್ ಡಾಕ್ಟರನ್ನು ಕೇಳಿದಾಗ ಆತ ವಿವರಣೆ ಕೊಟ್ಟ. ''ಎಲ್ಲ ಪ್ರಜೆಗಳೂ

ಆರೋಗ್ಯ ವಿಮೆಗೆ ಒಳಗಾಗಿದ್ದಾರೆ, ಆದುದರಿಂದ ಯಾರಾದರೂ ಕಾಯಿಲೆ ಬಿದ್ದರೆ, ವಿಮಾ ಕಂಪೆನಿಯು ಚಿಕಿತ್ಸಾ ವೆಚ್ಚವನ್ನೆಲ್ಲಾ ಹೊರುತ್ತದೆ. ಹಾಗಾಗಿ ಅತ್ಯುತ್ತಮ ವೈದ್ಯಕೀಯ ನೆರವನ್ನು ನೀಡಲು ಸುಲಭ'' ಎಂದು.

ವೈದ್ಯಕೀಯ ವಿಜ್ಞಾನದ ನೊಬೆಲ್ ಪಾರಿತೋಷಕಗಳನ್ನು ನಿರ್ಣಯಿಸುವ ಸಂಸ್ಥೆಯ ಹಲವಾರು ಸದಸ್ಯರು ಈ ಆಸ್ಪತ್ರೆಯಲ್ಲಿ ಹಿರಿಯ ವೈದ್ಯರಾಗಿದ್ದಾರೆ. ಅಂದಮೇಲೆ ಆಸ್ಪತ್ರೆಯ ವೈದ್ಯ ವಿಜ್ಞಾನದ ಉನ್ನತ ಮಟ್ಟವನ್ನು ಸುಲಭವಾಗಿ ಊಹಿಸಬಹುದು.

ಸಾಮಾಜಿಕ ವೈದ್ಯ ನೆರವು, ಮತ್ತು ಆ ತೆರನಾದ ವಿಷಯಗಳ ಮೇಲೆ ಆಸ್ಪತ್ರೆಯ ವೈದ್ಯರುಗಳು ಭಾಷಣಗಳನ್ನಿತ್ತರು. ಸ್ವೀಡಿಷ್ ಭಾಷೆಯನ್ನು ಎಲ್ಲರೂ ಮಾತನಾಡುವವು ದಾದರೂ, ಸುಮಾರು ಜನರಿಗೆ ಇಂಗ್ಲಿಷ್ ಚೆನ್ನಾಗಿ ಗೊತ್ತು. ಹಾಗಾಗಿ ಭಾಷಾ ಬಹಿಷ್ಕಾರವನ್ನು ನಾವು ಅನುಭವಿಸಲಿಲ್ಲ.

ವೈದ್ಯ ಯಂತ್ರಗಳನ್ನು ತಯಾರಿಸುವ ಹಿರಿಯ ಸಂಸ್ಥೆಗೆ ಮಧ್ಯಾಹ್ನ ಭೇಟಿ ಏರ್ಪಡಿಸಲಾಗಿತ್ತು. ಸ್ಟೈನ್‌ಲೆಸ್ ಸ್ಟೀಲಿಗೆ ಹೆಸರಾದ ಸ್ವೀಡನ್ನಿನಲ್ಲಿ ಉತ್ತಮ ಶಸ್ತ್ರೋಪಕರಣ ಗಳನ್ನು ತಯಾರಿಸುವುದು ಸ್ವಾಭಾವಿಕ. ಆದರೆ ಮೋಜು ಕಂಡ ಒಂದು ವಿಷಯವೆಂದರೆ, ಜರ್ಮನಿಯ ಹೆಸರಾಂತ ಸಂಸ್ಥೆಯೊಂದರ ಪರವಾಗಿ ಇಲ್ಲಿ ಯಂತ್ರೋಪಕರಣಗಳನ್ನು ತಯಾರಿಸುತ್ತಿದ್ದರು. ಜರ್ಮನ್ ಸಂಸ್ಥೆಯ ಗುರುತು ಚೀಟಿಯನ್ನು ಇಲ್ಲೇ ಲಗತ್ತಿಸುತ್ತಿದ್ದರು. ಮುಂದುವರೆದ ರಾಷ್ಟ್ರಗಳ ಪರಸ್ಪರ ಸಹಾಯದ ಮಾದರಿ ಇದು ! ಹಿಂದುಳಿದ ರಾಷ್ಟ್ರಗಳ ಕಣ್ಣಿಗೆ ಮಣ್ಣೆರೆಚುವುದಕ್ಕೆ !!

ಸ್ಟಕ್ ಹೋಮಿನ ಪ್ರಸಿದ್ಧ ಆಸ್ಪತ್ರೆಗಳಲ್ಲಿ ಕೆರೊಲಿನ್ಸ್ಕಾ ಅಗ್ರ ಸ್ಥಾನವನ್ನು ಹೊಂದಿದೆ. ಈ ಆಸ್ಪತ್ರೆಗೆ ಯಾತ್ರೆ ಹೋದಾಗ, ನಮ್ಮ ತಂಡದವರನ್ನು ಮೂರು ಭಾಗಗಳನ್ನಾಗಿ ಮಾಡಿ, ಒಂದೊಂದು ತಂಡದ 20 ಜನರನ್ನು ಒಬ್ಬೊಬ್ಬ ವೈದ್ಯರು ಆಸ್ಪತ್ರೆಯ ವಿವಿಧ ಭಾಗಗಳ ಭೇಟಿಗೆ ಕರೆದುಕೊಂಡು ಹೋದರು. ನಮ್ಮ ತಂಡ ಮೊದಲು ಮಕ್ಕಳ ವಿಭಾಗಕ್ಕೆ ಹೋಯಿತು. ಎಂಟು ಮಹಡಿ ಇರುವ ಈ ಆಸ್ಪತ್ರಾ ವಿಭಾಗವು ಮಕ್ಕಳಿಗೆ ಮೀಸಲು. ನಾಲ್ಕು ಮಕ್ಕಳಿಗೆ ಒಂದು ವಾರ್ಡು. ಒಂದು ವಾರ್ಡಿಗೆ ಒಂದು ದಾದಿ. ಹನ್ನೆರಡು ವಾರ್ಡುಗಳು, ಡಾಕ್ಟರು, ದಾದಿಗಳ ಕೊಠಡಿಗಳು, ಪರೀಕ್ಷಾ ಕೊಠಡಿ, ಇಷ್ಟೂ ಒಂದು ಮಹಡಿಯಲ್ಲಿ. ಮಕ್ಕಳ ಶಸ್ತ್ರ ಚಿಕಿತ್ಸೆಗೆಂದೇ ಎರಡು ಮಹಡಿಗಳು ನಿಯಮಿತವಾಗಿದೆ. ಸ್ನಾತಕೋತ್ತರ ಅಭ್ಯಾಸಕ್ಕೆ ನಮ್ಮ ಭಾರತೀಯ ವೈದ್ಯನೊಬ್ಬ ಅಲ್ಲಿ ಕೆಲಸ ಮಾಡುತ್ತಿದ್ದ. ತೆಲುಗಿನಲ್ಲಿ ಅವನೊಡನೆ ಮಾತನಾಡಿದಾಗ, ಏನೋ ಐಶ್ವರ್ಯ ದೊರಕಿದವನಂತೆ ಆತ ಹಿಗ್ಗಿದ. ಏನೆಲ್ಲಾ ಕಲಿತೆ ಎಂದು ಕೇಳಿದೆ. ಮಕ್ಕಳ ಶಸ್ತ್ರ ಚಿಕಿತ್ಸೆಯ ಹಲವಾರು ಮುಖ್ಯ ವಿಷಯಗಳನ್ನು ಕಲಿತೆ. ಆದರೆ ನಮ್ಮೂರಿಗೆ ಹೋದಮೇಲೆ ಈ ಜ್ಞಾನವನ್ನು ಉಪಯೋಗಿಸಲು ಸಾಧ್ಯವಾಗಲಾರದು, ಅಲ್ಲಿನ ಪರಿಸ್ಥಿತಿಯೇ ಬೇರೆ ಇಲ್ಲಿನ ಪರಿಸ್ಥಿತಿಯೇ ಬೇರೆ. ಆದರೆ ಇಲ್ಲಿ ಕಲಿತು ಕಂಡುದನ್ನೆಲ್ಲಾ ಒಂದು

'ವರದಿ'ಯಲ್ಲಿ ಬರೆದು ನಮ್ಮ ಅಧಿಕಾರಿಗಳಿಗೆ ಕಳಿಸಿದರೆ ನನ್ನ ಭವಿಷ್ಯವಾದರೂ ಉತ್ತಮವಾಗಬಹುದು ಎಂದು ಹೇಳಿದ.

ಅನಂತರ ಎಕ್ಸ್‌ರೇ ವಿಭಾಗಕ್ಕೆ ಹೋದೆವು. ನಮ್ಮೂರಿನ ದೊಡ್ಡ ಆಸ್ಪತ್ರೆಯಷ್ಟು ಆ ವಿಭಾಗ. ಏನೆಲ್ಲಾ ಯಂತ್ರಗಳು ! ಎಷ್ಟೆಲ್ಲಾ ಆಧುನಿಕವಾದ ಸಲಕರಣೆಗಳು ! ಎಂತೆಂತಹ ಸೌಕರ್ಯಗಳು ರೋಗಿಗಳಿಗೆ !! ಎಲ್ಲೆಲ್ಲೂ ಟೆಲಿವಿಷನ್ ಸೌಕರ್ಯ !

ಆರನೆ ಮಹಡಿಯಿಂದ ಕೆಳಗೆ ಇಳಿಯಲು ಐದು ಜನ ನಾವು ಮತ್ತು ಆಸ್ಪತ್ರೆಯ ಸಿಬ್ಬಂದಿಯೊಬ್ಬ ಎತ್ತೇಣಿಯಲ್ಲಿ ನಿಂತೆವು. ಎತ್ತೇಣಿ ಇಳಿಯಿತು. ನೆಲದ ಮಟ್ಟಕ್ಕೆ ಬಂದು ನಿಂತಿತು. ಆದರೆ ಎತ್ತೇಣಿ(ಲಿಫ್ಟಿನ)ಯ ಬಾಗಿಲನ್ನು ತೆಗೆಯಲಾಗಲಿಲ್ಲ. ಕಾರಣ, ನೆಲದ ಮಟ್ಟಕ್ಕಿಂತ ಮೂರು ಅಂಗುಲ ಕೆಳಕ್ಕೆ ಲಿಫ್ಟ್ ಇಳಿದಿತ್ತು. ನಾವೆಲ್ಲ ಎಷ್ಟು ಕೂಗಿದರೂ ಯಾರಿಗೂ ಕೇಳಿಸುತ್ತಿರಲಿಲ್ಲ. ಆಕಸ್ಮಿಕವಾಗಿ ಯಾರೋ ಬಂದು ಲಿಫ್ಟಿನ ಪುಟಾಣಿ ಕಿಟಕಿಯಲ್ಲಿ ನಮ್ಮನ್ನು ಕಂಡು ತಲೆ ಅಲ್ಲಾಡಿಸಿ ಹೋದರು.

ಒಂದು ಯುಗವಾಯಿತು. ನಾವೆಲ್ಲಾ ಬೆವತುಹೋಗಿದ್ದೆವು. ಉಸಿರು ಕಟ್ಟುತ್ತೇನೋ ಇನ್ನೊಂದು ಯುಗ ಆದರೆ, ಅನ್ನುವ ಹೆದರಿಕೆ ಬೇರೆ. ಕಡೆಗೆ ಮೆಲ್ಲ ಮೆಲ್ಲಗೆ ಲಿಫ್ಟ್ ಎದ್ದಿತು. ಅಂಗುಲ ಅಂಗುಲವಾಗಿ ಎದ್ದಿತು. ಲಿಫ್ಟಿನ ಬಾಗಿಲು ತೆಗೆಯುವಂತಾದಾಗ ಜಿಂಕೆಗಳಂತೆ ನಾವೆಲ್ಲಾ ಒಟ್ಟಿಗೆ ಹೊರಕ್ಕೆ ಹಾರಿದೆವು.

ಅತ್ಯಾಧುನಿಕ ಸಲಕರಣೆಗಳಿರುವ, ಅಷ್ಟೈಶ್ವರ್ಯವನ್ನು ಖರ್ಚು ಮಾಡುವ ಈ ಹೆಸರಾಂತ ಆಸ್ಪತ್ರೆಯಲ್ಲೂ, ನಮ್ಮೂರ ತರಹಾ 'ಲಿಫ್ಟ್' ತೊಂದರೆಗಳೇ !!

ಸೆಪ್ಟೆಂಬರ್ ತಿಂಗಳಿನಲ್ಲಿ ನಾವು ಸ್ಟಾಕ್ ಹೋಂನಲ್ಲಿದ್ದುದು. ರಾತ್ರಿ ಎಂಟು ಗಂಟೆಯಾದಾಗಲೂ, ಇಲ್ಲಿ ಬೇಸಿಗೆಯ ಸಂಜೆ ಐದರ ಹೊತ್ತಿನಲ್ಲಿರುವಷ್ಟು ಬೆಳಕು. ರಾತ್ರಿ ಊಟವೆಲ್ಲಾ ಬಿಸಿಲಡಿಗೆ ಊಟವೇ ! ಕೊಠಡಿಯ ಕಿಟಕಿಗಳಿಗೆಲ್ಲಾ ದಪ್ಪನಾದ ಮುಸುಕು ಹಾಕಿ ಮಲಗಬೇಕು. ಬೆಳಿಗ್ಗೆ ನಾಲ್ಕರ ಹೊತ್ತಿಗೆ ತಿರುಗಿ ಬಿಸಿಲು. ಇನ್ನೂ ಉತ್ತರಕ್ಕೆ ಹೋದರೆ ಆರು ತಿಂಗಳು ಹಗಲು – ಆರು ತಿಂಗಳು ರಾತ್ರಿಯಂತೆ. ಹೊಸ ಸ್ಥಳ. ಹೊಸ ಹೊಸ ಮುಖಗಳು, ಹೊಟ್ಟೆಯುರಿಸುವ ಆಸ್ಪತ್ರಾ ಸೌಕರ್ಯಗಳು, ಹೊಸ ತರಹಾ ಊಟ ; ಹೊಸ ತರಹಾ ಬಿಸಿಲು ; ನಿದ್ರೆಯೇ ಬರುತ್ತಿರಲಿಲ್ಲ. ಮೂರು ದಿನವೂ ಒಂದು ರೀತಿಯಾಗಿ ಶಿವರಾತ್ರೆ ಜಾಗರಣೆ ಮಾಡಿದಂತೆಯೇ ಆಯಿತು. ಒಂದಿಷ್ಟು ಬಿಲ್ಪತ್ರೆ ಇದ್ದಿದ್ದರೆ, ಅದನ್ನಾರೂ ಅರ್ಚಿಸಿ, ಪುಣ್ಯ ಕಟ್ಟಿಕೊಳ್ಳಬಹುದಾಗಿತ್ತು. ಶಿವಾಲಯ ಇತ್ತೇ ಅಲ್ಲಿ ಎಂದು ಕೇಳಿದಿರಾ ? ಶಿವನಿಲ್ಲದ ತಾವುಂಟೇ ?

ಸೆಪ್ಟೆಂಬರ್ ಎರಡರಂದು ಸ್ಟಾಕ್ ಹೋಂಇನ ಬ್ರಾ ವಿಮಾನ ನಿಲ್ದಾಣದಲ್ಲಿ ಕೋಪನ್ ಹ್ಯಾಗನ್ನಿಗೆ ಪ್ರಯಾಣ ಹೊರಟೆವು.

# ಕೋಪಣ ಹ್ಯಾಗನ

ಸ್ಟಾಕ್‌ಹೋಂ ಬಿಟ್ಟಾಗ ನೆತ್ತಿಯ ಮೇಲಿದ್ದ ಸೂರ್ಯ. ವಿಮಾನದೊಳಗೆ ನನ್ನ ಪಕ್ಕದಲ್ಲಿ ಕೂತಿದ್ದಾತ, ಮಲಯಾಳದಿಂದ ಬಂದಿದ್ದ ವೈದ್ಯ ಭ್ರಾತೃ. ನಿಲ್ದಾಣದಿಂದ ವಿಮಾನಕ್ಕೆ ಹೋಗೋ ಹೊತ್ತಿಗೆ ಸುಸ್ತಾಗಿದ್ದೆ. ಉಣ್ಣೆ ಬನಿಯನ್, ನೈಲಾನ್ ಷರ್ಟು, ಸ್ವೆಟರು ಅಂಗಿ, ಮೇಲೆ ದೊಡ್ಡಂಗಿ. ಅಂಗಿ ಮೇಲಂಗಿ. ಶಾನುಭೋಗನ ತಂಗಿ ಹಾಗೆ, ಬಸುರಾದ ಕಳೆ ನನ್ನ ಮೀಶೆ ಹೊತ್ತ ಮೊಗದ ಮೇಲೆ ಬೆವರಿಳಿಸ್ತಾ ಇತ್ತು. ಹಾಗಾಗಿ ಎಲ್ಲಿಗೆ ಹೋಗ್ತಾ ಇರೋದು ಅನ್ನೋದನ್ನೆ ಮರೆತುಬಿಟ್ಟಿದ್ದೆ. ಪಕ್ಕದಾತನನ್ನು ಕೇಳಿದೆ ಈಗೆಲ್ಲಿಗೆ ಹೋಗೋದು ಎಂದು. ಲಂಡನ್ನಿಗೆ ಅಂತ ಮಸುಕು ಮಸಕಾಗಿ ನೆನಪು. ಲಂಡನ್ನಿಗಲ್ಲವೇ ಎಂದೂ ಸೇರಿಸಿದೆ. ''ಣೋ ! ಣೋ !'' ''ಕೋಪಣ ಹ್ಯಾಗನ್'' ಎಂದ. ಮಾರ್ಜಾಲ ಸಂರಕ್ಷಣಾರ್ಥಂ ಇದು ಯಾವ ಕೋಪಣ ? ಹ್ಯಾಗನ ಎಂದರೇನು ? ಮಲೆಯಾಳದ ಭಾಷೇಲಿ ಏನಾದರೂ ಆತ ಮಾತನಾಡಿದನೋ. ನಾನಾದರೋ ಜಾಮಾತೃಭಾಷೆ ಇಂಗ್ಲೀಷಿನಲ್ಲೇ ಅವನನ್ನು ಮಾತನಾಡಿಸಿದ್ದು. ಮಾತೃಭಾಷೆಯ ಮೋಡದಿಂದ ಆತನೇನಾದರೂ ಹೀಗಂದಿರಬಹುದೇ ಎಂದು ಯೋಚನೆ ಮಾಡುತ್ತಿದ್ದಾಗ, ಗಗನಸಖಿ ಹತ್ತಿರ ಬಂದಳು. ತಾಯಿ ಮಕ್ಕಳಿಗೆ ಪೆಪ್ಪರಮಿಂಟು ಕೊಡೋ ಹಾಗೆ, ಆಕೆ ಪೆಪ್ಪರಮೆಂಟು ತಟ್ಟೆ ನನ್ನೆದುರಿಗೆ ಹಿಡಿದಳು. Next stop ? ಎಂದು ಕಣ್ಣು ಹುಬ್ಬು ಹಾರಿಸಿದೆ, ಆಕೆಯನ್ನು ನೋಡಿ. ಕೋಪರ್ಹ ಹ್ಯಾಗ್ರ್ ಎಂದು ಬಾಯ್ಬಿಟ್ಟು ಚಿನ್ನದ ಕಟ್ಟು ಹಾಕಿದ ಹಲ್ಲು ತೋರಿಸಿದಳು. ನನ್ನ ಭ್ರಾತೃ ಆಡಿದ ಭಾಷೆ ಇಂಗ್ಲೀಷೇ ಅಂತ ಆಗ ಗೊತ್ತಾಯಿತು.

ಕೋಪನ್ ಹ್ಯಾಗನ್ನಿನ ವಿಮಾನ ನಿಲ್ದಾಣದಲ್ಲಿ ಎರಡು ಗಂಟೆ ಕಾಲ ಕಾಯಬೇಕಾಗಿತ್ತು; ಲಂಡನ್ನಿನ ವಿಮಾನವನ್ನು ಹತ್ತಿ ಹೋಗಲು. ಈ ಕಾರಣಕ್ಕೇ ಏನೋ ಸುಂಕ ರಹಿತವಾದ ಅಂಗಡಿ ಮಾಳವೊಂದನ್ನು ಕಟ್ಟಿದ್ದಾರೆ. ಊರೊಳಕ್ಕೆ ಹೋಗದೇ ಇರೋರು ಇಲ್ಲಿ ಸಾಮಾನು ಕೊಂಡರೆ ಸುಂಕ ಕೊಡಬೇಕಾಗಿಲ್ಲ. ಅಂದರೆ ಬೆಲೆಯಲ್ಲಿ ಕನಿಷ್ಠ ಪಕ್ಷ ಮೂರನೆ ಒಂದು ಭಾಗದಷ್ಟು, ಕೆಲ ಸಮಯ ಮೂರನೆ ಎರಡು ಭಾಗದಷ್ಟು ಉಳಿತಾಯವಾಗುತ್ತೆ. ಇರೋದು

ಎರಡು ಗಂಟೆ ವಿರಾಮ, ಆದಷ್ಟು ಸಾಮಾನು ತೊಗೋಬೇಕು ಅಂತ ಎಲ್ಲರಿಗೂ ಉತ್ಸಾಹ. ಟಗರುಗಳು ನುಗ್ಗಿದ ಹಾಗೆ ನುಗ್ಗಿದರು. ಒಂದೊಂದು ಅಂಗಡಿ ಎದುರಿನಲ್ಲೂ ನಮ್ಮ ನಮ್ಮವರೇ , ಭೂರಿ ದಕ್ಷಿಣೆ ಹಂಚಿದಾಗಲೂ ಹೀಗೆ ಜನ ನುಗ್ಗೋದನ್ನು ನೋಡಿರಲಿಲ್ಲ.

ಒಂದು ತಾಸು ಮುಗಿದಿರಬಹುದು. ಆದರೆ ಅಷ್ಟು ಹೊತ್ತಿನಲ್ಲಿ ಇದ್ದ ಹಣವೆಲ್ಲಾ ಮುಗಿದುಹೋಗಿತ್ತು, ಸುಮಾರು ಜನರ ಜೇಬಿನಲ್ಲಿ. ಎಲ್ಲರೂ ಸುಸ್ತಾಗಿ ಬಂದು ಅಂಗಳದಲ್ಲಿ ಕೂತುಕೊಂಡರು. ಸುತ್ತಲೂ ಒಬ್ಬೊಬ್ಬರನ್ನಾಗಿ ನೋಡಿದೆ.

★ ★ ★ ★

ಋಷಿಪಂಚಮಿ ಮಾಡಿ ಎರಡು ಮೂರು ವರ್ಷ ಆಗಿರಬಹುದು, ಒಬ್ಬ ಮಹಿಳಾ ವೈದ್ಯಳಿಗೆ. ಕನ್ಯಾಮಣಿಯಾಕೆ. ಥಳಥಳಿಸುವ ತೊಟ್ಟಿಲೊಂದನ್ನು ಕೊಂಡುಕೊಂಡಿದ್ದಳು. ಬಲು ಆದರದಿಂದ ಅದನ್ನು ತೊಡೆಯ ಮೇಲಿರಿಸಿಕೊಂಡು ನೇವರಿಸುತ್ತಿದ್ದಳು. ತಮಿಳಿನಾಕೆ ತಮಿಳಿನಲ್ಲಿಯೇ ಮಾತನಾಡಿಸಿದೆ, ನನಗೆ ತಿಳಿದಷ್ಟು ತಮಿಳಿನಲ್ಲಿ;

''ಎನ್ನಾಂಗೊ, ಮಿಸ್... ಸೊಸೊ.... ನೀಂಗ್ ಈ ತೊಟ್ಟಲು ಏಕಿವಾಂಗಿ ನೀಂಗೋ ; ಕಲ್ಯಾಣ ಮೇ ಇಲ್ಲೆಯೇ ?''

''ನೋಡುಕ್ಕೆ ಬಲು ಚೆನ್ನಾಗಿತ್ತು. ಬೆಲೆ ಅಗ್ಗವಾಗಿತ್ತು ನೂರೇ ರೂಪಾಯಿ ಕೊಂಡು ಕೊಂಡೆ. ಈಗ ದುಃಖ ಆಗ್ತಾ ಇದೆ. ತೊಟ್ಟಿಲು ತುಂಬೋ ಹಾಗೂ ಇಲ್ಲ. ಯಾರಿಗಾದರೂ ಕೊಡುಕ್ಕೆ ಮನಸ್ಸೂ ಬರುಲ್ಲ. ಮಾರಿಬಿಡೋಣ ಎನ್ನಿಸಿದೆ. ಆದರೆ ಕೊಳ್ಳೋರು ಯಾರು ?'' ಎಂದು ಕನ್ನಡದಲ್ಲಿ ಹಲುಬಿದಳು ಕನ್ನಡದ ಕನ್ಯಾಮಣಿ. ಕೆಲಸಕ್ಕೆಂದು ತಮಿಳು ದೇಶಕ್ಕೆ ಹೋಗಿ 40 ವರ್ಷಗಳಾಗಿತ್ತಂತೆ.

★ ★ ★ ★

ಹಣೆಯ ಮೇಲೆ ಕುಂಕುಮದ ನಾಮವನ್ನು ಅರ್ಧ ಅಂಗುಲ ಅಗಲ ಎರಡು ಅಂಗುಲ, ಉದ್ದ ಹಚ್ಚಿಕೊಂಡಿದ್ದ ಇನ್ನೊಬ್ಬ ಉತ್ತರ ದೇಶದ ಸೋದರ ವೈದ್ಯ, ಅವರಜ್ಜಿಯ ಅಪ್ಪಣೆಯಂತೆ. ''ಗಂಗಾಭವಾನಿ ಪ್ರಸಾದ ಕೊಡ್ತೀನಿ. ವಿಮಾನ ಹತ್ತೊವಾಗ, ಇಳಿಯೋ ತನಕ ಅದನ್ನು ಹಣೆಗೆ ಹಚ್ಚಿಕೊಂಡಿರು ರಕ್ಷೆಯಾಗಿರುತ್ತೆ, ವಿಮಾನಾಪಘಾತ ಆಗುಲ್ಲ'' ಎಂದು ಹೇಳಿದ್ದಳಂತೆ. ''ಹಾಗೆ ಮಾಡಬೇಕಪ್ಪಾ ! ದೊಡ್ಡೋರ ಮಾತಿನಲ್ಲಿ ನಂಬಿಕೆ ಇಡಬೇಕು.'' ಎಂದು ನಾನು ಅವನನ್ನು ಪುಸಲಾಯಿಸಿ ಹುರಿದುಂಬಿಸಿದ್ದೆ. ಅವನ ಜತೇಲಿದ್ದರೆ ಅಪಘಾತ ತಪ್ಪಿದರೆ ನನಗೂ ತಪ್ಪಿದ ಹಾಗೇ ಅಲ್ಲವೇ ? ಹೀಗಾಗಿ ನಮ್ಮಿಬ್ಬರಿಗೂ ಹತ್ತಿರ ಹತ್ತಿರ ಸಂಬಂಧ.

ಅವನೊಂದು ನಾಜೂಕಾದ ಮಚ್ಚುಕತ್ತೀನ ತೆಗೆದುಕೊಂಡಿದ್ದ. ಎಷ್ಟಯ್ಯಾ ಕೊಟ್ಟೆ ಎಂದೆ. ತೊಂಭತ್ತೆರಡು ಅಂದ. ಯಾಕೆ ತೊಗೊಂಡೆ ಎಂದೆ. ಸೌತೆಕಾಯಿ ಹೆಚ್ಚುಕ್ಕೆ

ಚೆನ್ನಾಗಿರುತ್ತೆ ಅಂದ. ಮಾಂಸ ಕತ್ತರಿಸೋ ಕತ್ತಿ ಇದು. ನಿಮ್ಮಜ್ಜಿ ಇದನ್ನು ಕಂಡರೆ ಸುಮ್ಮನಿರ್ತಾಳೇನಪ್ಪಾ ಎಂದೆ. ''ಸುಲಭವಾಗಿ ಸಿಕ್ತು ಎಂದು ಆವಸರದಲ್ಲಿ ಕೊಂಡು ಕೊಂಡೆ ಈಗೇನ್ಮಾಡಲಿ ! ಇದ್ದ ದುಡ್ಡೆಲ್ಲಾ ಹೋಯ್ತು'' ಎಂದ. ದುಡುಕಬಾರದು ಹುಡುಗರು ನಾನಿತ್ತಿಲ್ವೇ ಕೇಳಬಾರದಿತ್ತೇ ಎಂದು ಸಮಾಧಾನ ಹೇಳಿದೆ.

★ ★ ★ ★

ಗಡ್ಡ ಮೀಸೆ ಹೊರವಾಗಿ ಬಿಟ್ಟಿದ್ದ ಅಮೀರ್ ಖಾನನು ಎಲೆಕ್ಟ್ರಿಕ್ ಕ್ಷೌರದ ಯಂತ್ರವನ್ನು ಕೊಂಡಿದ್ದ. ಬೊಂಬಾಯಿನಲ್ಲಿ ಇನ್ನೂರು ರೂಪಾಯಿ ಕಣಯ್ಯಾ ! ಇಲ್ಲಿ ನೂರಕ್ಕೆ ಸಿಕ್ತು ಎಂದು ಹಿಗ್ಗುತ್ತಾ ಹೇಳಿದ. ''ಎಲಾ, ಅಮೀರ ! ಗಡ್ಡ ಬಿಟ್ಟ ನಿನಗೇಕೆ ಇದು'' ಎಂದುಬಿಟ್ಟೆ. ನನಗೆ ಬೇಡದೆ ಇದ್ದರೆ, ನನಗೇನು ಸಂಸಾರ ಇಲ್ವಾ ಎಂದ. ''ಓ! ಅಂತಹ ಹೆಂಡ್ತೀನಾ ನಿನಗೆ'' ಅಂತ ಕೇಳಿಬಿಡಬೇಕು ನಾನು, ಅಷ್ಟರಲ್ಲಿ ಹಲ್ಲು ಕಚ್ಚಿ ನಾಲಿಗೆ ಹಿಡಿದೆ. ''ಸಂಸಾರ ಇದ್ದರೆ ಕ್ಷೌರದ ಯಂತ್ರ ಯಾಕೆ ಬೇಕು ತರಕಾರೀಗೆ ಅಂತ ತಂದ ಕುರೀನ ಬೋಳಿಸ್ತೀಯಾ ಇದರಲ್ಲಿ'' ಎಂದೆ. ''ನಿಂಗೇನು ಗೊತ್ತಾಗ್ಯತೆ ಬೊಂಬಾಯಿಗೆ ಹೋದ್ಮೇಲೆ ಎರಡು ನೂರಕ್ಕೆ ಮಾರಿ, ನೂರು ರೂಪಾಯಿ ಲಾಭ ಹೊಡೆದು, ಒಂದು ಕುರೀನ ಮನೆಗೆ ತೊಗೊಂಡು ಹೋಗ್ತೀನಿ. ದೊಡ್ಡ ಸಂಸಾರ ನನ್ನದು'' ಎಂದ ಗಡ್ಡ ನೀವುತ್ತಾ.

''ಅಯ್ಯೋ ಬಕ್ರಾ ! ಬೊಂಬಾಯಿ ಸುಂಕದ ಕಟ್ಟೇಲಿ ನಿಮ್ಮ ಸೋದರ ಮಾವ ಕೂತಿರ್ತಾನೆ ಇದಕ್ಕೆ 60 ರೂಪಾಯಿ ಸುಂಕ ಜಡೀತಾನೆ. ಆಮೇಲೆ ತರಬಾರದ್ದನ್ನು ತಂದಿದ್ದಿ ಅಂತ ಇನ್ನರವತ್ತು ರೂಪಾಯಿ ಜುಲ್ಮಾನೆ ಜಿಗೀತಾನೆ ಆಮೇಲೆ ನಿನ್ನ ಬೈದು, ಉಗುಳಿ ಕಳಿಸ್ತಾನೆ'' ಎಂದೆ.

''ವಾರೆ ಮಿಯ್ಯಾ ! ಹೌದಲ್ಲೋ'' ಎಂದು ಅಲ್ಲಿಬಿದಾಯಕ್ಕೆ ಶುರು ಮಾಡಿದ.

★ ★ ★ ★

ನಾಲ್ಕನೆಯಾತನಿಗೆ ನಲವತ್ತರ ಪ್ರಾಯ ಕೂದಲೆಲ್ಲ ಬೆಳ್ಳಗಾಗಿದ್ದರೂ ಕಣ್ಣು ಹೊಳಪಾಗೇ ಇತ್ತು. ಬೈನಾಕ್ಯುಲರ್ಸ್ ಕೊಂಡುಕೊಂಡಿದ್ದ. ಮೂಲೆ ಮೂಲೆಯಾಗಿದ್ದ ಆ ಬೈನಾಕ್ಯುಲರ್ಸ್ ನೋಡುಕ್ಕೆ ನವೀನವಾಗಿತ್ತು. ಎಷ್ಟಯ್ಯಾ ಎಂದೆ. ನೂರೆರಡು, ದಿಳ್ಳಿಯಲ್ಲಿ ಇದಕ್ಕೆ ಮುನ್ನೂರು ಅಂದ. ದಿಲ್ಲೀಲಿ ಎಲ್ಲಿರೋದು ಎಂದೆ. ಚಾಂಡ್ನಿಚೌಕಿನಲ್ಲಿ ಮನೆ, ಕೆಳಂತಸ್ತಿನಲ್ಲಿ ದವಾಖಾನೆ, ಮಹಡಿ ಮೇಲೆ ವಾಸ ಎಂದ. ಮಹಡಿ ಮೇಲೆ ಕೂತು ಬೈನಾಕ್ಯುಲರ್ಸ್ ಹಿಡಕೊಂಡು ನೆರೆ ಮನೆ ಕಡೆ ನೋಡಿದರೆ ನಿನ್ನ ಹೆಂಡಿರು ಸುಮ್ಮಗಿರ್ತಾಳಾ, ಇದನ್ನು ಯಾಕೆ ಕೊಂಡುಕೊಂಡೆ'' ಎಂದು ಕೇಳಿದೆ. ನೀನಿರೋ ಊರಲ್ಲಿ ಕಣ್ಣೆದುರಿಗೆ ಆರು ಗಜ ದೂರ ಕಾಣಿಸೋದೆ ಕಷ್ಟ. ಅಷ್ಟು ಜನ ಜಂಗುಳಿ, ದೊಂಬಿ, ಯಾವಾಗಲೂ. ಇದಿಟ್ಟುಕೊಂಡು ಏನ್ಮಾಡ್ತೀ, ಚಂದ್ರನ್ನ ನೋಡ್ತೀಯಾ ? ಎಂದೆ.

ಹೌದಲ್ಲಪ್ಪಾ ! ನನ್ನ ಹೆಂಡತೀಗೆ ಬಲು ಅನುಮಾನ. ಪಕ್ಕದ ಮನೇಲಿ ಬೇರೆ ಯಾರ್‍ಯಾರೋ ಬಂದಿಳಿದುಕೊಂಡಿದ್ದಾರೆ. ಅಗ್ಗಕ್ಕೆ ಸಿಕ್ತು ಅಂತ ಕೊಂಡುಕೊಂಡೆ. ಈಗೇನ್ಮಾಡಲಿ. ಜೇಬೂ ಖಾಲಿ, ಗೋಳೂ ಬಂತು ಎಂದು ಮುಖ ಕೆಳಕ್ಕಿಳಿಸಿದ.

★ ★ ★ ★

ಖಾಜಿ ನ್ಯಾಯ ಮಾಡಿದೆ. ಋಷಿಪಂಚಮಿ ಆಕೆಗೆ ಬೈನಾಕ್ಯುಲರ್ಸ್ ಕೊಡಿಸಿದೆ. ರೋಗಿಗಳನ್ನು ಪರೀಕ್ಷೆ ಮಾಡುಕ್ಕೆ, ಚೆನ್ನಾಗಿ ನೋಡುಕ್ಕೆ ಸಹಾಯ ಆಗುತ್ತೆ ಪಾಟಿ, ಎಂದು ಹೇಳಿ. ಅಮೀರನಿಗೆ ನಾಜೂಕು ಮಚ್ಚುಕತ್ತಿ ಕೊಡಿಸಿದೆ. ಸಂಸಾರಕ್ಕೆ ವಾರಣ ಎಂದು ಹೇಳಿ ಕುಂಕುಮದ ನಾಮದವನಿಗೆ ತೊಟ್ಟಿಲಿಸ್ನು ಕೊಡಿಸಿದೆ ; ಸಂತಾನ ಗೋಪಾಲನ ದಯೆಯಿದೆಯಪ್ಪಾ ನಿನ್ನ ಮೇಲೆ ಎಂದು ಹೇಳಿ. ನಾಲ್ಕನೆಯಾತನಿಗೆ ಎಲೆಕ್ಟ್ರಿಕ್ ಕ್ಷೌರದ ಯಂತ್ರ ಕೊಡಿಸಿದೆ.

ಪರಸ್ಪರ ಒಳ ವ್ಯಾಪಾರ ಕುದುರಿಸೋ ಹೊತ್ತಿಗೆ ವಿಮಾನ ಸಿದ್ಧವಾಗಿತ್ತು. ಗಂಟು ಮೂಟೆ ಕಟ್ಟಿಕೊಂಡು ಓಡಿದೆವು, ಓಣಿ ಹಿಡಿದು, ವಿಮಾನದತ್ತ.

# ಲಂಡಣ

"Single L.- Double O - Double N. - D"

ಇದು ಯಾವೂರಪ್ಪ ? ಎಂದು ನಾವು ಹುಡುಗರಾಗಿದ್ದಾಗ ಕೇಳ್ತಾ ಇದ್ದರು. ಲಂಡನ್ ಅಂತ ಹೇಳಿದರೆ, ಪ್ರಶ್ನೆ ಕೇಳಿದವರು ಬಲು ಜಾಣ ಕಣಪ್ಪ ನೀನು, ದೊಡ್ಡೋನು ಆದಮೇಲೆ ಲಂಡನ್ನಿಗೆ ಹೋಗಿ ಓದಿಕೊಂಡು ಬಾಪ್ಪ ಅಂತ ಹೇಳಿ ಕೆನ್ನೆ ಚಿವುಟಿ ನೆಟಿಗೆ ತೆಗೆಯುತ್ತಿದ್ದರು. ಲಂಡನ್ನಿಗೆ ಹೋಗೋದು ಅಂದರೆ ಸ್ವರ್ಗಕ್ಕೆ ಹೋದ ಹಾಗೇನೇ ಅಂತ ಆಗ ಜನ ತಿಳಕೊಂಡಿದ್ದರು. ಅಲ್ಲಿಗೆ ಹೋಗಿ ಹಿಂತಿರುಗಿ ಬಂದವರು ಹೇಳಿದ್ದೇ ವೇದ, ನುಡಿದಿದ್ದೇ ಗೀತ ಅಂತ ನಮ್ಮೂರಿನಲ್ಲಿ ಅಭಿಪ್ರಾಯ ಮೂಡಿತ್ತು.

ಕೋಪಣ ಹ್ಯಾಗಣ ಅಂತ ಹೇಳಿದವನನ್ನು ವಿಮಾನದಲ್ಲಿ ಈಗೆಲ್ಲಿಗೆ ಹೋಗ್ತೀವಿ ಎಂದು ಕೇಳಿದಾಗ ''ಲಂಡಣ, ಲಂಡಣ ಡೋಂಚ್ಯೂಣೋ'' ಎಂದ. ಅವನು ಇದನ್ನು ಹೇಳಿದಾಗಲೇ ಬಾಲ್ಯದ ಜ್ಞಾಪಕ ಬಂತು, Single L ಇತ್ಯಾದಿಯೂ ನೆನಪಿಗೆ ಬಂತು. ಹುಡುಗತನದ ಮರೆಯಲಾಗದ ಕೆಲವು ವಿಷಯಗಳನ್ನು ಮೆಲುಕು ಹಾಕುತ್ತಿರುವಾಗಲೇ ''ಹೊಟ್ಟೆಗೆ ಪಟ್ಟಿ ಕಟ್ಟಿಕೊಳ್ಳಿ, ಧೂಮಪಾನ ಬಂದು ಮಾಡಿ'' ಎಂಬ ಸೂಚನೆ ಬಂತು. ಪಕ್ಕಗಳಲ್ಲಿರಬೇಕಾದ ಪಟ್ಟಿಯನ್ನು ಹುಡುಕಿದೆ. ಸಿಗಲೇ ಇಲ್ಲ, ಅವುಗಳ ಮೇಲೇನಾದರೂ ಕೂತುಕೊಂಡು ಬಿಟ್ಟಿದೇನೆಯೋ ಎಂದು ಏಳಲಿಕ್ಕೆ ಪ್ರಯತ್ನ ಮಾಡಿದೆ. ಏಳಲಾಗಲಿಲ್ಲ ಆಗ ತಿಳಿಯಿತು. ಕೋಪಣ ಹ್ಯಾಗಣದಲ್ಲಿ ಕಟ್ಟಿದ ಪಟ್ಟಿಯನ್ನು ಬಿಚ್ಚೇ ಇರಲಿಲ್ಲ ಅಂತ. ಈ ಹೊತ್ತಿಗೆ ವಿಮಾನ ಇಳಿದಿತ್ತು. ಪಟ್ಟಿ ಬಿಚ್ಚಿದೆ. ಇಳಿದಾಗ ನಾನೇ ಕೊನೆಯವನಾಗಿದ್ದೆ. ನಮ್ಮ ಹಿಂಡಿನಲ್ಲಿ ಅರ್ಧ ಜನ ಹತ್ತಿರ ನಿಂತಿದ್ದ ಬಸ್ಸೊಂದರಲ್ಲಿ ತುಂಬು ಭರ್ತಿ ಕೂತಿದ್ದರು. ಉಳಿದವರು ಅಲ್ಲೇ ನಿಂತಿದ್ದರು. ತುಂಬಿದ ಬಸ್ಸು ಹೊರಟು ಹೋಯಿತು. ಆಗ ನಾನು ಹೇಳಿದೆ ''ಲಂಡನ್ ! ಎಂದರೆ ಜನ ಹೇಳೋದೆಲ್ಲ ದಿಟ ಕಣಯ್ಯ ! ಮಿಕ್ಕೆಲ್ಲಾ ವಿಮಾನ ನಿಲ್ದಾಣದಲ್ಲಿ, ಇಳಿದ ಕಡೆಯಿಂದ 2-3 ಫರ್ಲಾಂಗ್ ನಡೆಸಿ, ಬೈಠಕ್ ಖಾನೆಗೆ ಕರೆದುಕೊಂಡು ಹೋಗಿ ಅಲ್ಲಿ

ನಿಲ್ಲಿಸಿ ಸುಸ್ತಾದಾಗ ಸುಂಕದವರ ಹತ್ತಿರ ನಿಲ್ಲಿಸಿ ಸುಖದುಃಖ ಹೇಳಿಸುತ್ತಾರೆ. ಲಂಡನ್ ನೋಡಯ್ಯಾ ! ಇಳಿದ ಕಡೆಗೆ ಬಸ್ ಬರುತ್ತೆ. ನೆಟ್ಟಗೆ ಊರಿಗೆ ಕರಕೊಂಡು ಹೋಗುತ್ತೆ ಬಲು ಪಸಂದಪ್ಪಾ'' ಎಂದು ಪಕ್ಕದಲ್ಲಿದ್ದ ಗದಗಿನ ಭ್ರಾತೃವಿಗೆ ಅವ ಹಳಬ ಹೇಳಿದ. ''ಲಂಡನ್ನಿನ ವಿಮಾನ ನಿಲ್ದಾಣದಲ್ಲಿ ನಿಮಿಷಕ್ಕೊಂದು ವಿಮಾನ ಇಳಿಯುತ್ತೆ, ಹಾರುತ್ತೆ—ಅದಕ್ಕಾಗಿ ವಿಮಾನ ನಿಂತಲ್ಲಿಂದ ಸುಂಕದ ಕಟ್ಟೆಗೆ ಹೋಗುಕ್ಕೆ ಬಸ್ ನಡೆಸ್ತಾರೆ. ನಡಕೊಂಡು ಹೋದರೆ ವಿಮಾನಗಳು ಇಳಿಯೋದಕ್ಕೆ ತೊಂದರೆ ಆಗಬಹುದು ಅಷ್ಟೇ ಕಣ್ರಿ'' ''ಸುಂಕದ ಸೂತಕ ಇದ್ದೇ ಇದೆ ಯಥಾ ಪ್ರಕಾರ'' ಎಂದ.

ಅವನು ಹೇಳಿದ ಹಾಗೆಯೇ ಆಯಿತು. ನಮ್ಮ ಬಸ್ಸಿನಲ್ಲಿ ಕುಳಿತು ನಾವು ಹೋಗಿದ್ದು ಸುಂಕದ ಕಟ್ಟೆಯ ಬೈಠಕ್ ಖಾನೆಗೆ, ಆದರೆ ವ್ಯತ್ಯಾಸ ಏನು ಅಂತೀರಿ ? ಮಿಕ್ಕ ವಿದೇಶಿ ಸುಂಕದ ಕಟ್ಟೇಲಿ ಯಾವು ಯಾವುದೋ ಪ್ರಾಕೃತ ಭಾಷೇಲಿ ಸೂತಕದ ಮಂತ್ರಗಳನ್ನು ಹೇಳುತ್ತಿದ್ದರು. ಅರ್ಥವಾಗದೆ ನಾವು ಕಿರುನಗೆ ಮೂಡಿಸಿದಾಗ ಕೈ ಕೊಡವಿಕೊಂಡು ಹಾಳಾಗಿ ಹೋಗಿ ಅಂತ ಸಂಜ್ಞೆ ಮಾಡಿ ಹೊರಕ್ಕೆ ದಬ್ಬುತ್ತಾ ಇದ್ದರು. ಆದರೆ ಇಲ್ಲಿ, ಲಂಡನ್ನಿನಲ್ಲಿ ನಮಗೆ ತಿಳಿದ ಅತ್ತೆ ಮನೆ ಭಾಷೆಯಲ್ಲಿ ಸೂತಕದ ಮಂತ್ರಾನ ಹೇಳ್ತಾ ಇದ್ದರು. ಅಂದರೆ ಅವರು ಸ್ವಾಹಾ ಅಂದಾಗಲೆಲ್ಲಾ ಬೆಂಕಿಗೆ ನಮ್ಮಲ್ಲಿದ್ದ ತುಪ್ಪವನ್ನು ಹಾಕಬೇಕಾಯ್ತು. ಆದರೆ ನಮ್ಮ ಘನ ಸರ್ಕಾರದವರು ಕುಚೇಲನ ತರಹ ಉದಾರ ಅನುಮತಿ ಕೊಟ್ಟ ಹಣದ ಕ್ಷಯದಿಂದ, ಮಕ್ಕಳ ಶಾಲಾ ಮಾಸ್ತರ ಹಾಗಿದ್ದ ನಮಗೆ ಏನೂ ಕಷ್ಟವಾಗಲಿಲ್ಲ. ಸುಂಕದವರು ಸ್ವಾಹಾ ಅಂದಾಗಲೆಲ್ಲಾ ಅಕ್ಷತೆ ಕಾಳನ್ನೇ ತೆಗೆದು ಒಗೆದೆವು. ಆ ಮಂತ್ರ ಕೇಳೋದೇ ಕಷ್ಟವಾಗಿತ್ತು ಅಷ್ಟೆ. ಸೂತಕ ಕಳೆದುಕೊಂಡು ಹೊರಕ್ಕೆ ಬಿಡುಗಡೆಯಾಗಿ ಬಂದು ಊರ ಬಸ್ಸಿನಲ್ಲಿ ಕುಳಿತುಕೊಂಡಾಗ, ದೇಹದಲ್ಲಿ ಕಾಲುಗಳು ಮಾತ್ರ ಇದ್ದುವು ಎಂಬ ಭ್ರಮೆ ಮೂಡಿತ್ತು. ಅಷ್ಟು ಹೊತ್ತು ನಿಂತಿದ್ದರಿಂದ ದೇಹದ ಭಾರವೆಲ್ಲ ಇಳಿದು ಇಳಿದು ಕಾಲುಗಳಲ್ಲೇ ಕೂಡಿಕೊಂಡಿತ್ತು. ಆ ದೇಶದ ನ್ಯೂಟನ್ನೇ ಅಲ್ಲವೇ Gravitation ವಿಷಯ ನಮಗೆ ತಿಳಿಸಿದ್ದು. ಇನ್ನೇನು ತಾನೆ ಆಗಲು ಸಾಧ್ಯ ! ಆ ದೇಶದಲ್ಲಿ ಎಲ್ಲಾ ಕೆಳಗಿಳಿಯಲೇ ಬೇಕು ಕಾಲ ಬಂದಾಗ.

ಕಾಲುಗಳನ್ನೇ ಕೆರೆಯುತ್ತಾ ಬಸ್ಸಿನಲ್ಲಿ ಕುಳಿತಿದ್ದೆ. ಬಸ್ಸಿನಲ್ಲಿ ಕಿಟಕಿಯ ಪಕ್ಕವೇ ನನಗೆ ಸಿಕ್ಕಿತ್ತು. ಎಡಗಡೆಗೆ ನೋಡಲು ಸಾಧ್ಯವಾಗಿತ್ತು. ಬಲಗಡೆಯಲ್ಲಿ ಸೋದರಿಯೊಬ್ಬಳು — ಕಸುಬು ಸೋದರಿ — ಕುಳಿತಿದ್ದಳು. ಪುಣುಗಿನ ಬೆಕ್ಕನ್ನೇ ತಿಂದುಬಿಟ್ಟು ಜೀರ್ಣಿಸಿಕೊಂಡು ಬೆವರ ಹನಿ ಹನಿಯಲ್ಲೂ ಪುನುಗನ್ನೇ ಸೂಸುತ್ತಿದ್ದಳು. ಆ ಕಡೆ ಮೂಗನ್ನು ತಿರುಗಿಸುವ ಸಾಧ್ಯತೆಯೇ ಇರಲಿಲ್ಲ. ಎಲ್ಲಿಂದ ಬಂತು ಈ ಕೊರೆಯುವ ಶಕ್ತಿಯ, ಚೂರಿಯನ್ನು ಹೊತ್ತಿರುವ, ಸುಗಂಧ ಎಂದು ಮೊದಲೇ ಆ ಕಡೆಗೆ ಮುಖ ತಿರುಗಿಸಿದ್ದೆ. ಕೆಟ್ಟ ಕನಸು ನೆಟ್ಟಗೆ ಪಕ್ಕದಲ್ಲೇ ಕುಂತ ಹಾಗಿತ್ತು. ಎಡಕ್ಕೆ ಮುಖ ತಿರುಗಿಸಿದೆ. ಆ ದಿಕ್ಕಿನತ್ತ ದೃಷ್ಟಿಯನ್ನು ಕಟ್ಟುಹಾಕಿದೆ.

ಎಡಗಡೆಯಲ್ಲಿ ಮೊದಲು ಕಂಡುದುದು ಫರ್ಲಾಂಗ್ ಉದ್ದ ಕಾರ್ಖಾನೆ ಒಂದು. ಬಾಳಾಜಿಯ ಸೇವೆಗೆ ಮೋಸ ಮಾಡುವ ಉದ್ದೇಶ ಹೊಂದಿದ್ದ ಕಾರ್ಖಾನೆ ಅದು. ಗಿಲೆಟ್ ಕಂಪನಿ. ಹರಸಿಕೊಂಡು ವರ ಪಡೆದು ಬಾಳೋ ಭಾಗ್ಯವನ್ನು ಮರೆತು, ನಮ್ಮ ಮುಖದ ಚೆಂದವನ್ನು ನಾವೇ ಮಾಡಿಕೋತೀವಿ ಎಂದು ಬೆಳಿಗ್ಗೆ ಎಳ್ತಿದ್ದ ಹಾಗೇ ನಮಗೆ ನಾವೇ ಚೌರ ಮಾಡಿಕೊಳ್ಳಲ್ಲವೇ ? ದಿನಾಗಲೂ ಮಾಡುವ ಈ ಯಜ್ಞಕ್ಕೆ ಸಮಿತ್ತುಗಳನ್ನು ಒದಗಿಸುವ ಕಾರ್ಖಾನೆ ಅದು. ಅಷ್ಟು ಉದ್ದಾನೆ ಮುಖ ಇದ್ದ ಆ ಕಾರ್ಖಾನೇಲಿ, ಲೋಕಾನೇ ಚೌರ ಮಾಡೋ ಅಷ್ಟು ತಯ್ಯಾರಿ ಆಗ್ತಿರಬಹುದು ಅನ್ನಿಸ್ತು.

ಆಮೇಲೆ ಕಂಡಿದ್ದು. ಒಂದು ಅಡ್ಡರಸ್ತೆ. ಅಡ್ಡಡ್ಡಾಗಿ ಆ ಅಡ್ಡರಸ್ತೆಯಲ್ಲಿ ಕಲ್ಲು ಚಪ್ಪಡಿಗಳನ್ನು ಹಾಸಿತ್ತು. ನಮ್ಮ ಊರಿನ ಚಿಕ್ಕಪೇಟೆ ಸಂದಿಗಳಲ್ಲಿ ಅಡ್ಡ ತಿರುಗಿ, ದಿವಾನಖಾನೆ ಸಂದಿಯಲ್ಲಿ ನಡೆದರೆ ಲಂಡನ್ನಿನ ಅಡ್ಡ ರಸ್ತೇನ ಕಂಡಹಾಗೇ ಆಗುತ್ತೆ. ಒಂದು ಧಡೂತಿ ಹುಡುಗಿ ಪುಟಾಣಿ ಬೈಸಿಕಲ್ಲನ್ನು ಹತ್ತಿ ಆ ಅಡ್ಡ ರಸ್ತೇಲಿ ಆ ಕಡೆಗೆ ಹೋಗುತ್ತಿದ್ದಳು. ಅಡ್ಡಾದಿಡ್ಡಿ ಸಮೆದಿದ್ದ ಚಪಡಿಗಳ ಮೇಲೆ ಬೈಸಿಕಲ್ ಹೋದಾಗ, ಕುಡಿದವರ ಹಾಗೆ ವಾಲಾಡುತ್ತಿತ್ತು. ಅದರ ಮೇಲೆ ಕುಳಿತಿದ್ದ ಧಡೂತಿ ಹುಡುಗಿ ಬೈಸಿಕಲ್ಲಿಗೆ ಸರಿಯಾಗಿ ಹೆಜ್ಜೆ ಒತ್ತುತ್ತ ಅತ್ತ ಕಡೆಗೊಮ್ಮೆ ಇತ್ತ ಕಡೆಗೊಮ್ಮೆ ಕುಳಿತಿದ್ದರೂ ಕುಳಿತಲ್ಲೇ ಚಿಮ್ಮುತ್ತ ಸಾಗುತ್ತಿದ್ದಳು. ಬಿದ್ದೆಬಿಡ್ತಾಳೆ ! ಅವಳ ಮೇಲೆ ಬೈಸಿಕಲ್ ಇನ್ನೇನು ಬಿದ್ದೇ ಬಿಡುತ್ತೆ !!

ಆ ವೇಳೆಗೆ ಬಸ್ಸು ತಿರುಗಿ ಹೊರಳಿತು. ಚೌಕದಲ್ಲಿ ಕೆಂಪು ದೀಪ ಬಂದಿದ್ದರಿಂದ ನಿಂತಿತ್ತು. ಅಡ್ಡರಸ್ತೇಲಿ ಧಡೂತಿ ಹುಡುಗಿ ಬಿದ್ದೇಬಿಟ್ಟಳೋ ಏನೋ ನೋಡುವುದಕ್ಕೆ ಆಗಲಿಲ್ಲ.

ಝ್ಣೀಃ ಅಂತ ಶಬ್ದ ಆಯ್ತು, ಬಸ್ಸು ತಿರುಗಿ ಹೊರಟಾಗ. ಏನು ಅವಸರ ಅಂತ ಅಲ್ಲಿ ಬಸ್ಸು ನಿಂತರೆ ನಿಂತೇಬಿಡುತ್ತೆ ; ಕೆಂಪು ದೀಪ ನಿಲ್ಲಿಸಿ ಬಿಡುತ್ತೆ. ಹೊರಟರೆ ಅವಸರದಲ್ಲಿ ಅಜ್ಜಿ ಓಡಿದ ಹಾಗೆ, ಮೈ ಝಾಡಿಸಿ ಓಡೇಬಿಡುತ್ತೆ. ಈ ಗಲಾಟೆಯಲ್ಲಿ ಝೋಕು ಹೊಡೆದು ಮುಂದಿದ್ದ ಸೀಟಿಗೆ ನಾನು ಗುಮ್ಮಿದೆ. ಚೇತರಿಸಿಕೊಳ್ಳಲು ಪಕ್ಕದಿಂದ ಕೊರೆದು ಬಂದ ಸುಗಂಧ ಬಲು ಸಹಾಯವಾಯ್ತು. ಬೇಗ ಕಿಟಕಿಯಾಚೆ ತಲೆ ಹಾಕಿ, ಹೊಟ್ಟೆಯ ಬೇಸರವನ್ನು ಕಕ್ಕಿಬಿಟ್ಟೆ. ರಸ್ತೆಯಲ್ಲಿ ಯಾರೂ ಇತ್ತಿಲ್ಲ.

ಬಂದಿಳಿದೆವು ನಮಗೆ ಗುತ್ತಿಗೆ ಮಾಡಲ್ಪಟ್ಟಿದ್ದ ಹೋಟಲಿಗೆ. ಆಗ ರಾತ್ರಿ 12 ಗಂಟೆ ಆಗಿತ್ತು. ಟೆಲಿಫೋನ್ ಬಳಿ ಕಾಯುತ್ತಿದ್ದ ಒಂದು ಹೆಣ್ಣು, ಬಾಗಿಲ ಬಳಿ ಕಾಯುತ್ತಿದ್ದ ಒಂದು ಗಂಡು ; ಇವೆರಡೇ ಅಲ್ಲಿದ್ದ ಜೀವಂತ ವಸ್ತುಗಳು. ಎಲ ಎಲಾ ಲಂಡನ್ನು ಹೆಸರಾಂತ ಪ್ರದೇಶ. ನಿಶಿರಾತ್ರೀಲಿ ಕಾಯುತ್ತಾ ಒಂದು ಹೆಣ್ಣು ಅತ್ತ, ಒಂದು ಗಂಡು ಇತ್ತ ಇವೆ. ಅಶರೀರ ನುಡಿಗೆ ಕಾಯುತ್ತ ಹೆಣ್ಣು ಕುಳಿತಿದೆ. ಸಶರೀರ ಅಭ್ಯಾಗತರಿಗೆ ಕಾಯುತ್ತ ಗಂಡು ನಿಂತಿದೆ. ಎಲ ಎಲಾ

ಲಂಡನ್ನು ಈ ಅನಾದಿಯಾದ ಬಾಳ ಸೋಜಿಗವನ್ನೇ ತೋರಬೇಕೆ ? ನಾವು ಕಾಲಿಟ್ಟ ಮೊದಲ ರಾತ್ರಿಲೇನೆ ಎಂದುಕೊಳ್ಳುತ್ತಿದ್ದೆ.

ನಿಮ್ಮದು ನೂರಾ ಎಂಟು, ಎಂದು ಹೇಳುತ್ತ ಗಂಡು, ಚೆಂಡಿಗೆ ಕಟ್ಟಿದ ಬೀಗದ ಕೈಯನ್ನು ನನಗೆ ಕೊಟ್ಟ. ಮೊದಲನೇ ಅಂತಸ್ತಿನಲ್ಲಿ ನಿಮ್ಮ ಕೊಠಡಿ ಎಂದ. ಸಾಮಾನೆಲ್ಲವನ್ನೂ ಅಲ್ಲಿಗೆ ಕಳಿಸಿದೆ ಎಂದೂ ಹೇಳಿದ. ನೂರಾ ಎಂಟರ ನಂಬರ ಹೊತ್ತಿದ್ದ ಕೊಠಡಿಯನ್ನು ಮೊದಲನೆ ಅಂತಸ್ತಿನಲ್ಲಿ ಹುಡುಕಿ, ಬಾಗಿಲು ತೆಗೆದು ಒಳಕ್ಕೆ ಹೋದೆ.

ದಿವನಾದ ಹಾಸಿಗೆ. ಜಿರಳೆಗಳೊಂದೂ ಕಾಣಲಿಲ್ಲ. ಬೇಗ ಬೇಗ ಬಟ್ಟೆ ಬದಲಾಯಿಸಿ ಹಾಸಿಗೆಮೇಲೆ ಕುಳಿತೆ. ಸೊಳ್ಳೆಪರದೆ ಇತ್ತಿಲ್ಲ. ಆದರೆ ಎರಡು ನಿಮಿಷ ಆದರೂನೂ ಒಂದು ಸೊಳ್ಳೆಯಾದರೂ ಬಂದು ಗುಯ್ ಅನ್ನಬೇಕಲ್ಲ. ಸೊಳ್ಳೆಗಳೆಲ್ಲ ಹರತಾಳ ಮಾಡಿವೆಯೋ ಅನ್ನಿಸಿತು. ಎದ್ದೆ. ಹಾಸಿಗೆಮೇಲ್ ಹೊದಿಸಿದ ಕಂಬಳೀನ ತೆಗೆದೆ. ಕುಳಿತೆ, ಮಲಗಿದೆ. ಹೊದ್ದಿಗೆ ಎಳೆದುಕೊಂಡೆ.

ಏನೋ ಸಂಶಯ ಮೂಡಿತು ಮನಸ್ಸಿನಲ್ಲಿ. ಕೈಕಾಲು ಸೋತಿದ್ದರೂ "ಎಚ್ಚರಿಕೆ" ಎಂದು ಕೃಷ್ಣದೇವಾಲಯದಲ್ಲಿ ಪ್ರಸಾದ ಹಂಚುಕ್ಕೆ ಮುಂಚೆ ಕೂಗುಲ್ಲವೇ ಹಾಗೆ ಮನಸ್ಸು ಎಚ್ಚರಿಕೆ ಕೊಟ್ಟಿತು. ಹೊದ್ದಿಗೆ ತೆಗೆದೆ. ಎದ್ದೆ, ಮಂಚದ ಕೆಳಗೆ ನೋಡಿದೆ. ಯಾರೂ ಇತ್ತಿಲ್ಲ. ತಿರುಗಿ ಹಾಸಿಗೆ ಮೇಲೆ ಮಲಗಿಕೊಂಡು ಹೊದ್ದಿಗೆ ಎಳೆದೆ. ಅದರ ಜತೆಗೆ ತಲೆಯ ದಿಂಬಿನ ಪಕ್ಕದಲ್ಲಿದ್ದ ದಾರವನ್ನೂ ಎಳೆದೆ. ದೀಪ ಆರಿತು.

ಕಿಟಕಿಯಾಚೆ ನಕ್ಷತ್ರಗಳು ಮಿಣುಕುತ್ತಿದ್ದವು.

# ಲಂಡನ ಕೋಟೆ ಕೊತ್ತಲಗಳು

ದಿನಬೆಳಗಾದರೆ ಏಳು ಗಂಟೆ ಹೊತ್ತಿಗೆ ಎದ್ದು ಸಿದ್ಧವಾಗಿ ಕೆಲಸಕ್ಕೆ ಹೋಗಬೇಕು. ಎಷ್ಟೋ ದಿವಸ ಬೆಳಗಾಗಿಸಿದ ಸೂರ್ಯನನ್ನು ಶಪಿಸುತ್ತಲೇ ಏಳುತ್ತಿದ್ದೆ. ಆಗ ಒಂದು ಭಯಂಕರ ಆಸೆ ಹುಟ್ಟುತ್ತಿತ್ತು. ರಜಾ ಸಿಕ್ಕಾಗ ಬೇರೆ ಊರಿಗೆ ಹೋಗಿ ರಾತ್ರಿ ಸುಖವಾಗಿ ಮಲಗಿ ಬೆಳಿಗ್ಗೆ ಎಂಟು ಒಂಭತ್ತು ಗಂಟೆ ಆದಾಗಲೂ ಬಿದ್ದುಗೊಂಡೇ ಇರಬೇಕು ಎಂಬ ಹಿರಿಯಾಸೆ. ಯಾರೂ ಆಗ ನಿದ್ರಾಭಂಗ ಮಾಡಲು ಬರುವುದಿಲ್ಲ ಎಂಬ ಧೈರ್ಯ.

ಲಂಡನ್ನಿನ ಹೋಟಲಿನಲ್ಲಿ ಸೊಳ್ಳೆಪರದೆ ಇಲ್ಲದೆ ಇದ್ದರೂ ಸೊಳ್ಳೆ ಕಾಟವಿಲ್ಲದೆ ಇರುವ ಕೊಠಡಿಯಲ್ಲಿ ದೇಹದಲ್ಲಿ ಸುಸ್ತಾಗಿ, ರಾತ್ರಿ ಮಲಗಿದಾಗ ಹನ್ನೆರಡು ಗಂಟೆಯಾಗಿದ್ದ ರಿಂದ, ಆಗಲೇ ಅನ್ನಿಸ್ತು. ನಾಳೆ ಬೆಳಿಗ್ಗೆ ಏಳೋದು ಎಂಟಕ್ಕೋ ! ಒಂಭತ್ತಕ್ಕೋ ! ಸುಖವಾಗಿ ಹೊರಳಾಡ್ತೀನಿ ಅಂತ. ಆದರೆ ಆಗಿದ್ದೇನು ಅಂತ ! ಬೆಳಗಿನ ಝಾಮ ಇನ್ನೂ ಕತ್ತಲು ಕತ್ತಲು. ನಮ್ಮೂರಿನಲ್ಲಿ ಅಷ್ಟು ಹೊತ್ತಿಗೆ ಹಾಲಿನವಳು ಬಂದು ಅಮ್ಮಾ ಅಮ್ಮಾ ಅಂತ ಕೂಗಿ, "ಅಮ್ಮಾ" ಏಳದೆ ಇರುವ ಕಾರಣ ನಾನೇ ಎದ್ದು ಹೋಗಿ ಹಾಲು ಹಾಕಿಸಿಕೊಂಡು ಬರುವ ವಾಡಿಕೆ. ಅಂಥ ಪೈಶಾಚ ಮುಹೂರ್ತದಲ್ಲಿ ಲಂಡನ್ನಿನಲ್ಲೂ ಎಚ್ಚರವಾಗಿಬಿಡ್ತು. ಎರಡು ಸರ್ತಿ ಹೊರಳಿದೆ. ಏನೂ ಪ್ರಯೋಜನವಾಗಲಿಲ್ಲ, ಬಿರಿ ಬಿರಿ ಎಚ್ಚರ ಎನ್ನುತ್ತಾರಲ್ಲ ಹಾಗೆ ಎಚ್ಚರವಾಯ್ತು. ಹಣೇ ಬರಹಾನ ಅಳಿಸುಕ್ಕೆ ಹೇಗೆ ತಾನೆ ಸಾಧ್ಯ ! ಎದ್ದೆ. ಎದ್ದು ಕಿಟಕಿ ಪರದೇನ ವಾರೆ ಮಾಡಿದೆ. ಹೊರಕ್ಕೆ ದೃಷ್ಟಿ ಹಾಯಿಸಿದೆ,

ಶ್ರೀರಂಗಪಟ್ಟಣದ ಕೋಟೆ ಹತ್ತಿರ, ಕಂದುಕದ ಬಳಿ ನಾಲ್ಕು ಕಮಾನಿನ ಸೇತುವೆ ಇಲ್ಲವೆ ಅದು ಕಾಣಿಸಿತು. ಅದರ ಹಿಂದೆಯೇ ಕಲ್ಲು ಕೋಟೆ ಕಾಣಿಸಿತು. ಅರೆ ! ಈ ಇಂದ್ರಜಾಲದ ಮರ್ಮವೇನು ? ಲಂಡನ್ನಿಗೆ ಬಂದು ಮಲಗಿದೀನಿ ಅಂದುಕೊಂಡಿದ್ದೆ. ಎದ್ದಾಗ ಕೊಠಡಿ. ಆದರೆ ಕಿಟಕಿಯಿಂದ ಹೊರಗೆ ನೋಡಿದರೆ ನಮ್ಮ ಶ್ರೀರಂಗಪಟ್ಟಣದ ಕೋಟೆ, ಕೊತ್ತಳ, ಕಂದುಕ ಕಾಣಿಸ್ತಾ ಇದೆ ! ಇದೇನಾದರೂ ದೆವ್ವ ಭೂತಗಳ ಕೈವಾಡವೋ ?

ಎನ್ನಿಸಿತು ನಾನೊಂದು ಸರ್ತಿ ಮೈಸೂರಿನ ಚಾಮುಂಡಿ ಬೆಟ್ಟದ ಮೇಲೆ ಹೋಗಿದ್ದಾಗ ಹೇಳಿದ್ದರು "ಇಲ್ಲಿ ಮಲಗಬೇಡಿ, ರಾತ್ರಿ ಹೊತ್ತು ಪಿಶಾಚಿಗಳ ಹಾವಳಿ ಇಲ್ಲಿ, ಮೊನ್ನೆ ಈ ಮುಸಾಫರಖಾನೇಲಿ ಮಲಗಿದ್ದೋನನ್ನು ಅರ್ಧ ಬೆಟ್ಟದ ಹತ್ತಿರ ಇರೋ ದೊಡ್ಡಬಸವನ ಬಾಲದ ಹತ್ತಿರ ಪಿಶಾಚಿಗಳು ಎಸೆದುಬಿಟ್ಟಿತ್ತು. ಬೆಳಿಗ್ಗೆ ಎದ್ದೋನು, ತಾನೆಲ್ಲಿದಾನೆ ಅನ್ನೋದನ್ನ ನೋಡಿ, ಸದ್ಯ ಬದುಕಿದೆನಲ್ಲಾ ಅಂತ ಹಾಗೇ ಬೆಟ್ಟ ಇಳಿದು ಕೊಯಮತ್ತೂರಿಗೆ ಹೋಗಿಬಿಟ್ಟ" ಅಂತ.

ನಮ್ಮೂರ ಪಿಶಾಚಿಗಳು ಅನಾಮತ್ತು ಆದ್ಮೀನೆ ಹೀಗೆ ಬೆಟ್ಟದ ಮೇಲಿನ ಮುಸಾಫರಖಾನೆಯಿಂದ ಬಸವನ ಬಾಲದ ಹತ್ತಿರಕ್ಕೆ ಬಿಸಾಡೋದಾದರೆ, ವಿಜ್ಞಾನದ ಪ್ರಗತಿ ಹೊಂದಿದ ಲಂಡನ್ನಿನ ಪಿಶಾಚಿಗಳು ನನ್ನನ್ನು ಅನಾಮತ್ತು ಶ್ರೀರಂಗಪಟ್ಟಣದ ಕೋಟೆಯಾಚೆ ಯಾಕೆ ಎಸೆದಿರಬಾರದು ಎನ್ನಿಸಿತು ಅಥವಾ ಶ್ರೀರಂಗಪಟ್ಟಣದ ಕೋಟೇನೇ ಇಲ್ಲಿಗೆ ತಂದು ಬಿಸಾಕಿರಬಹುದೋ ಎಂದೂ ಅನ್ನಿಸಿತು. ನನಗೆ ಜ್ಞಾನ ಸರಿಯಾಗಿದೆಯೋ ಹುಚ್ಚೇನಾದರೂ ಹಿಡಿದಿದೆಯೋ ಅಥವಾ ಕನಸೋ ? ಎಂದು ಅನುಮಾನ ಬಂತು. ಜನಿವಾರಕ್ಕೆ ಕೈ ಹಾಕಿದೆ. ಜನಿವಾರ ಇತ್ತಿಲ್ಲ. ಓಹೋ ! ಎಂದು ಹೆದರಿದೆ. ತೊಡೇನ ಜಿಗುಟಿದೆ ನೋವಾಯಿತು. ನನ್ನ ತೊಡೇನೆ ! ನಾನೇ ಜಿಗುಟಿದ್ದು ಅಂತ ಸ್ಪಷ್ಟವಾಯಿತು.

ಬಾಗಿಲ ಹತ್ತಿರ ಶಬ್ದವಾಯ್ತು. ಅರೆ ! ಇಲ್ಲೂ ಬಂದಳಲ್ಲಪ್ಪಾ ಹಾಲಿನವಳು, ಅಂತ ಒಂದು ಕ್ಷಣ ಅನ್ನಿಸಿತು. ಆದರೆ ಸುತ್ತನೋಡಿದೆ. ಕೊಠಡಿಯಲ್ಲಿ ನಾನೊಬ್ಬನೇ ಇದ್ದಿದ್ದು. ಅಮ್ಮಾ ಅಮ್ಮಾ ಅಂತ ಯಾರೂ ಕೂಗಿದ ಹಾಗೆ ಕೇಳಿಸಲಿಲ್ಲ.

ಬಾಗಿಲು ತಟ್ಟಿದ ಶಬ್ದ ಆಯಿತು. ಕಾಲುಂಗುರ ಹಾಕಿಕೊಂಡು ಚಪಡಿ ನೆಲದ ಮೇಲೆ ಭಾರತದ ಮಡಕೇನ ತಲೆಮೇಲೆ ಹೊತ್ತು ಹಂಸಗಮನೆ ನಡೆದಾಗ ಶಬ್ದ ಆಗುಲ್ಲವೇ, ಅಂತಹ ಶಬ್ದ ಬಾಗಿಲ ಆ ಕಡೆ ಆಯಿತು. ಕೈಯ್ಯುಂಗುರದಲ್ಲಿ ಯಾರಾದರೂ ಬಾಗಿಲನ್ನು ಬಾರಿಸುತ್ತಿದ್ದಾರೋ ಎನ್ನಿಸಿತು. ಹೋಗಿ ಬಾಗಿಲು ತೆಗೆದೆ.

ಹಾಲಿನವಳು ನಿಂತಿದ್ದಳು. ತಟ್ಟೆಯ ಮೇಲೆ ಹಾಲಿನ ಕುಡಿಕೆ, ಕಾಫಿ ಕೆಟಲು, ಬಿಸ್ಕತ್ತು, ಸಕ್ಕರೆ ಅಚ್ಚುಗಳಿದ್ದ ಬಟ್ಟಲು ; ಕಪ್ಪು, ಸಾಸರು ಹಿಡಿದುಕೊಂಡು ನಿಂತಿದ್ದಳು, ಬಿಳಿಯ ಕುದುರೆಮುಖಿಯೊಬ್ಬಳು "Good Morning Sir" "Bed Coffee Sir" ಎಂದು ಬಾಯಿಬಿಟ್ಟಳು. ಕುದುರೆ ಹಲ್ಲುಗಳೇನೇ ! ಕೆನೆದ ಹಾಗೇ ನಿನಾದ.

Thank you, thank you, thank you ಅಂತ ಮುಂದೆ, Miss ಅಥವಾ Misses, ಅಥವಾ Madam ಹಾಗೂ Shrimathi ಏನು ಹೇಳುಕ್ಕೂ ಅನುಮಾನ ಬಂದು, ಥ್ಯಾಂಕ್ಯೂನೇ ಮೂರುಸಾರಿ ಹೇಳಿ ಮೇಜಿನ ಬಳಿಗೆ ಬಂದು, ಅದರ ಮೇಲಿಟ್ಟಿದ್ದ ನನ್ನ ಕೈ ಚೀಲವನ್ನು ತೆಗೆದು ಹಾಸಿಗೆ ಮೇಲಕ್ಕೆ ಹಾಕಿದೆ. ಮೇಜಿನ ಮೇಲೆ ತಟ್ಟೆಯನ್ನು ಇರಿಸಿದಳು.

ಪಿಶಾಚಮುಹೂರ್ತ ! ಏನೋ ಕೆಟ್ಟ ಧೈರ್ಯ ಬಂತು. ಕಿಟಕಿಯ ಹತ್ತಿರಕ್ಕೆ ಹೋಗಿ ನಿಂತೆ. ಇಲ್ಲಿ ಬಾ ಅಂತ ಅವಳಿಗೆ ಸನ್ನೆ ಮಾಡಿದೆ. ಮಾಟ ಆದೋರ ಹಾಗೆ ಅವಳೂ ಬಂದು ನಿಂತಳು. ಕಿಟಕಿಯಾಚೆ ದೂರದಲ್ಲಿ ಕಾಣುತ್ತಿದ್ದ ಶ್ರೀರಂಗಪಟ್ಟಣದ ಕೋಟೆ ಕಂದುಕವನ್ನು ಬೆರಳು ನೀಡಿ ತೋರಿಸಿದೆ. "ಅದು ಏನು " ಎಂದು ಅವಳ ತಾಯ್ನುಡಿಯಲ್ಲೇ ಅವಳನ್ನು ಕೇಳಿದೆ.

"Tower of London Sir" ಎಂದಳು. "You must see it ; Sir, The Crown Jewels are there Sir" ಎಂದಳು.

"No. They cannot be all there" ಅಂದೆ.

"What Sir" ಎಂದಳು, ಹಯವದನೆ ಚಕಿತಳಾಗಿ.

"A Crown jewel is here" ಎಂದೆ. ಅವಳನ್ನು ಸೂಚಿಸಿದೆ.

ಕುದುರೆ ಜೂಜಿನಲ್ಲಿ ಮೊದಲು ಬಂದ ಕುದುರೆ ಮುಖಿನನ್ನು ನೋಡಿ ಎರಡನೆಯ ಜಾಗವನ್ನು ಪಡೆದ ಕುದುರೆ ಮುಖಿಯು ಹೇಗೆ ನಗುತ್ತಾಳೆ ನೋಡಿ, ಹಾಗೆ ಆಕೆ ಕಿವಿಯಿಂದ ಕಿವಿತನಕ, ಗಂಟಲಿಂದ ಮೂಗಿನ ತನಕ ನಗುವನ್ನು ಹರಡಿ, "Thank you Sir" .... "Thank you very much" "Any thing Else Sir" ಎಂದಳು.

"Nothing Madam" ಎಂದೆ. "Thank you" ಅಂದೆ. ಹಿಂತಿರುಗಿದಾಗ, ಅವಳ ತಲೆಯ ಹಿಂಗಡೆಯ ಕುಚ್ಚು ಕಟ್ಟಿದ ಕುದುರೆ ಬಾಲ, ನನ್ನನ್ನು ನೋಡಿ "ಕತ್ತೇಬಾಲ ಹೋಯ್ತು" ಎಂದು ಹೇಳುವಂತೇ ಕುಣಿಯಿತು.

ಹೋಗುವಾಗ ಆಕೆ ಬಾಗಿಲನ್ನು ಧಡಾರಂತ ಹಾಕಿಕೊಂಡು ಹೋದಳು. ಕಾಫಿ ಬಲು ಚೆನ್ನಾಗಿತ್ತು. ಬಿಸ್ಕತ್ತು ರುಚಿಯಾಗಿತ್ತು. ಮುಗಿದ ಮೇಲೆ ಸ್ನಾನ ಆಹ್ನೀಕಗಳನ್ನು ಮಾಡಿ, ಲೌಕಿಕದ ಉಡುಪು ಧರಿಸಿ, ಹೋಟಲ ಸಂತೆಮಾಳಕ್ಕೆ ಇಳಿದು ಹೋದಾಗ ಏಳೂವರೆ ಗಂಟೆ ಆಗಿತ್ತು.

★ ★ ★ ★

ನಾಷ್ಟಾಗೃಹದಲ್ಲಿ ಜನ ತುಂಬಿದ್ದರು. ಬಾಗಿಲಲ್ಲೇ ನಿಂತುಕೊಂಡಿದ್ದೆ. ಬಾಲ ಇದ್ದ ಕರಿ ನಿಲುವಂಗಿ ತೊಟ್ಟ ಒಬ್ಬಾತ ಬಂದು, ಆಹ್ವಾನಿಸಿ ಒಂದು ಕುರ್ಚಿಯಿದ್ದ ಮೇಜಿನ ಬಳಿಗೆ ಕರೆದುಕೊಂಡು ಹೋದ. ಕೊಟ್ಟಿದ್ದನ್ನು ತಿಂದು, ಹೊರಕ್ಕೆ ಬಂದೆ. ಬೈಠಕ್ ಖಾನೆಯಲ್ಲಿ ಕುಳಿತೆ. ಐದು ಸಿಗರೇಟ್ ಮುಗಿಸಿರಬಹುದು. ಆಗ ನಮ್ಮ ಹಿಂಡಿನವರೆಲ್ಲಾ ಕಣ್ಣುಜ್ಜಿಕೊಳ್ಳುತ್ತಾ ಬಂದರು. ನಾಷ್ಟಾ ಆಯಿತಾ ನಿಮ್ಮದು ಎಂದರು, ಹೌದು ಎಂದು ತಲೆಯಾಡಿಸಿದೆ. ಚಟ್ನಿಪುಡಿ ತಂದಿದೀನಿ, ಇಡ್ಲಿ ಕೊಡ್ತಾರಾ ಎಂದ ಒಬ್ಬ ಗೆಳೆಯ. "ಚಟ್ನಿಪುಡಿ ಯಾಕೆ

ತಂದೆಯೋ ? ಅವರು ಕೊಡೋ ರೊಟ್ಟೀಗೆ ಸಣ್ಣ ಕೊಡಲಿ ತಂದಿದ್ದರೆ ಉಪಯೋಗಕ್ಕೆ ಬರ್ತಾ ಇತ್ತು'' ಎಂದು ಮುಂಜಾಗ್ರತೆ ಕೊಟ್ಟೆ. ಅಂಚೆ ಜವಾನ ಬಂದ. ಚರ್ಮದ ಪೆಟ್ಟಿಗೆಯಿಂದ ಒಂದು ಥೈಲಿ ಕಾಗದಗಳನ್ನು ಮೇಜಿನ ಬಳಿಯಿದ್ದ ನೌಕರಿಣಿಯ ಬಳಿ ಇರಿಸಿ, ಆಕೆಯ ಕೈಲಿ ಸಹಿ ಹಾಕಿಸಿಕೊಂಡು, ಕಣ್ಣು ಮಿಟುಕಿಸಿ, ಕಣ್ಣು ಮಿಟುಕಿಸುವಷ್ಟರಲ್ಲೇ ಹೊರಟು ಹೋದ. ಬೈಠಕ್‌ಖಾನೆಯಲ್ಲಿ ಕುಳಿತು ನೋಡುತ್ತ ಒಬ್ಬನೇ ಇದ್ದೆ.

ಹತ್ತು ಹನ್ನೆರಡು ವರ್ಷದ ಚೆಂದುಳ್ಳಿ ಹುಡುಗನೊಬ್ಬ ನೌಕರಿಣಿಯ ಬಳಿಗೆ ಹೋದ. ಮೈ ಬಾಗಿಸಿ ಆಕೆ ಇವನ ಕಿವಿಯಲ್ಲಿ ಏನೋ ಪಿಸು ನುಡಿದಳು. ಅವ ಜಟ ಜಟಾಂತ ನಾಷ್ಟಾಗೃಹಕ್ಕೆ ಹೋಗಿ ನನ್ನ ಹೆಸರನ್ನು ಕೂಗಿದ. ಮೂರು ನಾಲ್ಕು ಸಾರಿ ಕೂಗಿದ. ನಂತರ ಬೈಠಕ್‌ಖಾನೆಗೆ ಬಂದ. ಅಲ್ಲಿದ್ದವ ನಾನೊಬ್ಬನೇ. ನನ್ನ ಹತ್ತಿರ ಬಂದು, ನನ್ನ ಹೆಸರನ್ನೇ ಕೂಗಿದ. ''ಎಲಾ ! ಮೊಮ್ಮಗ ! ನನ್ನ ಹೆಸರು ನಿಂಗೆ ಹ್ಯಾಗ್ ತಿಳೀತ್ಲಾ, ನಾನಿಲ್ಲೇ ಇವ್ನಿ, ನಾಷ್ಟಾ ಜಾಗಕ್ಯಾಕ್ಲಾ ಹೋದಿ'' ಅಂತ ಕೇಳಬೇಕು ಅಂತ ಅನಿಸ್ತು. ಆದರೂ ಹಾಗೆ ಅನ್ನದೆ ಎದ್ದು ನಿಂತೆ. "Sir, A registered letter for you. Sir." ಎಂದ ಆ ಪುಟಾಣಿ ಮುದ್ದು ಮಣಿ. ಎಂಥ ಕಿರುಕೊಳಲಿನ ಕಂಠ ಅವನದು ಅಂತ. ಕೆನ್ನೆ ಚಿವುಟೋಣ ಅನ್ನಿಸಿತು. ಆದರೂ ಹೆದರಿಕೆ, ಬೇರೆ ದೇಶ. ಅಲ್ಲಿ ಆ ವಯಸ್ಸಿನಲ್ಲೇ ಹುಡುಗರು ಏನೇನೆಲ್ಲಾ ತಿಳಕೊಂಡಿರ್ತಾರೋ, ನಾನು ಕೈ ಚಾಚಿ ಅವಲಕ್ಷಣ ಅಂತ ಅನ್ನಿಸ್ಕೋಬಾರದು ಅಂತ ಬುದ್ಧಿ ಹೇಳಿತು, ಅವನ ಹಿಂದೆಯೇ ಹೋದೆ. ನೌಕರಿಣಿ ಹೇಳಿದ ಕಡೆ ಸಹಿ ಹಾಕಿದೆ. ಭಾಂಗಿ ಲಕ್ಕೋಟೆಯನ್ನು ತೆಗೆದುಕೊಂಡು ಬಂದು ಬೈಠಕ್‌ಖಾನೆಯಲ್ಲಿ ಕುಳಿತೆ. ಒಡೆದು ನೋಡಿದೆ. ಭಾಂಡಾರವೇ ಸಿಕ್ಕಿತು. ನೂರು ಪೌಂಡುಗಳಿತ್ತು ಒಂದು ಕಾಗದವೂ ಇತ್ತು. ''ನೀವಿಲ್ಲಿಗೆ ಬಂದಿದ್ದೀರಿ ಅಂತ ತಿಳಿಯಿತು. ನಿಮಗೆ ಇದನ್ನು ಕೊಡಬೇಕು ಅಂತ ಅನ್ನಿಸಿತು. ನಿಮ್ಮೂರಿನಲ್ಲಿದ್ದಾಗ ನೀವು ಮಾಡಿದ ಸಹಾಯಕ್ಕೆ ಇದು ಕಾಣಿಕೆ. ದಯವಿಟ್ಟು ರಸೀತಿ ಕಳಿಸಿ'' ಎಂದು ಬರೆದಿತ್ತು.

ಕುಚೇಲ ಕೃಷ್ಣನಿಗೆ ಅವಲಕ್ಕಿ ಕೊಟ್ಟು ಹಿಂತಿರುಗಿದಾಗ ಹೇಗೆ ಅವನ ಮನಸ್ಸು ಆಯಿತು, ಹಾಗೆ ಆಯಿತು ನನ್ನ ಮನಸ್ಸು. ತುಳಸೀದಳವನ್ನು ತಕ್ಕಡಿಗೆ ಹಾಕಿದಾಗ ಕೃಷ್ಣ ಆ ಕಡೆ ತಟ್ಟೆಯಲ್ಲಿ ಹಗೂರಾದನಲ್ಲ ಹಾಗಾಯ್ತು ನನ್ನ ದೇಹ. ಅಂಗೈಯಲ್ಲಿ ಪೌಂಡುಗಳಿದ್ದರೆ, ಆ ದೇಶದಲ್ಲಿ ಕೈಲಾಸ ಸಿಕ್ಕಿದ ಹಾಗೇ ಅಲ್ಲವೇ ?

''ಏನಯ್ಯಾ ಅವರು ಕುಡಿಸಿದ್ದು, ಕಾಫೀನೋ ? ಕಲಗಚ್ಚೋ ?'' ಎಂದು ನಾಷ್ಟಾವಳಿಯಿಂದ ಬಂದ ಹಿಂಡಿನ ಒಬ್ಬಾತ ನನ್ನನ್ನು ಕೇಳಿದ.

''ನನಗೆ ಕೊಟ್ಟ ಕಾಫಿ, ಕಾಫಿಯಾಗೇ ಇತ್ತಲ್ಲ'' ಎಂದೆ.

''ನಿನಗೆ ಹಾಕಿ ಕೊಟ್ಟ ಕಾಫಿ ಪುಡೀನೆ ತಿರುಗಿ ಬಿಸಿ ನೀರಿಗೆ ಹಾಕಿ ನಮಗೆ ಕೊಟ್ಟರು ಅಂತ ಕಾಣುತ್ತೆ, ನಮ್ಮ ಬಣ್ಣಕ್ಕೆ ಸರಿಯಾದ ಕಾಫಿ. ನಿಮ್ಮ ಬಣ್ಣಕ್ಕೆ ಸರಿಯಾದ ಕಾಫಿ ನಿಮಗೆ ಮೊದಲು ಕೊಟ್ಟಿರಬಹುದು'' ಎಂದ.

ಹಿಂಡಿನವರಿಗಿಂತ ಸ್ವಲ್ಪ ಬೆಳ್ಳಗಿದ್ದಿದ್ದು ನನ್ನ ತಪ್ಪೆ!

ಬೆಳ್ಳಗಿದ್ದಿದ್ದರಿಂದ, ಕಪ್ಪು ಮನದವರು ಕಪ್ಪು ಕಾಫಿ ಕುಡಿದು ಬಯ್ದಾಗ ಅಯ್ಯೋ ಪಾಪ ಎಂದು ಕನಿಕರದಿಂದ ಮನಸ್ಸಿನಲ್ಲೇ ಹೇಳಿಕೊಂಡೆ. ಹಾಗೆ ಹೇಳಿಕೊಳ್ಳುವ ಮನಸ್ಸನ್ನು, ಅಂಗೈಯಲ್ಲಿದ್ದ ಅನಿರೀಕ್ಷಿತವಾದ ಹಣ ಜಣ ಝಣಿಸುತ್ತಾ ಕೊಟ್ಟಿತ್ತು.

★ ★ ★ ★

''ಬನ್ನಿ , ಬನ್ನಿ ಹೊತ್ತಾಯ್ತು ಬನ್ನಿ'' ಎಂದು ಧುಡುಮಿಯೊಬ್ಬಳು ಧುಡುಗುಟ್ಟುತ್ತಾ ಬಂದು, ''ಬಸ್ಸು ಸಿದ್ಧವಾಗಿದೆ ? ಬೇಗ ಹೊರಟರೆ ಟವರ್ ಆಫ್ ಲಂಡನ್ ನೋಡಬಹುದು. ಕ್ರೌನ್ ಜ್ಯೂಯೆಲ್ಸ್ ನೋಡಬಹುದು'' ಎಂದು ಹೇಳಿದಳು.

ಈ ಅಜ್ಜೀಗೆ ಇಷ್ಟು ಯಾಕೆ ಅವಸರ ಎಂದು ಅವಳನ್ನೇ ನೋಡಿದೆ. ಎರಡು ಸೋರೇಕಾಯಿಗಳ ಮೇಲೆ ಒಂದು ಉದ್ದಾನೆ ಬೂದು ಕುಂಬಳಕಾಯಿ ಪೇರಿಸಿಟ್ಟ ಎಂದುಕೊಳ್ಳಿ. ಅದರ ಮೇಲೆ ಅಡ್ಡಗಲದ ಸಕ್ಕರೆ ಗುಂಬಳಕಾಯನ್ನು ಇಡಿ, ಅದರ ಮೇಲೆ ಇನ್ನೆರಡು ಸಕ್ಕರೆ ಗುಂಬಳಕಾಯನ್ನು ಬೇಕಾಬಿಟ್ಟಿ ಇಟ್ಟೆವು ಎಂದುಕೊಳ್ಳಿ. ಅದರ ಮೇಲೊಂದು ಚಕ್ಕೋತನ ಹಣ್ಣನ್ನು ಪೇರಿಸಿಟ್ಟೆವು ಎನ್ನಿ. ಚಕ್ಕೋತನ ಹಣ್ಣಿಗೆ ಸಣ್ಣಗುಣಿಯೆರಡು ಕಣ್ಣು ತೋಡಿ, ಮೂಗೊಂದನ್ನು ಅದುಮಿ ಅಂಟಿಸಿ, ಅನುಸ್ವಾರ ಬರುವ ಸಣ್ಣ ತೂತಿನ ಬಾಯನ್ನು ಕೊರೆದು, ಮುಸುಕಿನ ಜೋಳದ ತಲೆಯ ಕೂದಲನ್ನು ಮೇಲೆ ಕವಿಸಿದಿರಿ ಎಂದುಕೊಳ್ಳಿ.

ತರಕಾರಿ ಬೆಳೆದು, ತರಕಾರಿಯಂತೇ ತಾವೂ ತಮ್ಮ ಎಲ್ಲನ್ನೂ ಹೊರವಾಗಿ ಬೆಳೆಸುವ, ಮಾರ್ಕೆಟ್ ಹೆಂಗಸರು, ತರಕಾರಿಯನ್ನು ಮಾರುವಾಗ ಹೇಗಿರ್ತಾರೆ, ಹೇಗೆ ಮಾತಾಡ್ತಾರೆ, ಥೇಟ್ ! ಹಾಗೇನೇ, ಇದ್ದಳು, ''ಬನ್ನಿ ಬನ್ನಿ'' ಎಂದು ಕೂಗಿದ ಹೆಣ್ಣು, ಆಕೆಯೇ ನಮಗೆ ಲಂಡನ್ನಿನಲ್ಲಿ ಮಾರ್ಗದರ್ಶಿನಿ.

ಕರುಳ್ಳರಿವ, ಕಿರುದನಿಯ<br>ದೋರ್ಗಾಯಿನರಸಿ<br>ಬರೆ ಬರೆಯ ಬಿಸಿ ನುಡಿದು<br>ತೋರ್ಮಾರ್ಗಗ್ಗ ದಾಕಿ.

— ಆಕೆ ಕರೆದುಕೊಂಡು ಹೋದ ಮಾರ್ಗದಲ್ಲಿ ನಿತ್ಯಯಾತ್ರೆಗೆ ಹೊರಟೆವು.

ಸ್ವಲ್ಪ ಹೊತ್ತು ಊರಿನಲ್ಲಿ ಸುತ್ತಿದ ಮೇಲೆ ಒಂದು ದೊಡ್ಡ ಕಟ್ಟಡದ ಬಳಿ ಬಸ್ಸುಗಳು ನಿಂತವು. ''ಎದುರಿಗಿರುವುದೇ ವೆಸ್ಟ್ ಮಿನಿಸ್ಟರ್ ಅಬ್ಬೆ ; ಅದನ್ನು ನೋಡಿಕೊಂಡು ಬರೋಣ'' ಎಂದು ಮಾರ್ಗದರ್ಶಕಿ ಹೇಳುತ್ತಾ ಇಳಿದಳು. ಅವಳ ಹಿಂದೆ ನಾವೆಲ್ಲರೂ ಕಾಲು ಹಾಕಿದೆವು.

ಬಾಲ್ಯದಿಂದಲೂ ಇಂಗ್ಲಿಷ್ ಚರಿತ್ರೆ, ಇಂಗ್ಲೀಷ್ ಸಾಹಿತ್ಯ. ಇಂಗ್ಲೆಂಡಿನವರ ಜನ ಜೀವನ ಮತ್ತು ಸಾಮಾಜಿಕ ನಡವಳಿಕೆಯನ್ನು ಅಬ್ಯಾಸ ಮಾಡಲೇಬೇಕಾಗಿ ಮಾಡಿದ್ದ ನಮ್ಮ ವಯಸ್ಸಿನವರಿಗೆ ವೆಸ್ಟ್ ಮಿನಿಸ್ಟರ್ ಅಬೆ ಎಂದರೆ ಎದೆ ಝುಗ್ ಎಂದಿತು.

ಇಂಗ್ಲೆಂಡಿನ ಹಿರಿಯ ಸಾಹಿತಿಗಳು, ಜನನಾಯಕರು, ವೈಜ್ಞಾನಿಕರು ಇಂತಹವರೆಲ್ಲರನ್ನೂ ಸಮಾಧಿ ಮಾಡುವುದು ಅಲ್ಲೇ ! ಅಬೆಯೊಳಗೆ ನಡೆಯುವಾಗ ಕಾಲ ಕೆಳಗೇ ಆ ಹಿರಿಯಾತ್ಮರ ಹೆಸರು ಕೆತ್ತಿರುವ ಶಿಲಾ ಶಾಸನಗಳು ! ಇಂತಹ ಹಿರಿಯರ ಸಮಾಧಿಯ ಮೇಲೆ ಕಾಲಿಡುತ್ತಾ ಇದೀನಲ್ಲ! ಯಾವ ಕುಂಭೀಪಾಕ ನನಗೆ ಕಾದಿದೆಯೋ ಎಂದು ಅನ್ನಿಸದೆ ಇರಲಿಲ್ಲ. ಇಂದು ಸಾಹಿತ್ಯದ ರಸಾನುಭವವನ್ನು ಮೆಲ್ಲಲು ಸಾಧ್ಯವಾಗಿರುವುದು, ಇಂಗ್ಲೀಷ್ ಸಾಹಿತ್ಯವನ್ನು ಓದಿದುದರಿಂದ. ಹಾಗಾಗಿ ಈ ಹಿರಿಯ ಋಣವನ್ನು ತೀರಿಸುವುದಾದರೂ ಹೇಗೆ ಎಂದು ಶಂಕಿಸಿದ್ದೂ ಉಂಟು. ಅವರ ಸಮಾಧಿಯ ಬಳಿ ಹೋಗುವ ಅವಕಾಶ ದೊರೆತಿತ್ತು, ಈಗ. ಅದಕ್ಕೋಸ್ಕರ ಅಲ್ಲೇ, ಮಂತ್ರದಲ್ಲಿ ಅವರಿಗೆಲ್ಲಾ ಎಳ್ಳು ನೀರಿನ ತರ್ಪಣವನ್ನಿತ್ತೆ.

ನಂತರ ಊರ ಭೇಟಿಯನ್ನು ಮುಂದುವರೆಸಿದುವು.

ನಾವೆಲ್ಲಾ ಹುಡುಗರಾಗಿದ್ದಾಗ, ರಸ್ತೇಲಿ ''ಕಾಶಿ ರಾಮೇಶ್ವರ'' ಅಂತ ಕೂಗಿಕೊಂಡು ಬರುತ್ತಾ ಇದ್ದರು. ತಗಡಿನ ಡಬ್ಬದಲ್ಲಿ, ಭೂತ ಕನ್ನಡಿಯ ಮೂಲಕ, ಬೇರೆ ಬೇರೆ ಊರುಗಳ ವರ್ಣಚಿತ್ರಗಳನ್ನೂ ತೋರಿಸುತ್ತಿದ್ದರು. ಮೂರು ಕಾಸು ಕೊಡಬೇಕಾಗಿತ್ತು. ಚಿತ್ರಗಳನ್ನು ತೋರಿಸುವಾಗ, ಲಾವಣಿ ಹಾಡಿದ ಹಾಗೆ ಕಾಶಿ ನೋಡು, ಹನುಮಾನ್ ಘಾಟ್ ನೋಡು ಎಂದು ಹಾಡು ಹಾಡುತ್ತಿದ್ದ. ನಮಗೆಲ್ಲಾ ಬಲು ಖುಷಿ ಆಗುತ್ತಿತ್ತು.

ಈ ಮುಪ್ಪಿನ ವಯಸ್ಸಿನಲ್ಲಿ ತಿರುಗಿ ಕಾಶಿ ರಾಮೇಶ್ವರ ತರಹ ಆಟ ನೋಡ್ತೀನಿ ಅಂತ ಯಾರಾದರೂ ಹೇಳಿದರೆ, ನಕ್ಕು ಬಿಡುತ್ತಿದ್ದೆ. ಅಷ್ಟು ಅರಳುಮರಳು ಇನ್ನೂ ಅಮರಿಕೊಂಡಿಲ್ಲ ಎಂದು ನಕ್ಕುಬಿಡುತ್ತಿದ್ದೆ. ಆದರೆ ಲಂಡನ್ ತೋರಿಸುಕ್ಕೆ ಬಂದ ಮಾರ್ಗದರ್ಶಿನಿಯು, ತಗರದ ಡಬ್ಬದಂತಿದ್ದ ಬಸ್‌ನಲ್ಲಿ ನಮ್ಮನ್ನು ಕೂರಿಸಿ, ಊರಲ್ಲೆಲ್ಲಾ ಓಡಾಡಿಸುತ್ತ, ದಾರಿಯಿಂದುದ್ದಕ್ಕೂ

''ಇದು ನೋಡಿ, ಎಡಕ್ಕೆ ವಿಕ್ಟೋರಿಯಾ ಎಂಬಾಕ್‌ಮೆಂಟ್-ಬಲಕ್ಕೆ ನೋಡಿ ಟೆಂಪಲ್ - ಈಗ ನಾವು ಕ್ವೀನ್ ವಿಕ್ಟೋರಿಯಾ ರಸ್ತೆಯಲ್ಲಿದ್ದೇವೆ — ಮುಂದೆ ಕ್ಯಾನನ್

ರಸ್ತೆ- ಇದೇ ಬ್ಯಾಂಕ್ ಆಫ್ ಇಂಗ್ಲೆಂಡ್ ;'' ಇತ್ಯಾದಿ ಪೀಕ್ಷಿತ ವಿವರಣೆಯನ್ನು ನೀಡುತ್ತಾ ಇದ್ದಳು. ಎಲ್ಲವನ್ನೂ ಕಾಶಿ ರಾಮೇಶ್ವರ ನೋಡಿದ ಹಾಗೇ, ಕನಸ್ಸಿನಲ್ಲಿ ಕಂಡ ಹಾಗೇ ಕಂಡಿದ್ದು. ನಮ್ಮೂರಿಗೆ ಹಿಂತಿರುಗಿದ ಮೇಲೆ ಜ್ಞಾಪಿಸಿಕೊಂಡರೆ, ಎಲ್ಲವೂ ಮಸಕು, ಮಸಕು.

ಸಂಜೆ ಐದು, ಐದೂವರೆ ಹೊತ್ತಿಗೆ, ಮಾರ್ಗಸಖಿಗೂ ಗಂಟಲು ಜಿಗಡಾಯಿಸಿತು. ''ನಾಳೆ ಮಧ್ಯಾಹ್ನ ನಿಮ್ಮನ್ನೆಲ್ಲಾ ತಿರುಗಿ ಕರೆದುಕೊಂಡು ಹೋಗುತ್ತೀನಿ. ಸಿದ್ಧವಾಗಿರಿ ; ಮಧ್ಯಾಹ್ನ 1-30ಕ್ಕೆ ಬರುತ್ತೇನೆ'' ಎಂದಳು, ಆ ಹೊತ್ತಿಗೆ ನಮ್ಮ ಹೋಟಲಿನ ಮುಂದೆ ಬಸ್ ನಿಂತಿತ್ತು.

ಮರುದಿನ ಮಧ್ಯಾಹ್ನದ 1-30 ಮಾರ್ಗದರ್ಶಕಿಯ ಕಾಶಿ ರಾಮೇಶ್ವರ ಪ್ರದರ್ಶನಕ್ಕೆ ನಾನು ಹೋಗಕೂಡದು, ಎಂದು ಬಸ್ಸು ಇಳಿಯುವಾಗಲೇ ತೀರ್ಮಾನಿಸಿದೆ.

ರಾತ್ರಿ ಹೋಟಲಲ್ಲಿ ಊಟ. ಆ ಹೋಟಲಲ್ಲಿ ಬಡಿಸುವವರೆಲ್ಲಾ ಇಂಗ್ಲೀಷ್ ಬಾರದ ಇಟಲಿಯ ಕೀಳ್ಮಟ್ಟದ ಜನರೇ ! ಅರುಚಿಯಾದ ಊಟವನ್ನು ಅವಲಕ್ಷಣವಾಗಿ ಬಡಿಸಲು ಈ ಅಪಸ್ಮಾರ ಬಡಿದಂತಿದ್ದವರು ಬಂದಾಗ, ಎಷ್ಟೇ ಹಸಿವಾಗಿದ್ದರೂ, ಇವತ್ತೂ ಇನ್ನೊಂದು ಏಕಾದಶಿ ಮಾಡೋಣ ಎಂಬ ಉತ್ಕಟೇಚ್ಛೆ ಉದ್ಭವಿಸುತ್ತಿತ್ತು.

ಊಟದ ಶಾಸ್ತ್ರ ಮುಗಿಸಿ, ಕೊಠಡಿಗೆ ಹಿಂತಿರುಗಿ, ಒಂದು ಹಿಡಿ ಹುರಿಗಾಳನ್ನು ಸಾವಧಾನವಾಗಿ ತಿಂದು ತೇಗಿ, ನೀರು ಕುಡಿದು ಮಲಗಿದೆ.

ಮಾರನೆ ಬೆಳಿಗ್ಗೆ ಒಬ್ಬನೇ ಷಹರು ನೋಡಲು ಹೊರಟೆ. ಹಾಗೂ ಊರಿಗೆ ಹಿಂತಿರುಗಿದಾಗ ಹಂಚುವುದಕ್ಕೆ ಉಡುಗೊರೆ ವಸ್ತುಗಳನ್ನು ಸಣ್ಣ ಪುಟ್ಟ ಅಂಗಡಿಗಳಲ್ಲಿ ಸುಲಭ ಬೆಲೆಗೆ ಗಿಟ್ಟಿಸಬಹುದು ; ಎಂಬ ಆಸೆಯೂ ಇತ್ತು. ದೊಡ್ಡ ರಸ್ತೆಗಳಲ್ಲಿ ದೊಡ್ಡ ದೊಡ್ಡ ಅಂಗಡಿಗಳಿರುತ್ತವೆ. ಅಲ್ಲಿನ ಬೆಲೆಗಳು ದುಬಾರಿ ಆದುದರಿಂದ ದೊಡ್ಡ ರಸ್ತೆಯಿಂದ ಸಣ್ಣ ರಸ್ತೆಗೆ ಅಡ್ಡ ತಿರುಗಿ ನಡೆದೆ. ಮೂರು ನಾಲ್ಕು ಅಂಗಡಿಗಳಲ್ಲಿ ನಮ್ಮ ದೇಶದವರೇ ಕೆಲಸಕ್ಕೆ ಇದ್ದರು. ಅಲ್ಲಿಗೆ ಹೋದರೆ ಸ್ವಜಾತಿ ವೈರದಿಂದ ಅವರುಗಳು ಪೂರ್ಣ ತಿರುಪತಿ ಮಾಡಿ ಕಳಿಸಬಹುದು ಎಂದು ಹೆದರಿ ಆ ಅಂಗಡಿಗಳನ್ನೂ ಬಹಿಷ್ಕರಿಸಿದೆ.

ನಮ್ಮೂರಿನಲ್ಲಿ ಡಬ್ಬದ ತಗಡಿನ ಪುಟ್ಟ ಪುಟ್ಟ ಅಂಗಡಿಗಳು ಕಾಲು ದಾರಿಯ ಬಳಿಯಲ್ಲಿ ಇರುಲ್ಲವೇ ? ಅದೇ ತರಹ, ಆದರೆ ತಗಡಿನ ಅಂಗಡಿಗಳಲ್ಲ ! ಜಾಯಿಕಾಯಿ ಮರದ ಅಂಗಡಿಗಳು ಆ ಸಂದಿಗಳಲ್ಲಿತ್ತು. ಒಂದು ಅಂಗಡಿಗೆ ನಾನು ಹೋದ ಕೂಡಲೇ, ಅಂಗಡಿಯವ ಕೂತಲ್ಲಿಂದಲೇ ''ತೊಗೊಳ್ಳಿ ಹತ್ತು ಷಿಲಿಂಗ್ ಆರು ಪೆನ್ನಿ'' ಅಂತ ಹೇಳಿ ಪ್ಯಾಕೆಟ್ಟನ್ನೂ ಮುಂದಿಟ್ಟ. ಏನು ಬೇಕು ಅಂತ ನಾನಿನ್ನೂ ಕೇಳಲೇ ಇಲ್ಲ, ಆಗಲೇ ಅವ ಮಾರುಕ್ಕೆ ಶುರು ಹಚ್ಚಿದನಲ್ಲಾ ? ಅಂತ ಅಚ್ಚರಿಯಾಯಿತು. ಪ್ಯಾಕೆಟ್ಟನ್ನು ನೋಡಿದೆ ! ಹಗಲು ಹನ್ನೊಂದು ಗಂಟೆಯಿಂದಲೇ ಇದರ ವ್ಯಾಪಾರ ಶುರುವಾಗುತ್ತದೆಯೇ ? ಇಂಥ ಸಂಮು

ಗೊಂದಿನ ಅಂಗಡಿಗಳಿಗೆ ಬಂದವರೆಲ್ಲಾ ಇಂತಹ ರಬ್ಬರ ಕವಚಗಳನ್ನು ಕೊಳ್ಳಲಿಕ್ಕೇ ಬರುತ್ತಾರೆಯೇ ? ಹೀಗೆಲ್ಲಾ ಯೋಚನೆಗಳು ತೂರಾಡಿದವು.

"ಅಯ್ಯಾ ! ಸುಲಭ ಬೆಲೆ ಉಡುಗೊರೆ ವಸ್ತುಗಳನ್ನು ಕೊಳ್ಳಲು ಬಂದೆ. ಅಂತಹವು ಇಲ್ಲವೇ ನಿಮ್ಮ ಹತ್ತಿರ, ಇದನ್ನು ಕಟ್ಟಿಕೊಂಡು ನನಗೇನು ಆಗಬೇಕು ?" ಎಂದು ನರೆತ ಕೂದಲನ್ನು ತೋರಿಸಿದೆ.

"ಇದಕ್ಕಿಂತ ಚೆನ್ನಾದ ಮತ್ತು ಉಪಯುಕ್ತವಾದ ಉಡುಗೊರೆ ಬೇರೆ ಯಾವುದು ತಾನೇ ಇದ್ದೀತು ! ನೀವು ಹೊಸಬರು ಅಂತ ಕಾಣುತ್ತೆ ಈ ಊರಿಗೆ. ಉಡುಗೊರೆ ವಸ್ತುಗಳನ್ನು ಸುಲಭ ಬೆಲೆಗೆ ಕೊಳ್ಳಬೇಕಾದರೆ, ನೇರ ಸೆಲ್ಫ್‌ರಿಡ್ಜಸ್‌ಗೆ ಹೋಗಿ. ಪೆನ್ನಿ ಇಂದ ಪೌಂಡುಗಳ ವಸ್ತುಗಳೆಲ್ಲ ದೊರೆಯುತ್ತೆ" ಎಂದು ಉಪದೇಶ ಮಾಡಿ ಕಳಿಸಿದ.

ಸೆಲ್ಫ್ ರಿಡ್ಜಸ್‌ಗೆ ಹೋಗಿ, ಎರಡು ಮೂರು ತಾಸುಗಳು ಮೂರು ನಾಲ್ಕು ಮೈಲಿಗಳಷ್ಟು ದೂರ ಓಡಾಡಿ, ಚಿಕ್ಕ ಪುಟ್ಟ, ಬೇಕಾದ್ದು ಬೇಡದ್ದು, ಹೀಗೆ ಕಣ್ಣಿಗೆ ಕಂಡ ಸುಲಭ ಬೆಲೆಯ, ಇಂಗ್ಲೆಂಡಿನಲ್ಲಿ ಕೊಂಡಿದ್ದು ಎಂದು ಎದ್ದು ಕಾಣುವ ವಸ್ತುಗಳನ್ನು ಕೊಂಡೆ ; ಹಿಂತಿರುಗುವಾಗ ಬೊಂಬಾಯಿನಲ್ಲಿ, ಉಪಯುಕ್ತವಾದ ಉಡುಗೊರೆ ಸಾಮಾನುಗಳನ್ನು ಕೊಂಡರಾಯಿತು ಎಂದು ತೀರ್ಮಾನಿಸಿದೆ. ಬೊಂಬಾಯಿಗೆ ಹೋದಾಗ, ಹಣವಾದರೂ ಬೇಕಾದಷ್ಟು ಸಿಗುತ್ತಲ್ಲ. ಲಂಡನ್ನಿನಲ್ಲಿದ್ದ ಹಾಗೆ ಕುಚೇಲ ಸಂಸಾರ ಮಾಡಬೇಕಾಗಿರಲಿಲ್ಲವಲ್ಲ !

ಹಿಂತಿರುಗಿ ಹೋಟಲಿಗೆ ಬಂದು, ತಂದ ಸಾಮಾನುಗಳನ್ನೆಲ್ಲಾ ಪೆಟ್ಟಿಗೆಯಲ್ಲಿಡುವಾಗ, ನೋಡಿದೆ, ತರಹಾವಾರಿ ಪೆನ್ಸಿಲ್ಲುಗಳು, ಕಾಲು ಚೀಲಗಳು, ಟೈಗಳು, ಟೈ ಪಿನ್ನುಗಳು ಮತ್ತು 20-30 ಸೆಲ್ಫ್ ರಿಡ್ಜಿನ ಲಕ್ಕೋಟೆಗಳು !

ಬೊಂಬಾಯಿನಲ್ಲಿ ಸಾಮಾನು ಕೊಂಡರೂ, ಸೆಲ್ಫ್‌ರಿಡ್ಜಿನ ಲಕ್ಕೋಟೆಯಲ್ಲಿ ಹಾಕಿ ಕೊಟ್ಟರೆ, ಕೊಟ್ಟ ಉಡುಗೊರೆ ಪವಿತ್ರವಾಗುತ್ತಲ್ಲ ! ಉಡುಗೊರೆ ತೆಗೆದುಕೊಂಡವನ ಮನಸ್ಸೂ ಹಾಯೆನಿಸುತ್ತಲ್ಲ !

# "ಪ್ರಾರಬ್ಧ ಕಟ್ಟಿಕೊಂಡು"

ಸಂಜೆ ಏಳೂವರೆ ಗಂಟೆ ಆಗಿದ್ದಿರಬಹುದು, ನಾವೆಲ್ಲಾ ಬ್ರಿಟಿಷ್ ಮೆಡಿಕಲ್ ಅಸೋಸಿಯೇಷನ್ನಿನವರು ಏರ್ಪಡಿಸಿದ್ದ ಸತ್ಕಾರ ಕೂಟದಿಂದ ಹಿಂದಿರುಗಿದಾಗ. ಎಂತೆಂತಹುದೋ ತಿಂಡಿಗಳನ್ನು ತಟ್ಟೆಗಳಲ್ಲಿಟ್ಟಿದ್ದರು ಸತ್ಕಾರ ಕೂಟದಲ್ಲಿ. ನೋಡುಕ್ಕೆ ಅಷ್ಟು ಅವಲಕ್ಷಣವಾಗಿಲ್ಲದೆ ಇದ್ದರೂ, ಹತ್ತಿರಕ್ಕೆ ಹೋಗಿ ಚಮಚದಲ್ಲಿ ಎತ್ತಿದಾಗ, ಒಂದು ತರಹ ಕೆಟ್ಟ ವಾಸನೆ ಬಡೀತಿತ್ತು. ನಮ್ಮೂರಿನಲ್ಲಿ ರಸ್ತೆ ಅಂಚಿನ ಚರಂಡಿ ಪಕ್ಕದಲ್ಲಿ ಒಲೆ ಬಾಂಡ್ಲೆ ಇಟ್ಟುಕೊಂಡು ವಡೆ ಪಗೋಡಾ ಮಾರ್ತಾರಲ್ಲ! ಆ ತರಹಾನೇ ಅವರೂ ಚರಂಡಿ ಪಕ್ಕದಲ್ಲಿ ಇವನ್ನೂ ತಯಾರಿಸಿರಬಹುದು, ಆದರೆ ನಮ್ಮೂರಿನವರು ಚರಂಡಿ ವಾಸನೆಯನ್ನು ಹೊಡೆದೋಡಿಸುವ ಹಾಗೆ ಮಸಾಲೆ ಜಡೀತಾರೆ. ಅಲ್ಲಿನ ಜನರಿಗೆ ಈ ಮರ್ಮ ತಿಳಿಯದು ಎಂದುಕೊಂಡೆ ; ಹಾಗಾಗಿ ಹೋಟಲಿಗೆ ಹಿಂದಿರುಗಿದಾಗ ಹೊಟ್ಟೆ ಚುರಚುರ ಅನ್ನುತ್ತಿತ್ತು.

ಹೋಟಲ ಮ್ಯಾನೇಜರ್ ಬಳಿಗೆ ಹೋದೆ. "ಅಯ್ಯಾ ! ಈ ರೀತಿ ಸ್ವಲ್ಪ ಬಳಲಿದ್ದೀನಿ. ಹಾಕೋ ಊಟಾನ ಸ್ವಲ್ಪ ಬೇಗ ಹಾಕಿದರೆ ಹೋಗಿ ಬಿದ್ಕೋತೀನಿ. ಈ ಊರಿಗೆ ಬಂದಾಗ ಪ್ರಸಿದ್ಧವಾದ ಯಾವುದಾದರೂ ನಾಟಕ ನೋಡಬೇಕು ಎಂದು ಆಸೆಪಟ್ಟು ಬಂದೆ. ಇಲ್ಲಿಗೆ ಬಂದ ಕೂಡಲೆ ವಿಚಾರಿಸಿದೆ. ಸ್ವಲ್ಪ ಹೆಸರಾದ ನಾಟಕಗಳಿಗೆಲ್ಲಾ ಮೂರು ತಿಂಗಳ ಹಿಂದೆ ಜಾಗಗಳೆಲ್ಲವನ್ನೂ ಕಾದಿರಿಸಲಾಗಿದೆ ಎಂದರು. ಸರಿ ! ಈ ಆಶೆ ಮಿಕ್ಕ ಇತರ ಆಶೆಗಳಂತೆ ನಿರಾಶೆಯಾಯಿತು" ಎಂದು ಚೊಕ್ಕ ಇಂಗ್ಲೀಷಿನಲ್ಲಿ ಹೇಳಿದೆ. ಆತ ಇಂಗ್ಲೀಷ್ ಮಾಸ್ತರಾಗಿದ್ದನಂತೆ, ಇಂಡಿಯಾದಲ್ಲಿ, ಸ್ವದೇಶಕ್ಕೆ ಹಿಂದಿರುಗಿದಮೇಲೆ ಮಾಸ್ತರರಿಗಿಂತ ಹೋಟಲ ದೊಡ್ಡ ಮಾಣಿಗಿರಿ ಅನುಕೂಲ ಅಂತ ಅನ್ನಿಸಿತಂತೆ. ಅಲ್ಲದೆ ಅವನ ಕೈಹಿಡಿದಾಕೆಯೇ ಆ ಹೋಟಲಿನ ಮೇಟ್ರನ್. ಅಂದರೆ ಹೋಟಲ್ ಕೊಠಡಿಗಳ ಚೊಕ್ಕ ಟಾರ, ಬಟ್ಟೆ ಬರೆ, ನೀರು ನಿಡಿ, ಇವುಗಳೆಲ್ಲವನ್ನೂ ನೋಡಿಕೊಳ್ಳುವ ಸ್ತ್ರೀ ವರ್ಗದ ನಾಯಕಿ : ಅಂತಹ ನಾಯಕಿಯು ಅವನ ಕೈ ಹಿಡಿದಮೇಲೆ, ಆತನ ಸೊಂಟ ಮುರಿದು ಹೋಗಿರಬೇಕು,

ಆದುದರಿಂದಲೇ ಅವ, ಮಾಸ್ತರ ಕೆಲಸಕ್ಕೆ ರಾಜೀನಾಮೆ ಕೊಟ್ಟು ಈ ಕೆಲಸಕ್ಕೆ ಇಳಿದಿದ್ದ. ಲಕ್ಷಣವಾದ ಮೈಕಟ್ಟಿನ ಮಧ್ಯ ಪ್ರಾಯದ ಆತ ಬಲು ಹಿತವಾಗಿ ಮಾತನಾಡುತ್ತಿದ್ದ. ನನ್ನ ಅಹವಾಲನ್ನು ಕೇಳಿದಾಗ "ಈಗಾಗಲೇ ಊಟ ಸಿದ್ಧವಾಗಿದೆ. ಬೇಕಾದರೆ ಈಗಲೇ ಉಣ್ಣಬಹುದು. ಎಲ್ಲರೂ ಬರಲಿ ಅಂತ ಕಾದಿರುವುದು ವಾಡಿಕೆ. ಆ ವಾಡಿಕೆಯೇನೂ ನಿರ್ಬಂಧವಲ್ಲ. ಅದಂತಿರಲಿ ; ಇಂಗ್ಲೀಷನ್ನು ಇಷ್ಟು ಚೆನ್ನಾಗಿ ಮಾತಾಡುತ್ತೀರಿ. ದಕ್ಷಿಣ ಭಾರತದವರಿರಬೇಕು, ಹೌದೇ" ಅಂದ.

"ಹೌದಪ್ಪ ! ಇಂತಹ ಕಾಲೇಜಿನಲ್ಲೇ ನಾನು ಓದಿದ್ದು" ಎಂದು ಪ್ರವರ ಹೇಳಿದೆ.

"ಬಲು ಸೊಗಸಾಯಿತು ; ನಾನೂ ಭಾರತದಲ್ಲಿದ್ದಾಗ ಆ ಕಾಲೇಜಿನಲ್ಲೇ ಎರಡು ವರ್ಷ ಇಂಗ್ಲೀಷ್ ಪ್ರೊಫೆಸರಾಗಿದ್ದೆ. ಬನ್ನಿ, ನೀವಿನ್ನು ನನ್ನ ಸ್ವಂತ ಅತಿಥಿ ಎಂದು ಭಾವಿಸಿಕೊಳ್ಳಿ. ಎಲ್ಲ ಏರ್ಪಾಡು ಸೌಕರ್ಯಗಳನ್ನೂ ಮಾಡಿಕೊಡುತ್ತೇನೆ.

"ನಾಟಕದ ಮಾತಾಡಿದಿರಿ. MY FAIR LADY ಎಂಬ ಸಂಗೀತ ಪ್ರಧಾನವಾದ ನಾಟಕವಿದೆ. ಆರು ತಿಂಗಳ ಮೊದಲೇ ಎಲ್ಲಾ ಪೀಠಗಳೂ ಮಾರಾಟವಾಗಿ ಹೋಗಿದೆ. ಆದರೂ ವಿದೇಶಿ ಪ್ರವಾಸಿಗಳ ಸೌಕರ್ಯಕ್ಕಾಗಿ ಕೆಲವು ಹೋಟಲುಗಳಿಗೆ ಇಷ್ಟಿಷ್ಟು ಅಂತ ಟಿಕೀಟುಗಳನ್ನು ಮೀಸಲಾಗಿರಿಸುತ್ತಾರೆ. ನಮ್ಮ ಹೋಟಲಿಗೂ ನಾಲ್ಕು ಟಿಕೆಟ್ಟುಗಳಿವೆ. ಈಗಲೇ ಫೋನ್ ಮಾಡಿ ವಿಚಾರಿಸುತ್ತೇನೆ."

ಎಂದು ಹೇಳಿ ಫೋನ್ ತೆಗೆದುಕೊಂಡು ಮಾತನಾಡಿದ. ನಂತರ ಮುಂದುವರಿಸಿದ "ಆರು ಸೀಟು ಬಾಲ್ಕನಿಯಲ್ಲಿದೆ. ನಿಮ್ಮೊಡನೆ ಯಾರನ್ನಾದರೂ ಸ್ನೇಹಿತರನ್ನು ಕರೆದುಕೊಂಡು ಹೋಗುವುದಾದರೆ ಹೇಳಿ, ಅಷ್ಟು ಸೀಟುಗಳನ್ನೂ ರಿಸರ್ವ್ ಮಾಡಿಸುತ್ತೇನೆ" ಎಂದ.

"ನಾನೂ ಬರ್ತೀನಿ, ನಾನೂ ಬರ್ತೀನಿ" ಅಂತ ನಾಲ್ಕಾರು ದನಿಗಳು ನನ್ನ ಹಿಂದೆ ಧ್ವನಿಗೈದವು. ಹಿಂತಿರುಗಿದೆ. ನಮ್ಮ ಪಟಾಲಂನವರಲ್ಲಿ ನಾಲ್ಕೈದು ಜನ ಬಂದು ನಿಂತಿದ್ದರು. ಅಲ್ಲಿ ಇಲ್ಲಿ ಅಡ್ಡಾಡಿಕೊಂಡು ಬರೋಣ ಅಂತ ಹೊರಟೆವು. ನಿನ್ನ ನೋಡಿ ಬಂದೆವು, ನಿನ್ನನ್ನೂ ಕರಕೊಂಡು ಹೋಗೋಣ ಅಂತ ಎಂದು ವಿವರಣೆ ಇತ್ತರು.

"ಆರು ಸೀಟು ಹೇಗೂ ಸಿಕ್ಕಿದೆ. ಬೇಗ ಊಟ ಮುಗಿಸಿಕೊಂಡು, ಹೋಗೋಣ" ಎಂದು ಅವರಿಗೆ ಹಾಗೂ ಮ್ಯಾನೇಜರಿಗೆ ಹೇಳಿದೆ. ಆತ ತಿರುಗಿ ಫೋನ್ ಮಾಡಿ ನಂತರ, "ಬೇಗಲೇ ಹೋಗಿ, ದಾರಿ ನಿಮಗೆ ಸರಿಯಾಗಿ ತಿಳಿಯದು. ಹಾಗಾಗಿ ಸ್ವಲ್ಪ ಹೊತ್ತಾಗಬಹುದು, ಥಿಯೇಟರಿಗೆ ಹೋಗುವುದಕ್ಕೆ, ನಿಮ್ಮ ಸೀಟುಗಳು ರಿಸರ್ವ್ ಆಗಿವೆ. ಈ ಕಾರ್ಡು ಕೊಟ್ಟರೆ, ಟಿಕೇಟ್ ಕೊಡುತ್ತಾರೆ" ಎಂದು ಹೇಳಿದ.

ಬೇಗ ಬೇಗ ಊಟದ ಶಾಸ್ತ್ರ ಮುಗಿಸಿದೆವು. ಹಾಳು ಮೂಳು ಎಲ್ಲಾ ತಂದು ಬಡಿಸಿದರು. ಬ್ರೆಡ್ಡು ನೀರು ಇರೋ ತನಕ ಏನು ಬಡಿಸಿದರೂ ಉಪವಾಸ ಇರಬೇಕಾಗಿರ

ಲಿಲ್ಲ. ನನ್ನ ಮುಂದಾಳುತನದಲ್ಲಿ ಎಲ್ಲರೂ ಹೊರಟೆವು. ಟ್ಯೂಬ್ ರೈಲ್ ಹಿಡಿದು, ಥಿಯೇಟರಿಗೆ ಹೋಗುವ ಹೊತ್ತಿಗೆ, ನಾಟಕ ಶುರುವಾಗಲು ಇನ್ನೂ ಒಂದು ತಾಸು ಇದೆ ಎಂದು ಗೊತ್ತಾಯಿತು. ಟ್ಯೂಬ್ ಸ್ಟೇಷನ್ನುಗಳಲ್ಲಿ ಪ್ರಯಾಣಿಕರಿಗೆ ಒದಗಿಸಿರುವ ಊರ ನಕ್ಷೆಗಳು ಅಷ್ಟು ಅಚ್ಚುಕಟ್ಟಾಗಿದ್ದು ಬೇಗ ಥಿಯೇಟರ್ ಸೇರುವ ಹಾಗೆ ಮಾಡಿತ್ತು.

ಡ್ರೂರಿಲೇನ್ ಥಿಯೇಟರಿನ ಟಿಕೆಟ್ ಗೂಡಿಗೆ ಹೋಗಿ, ಹೋಟಲ್ ಮ್ಯಾನೇಜರ್ ಕೊಟ್ಟ ಕಾರ್ಡನ್ನೂ ಕೊಟ್ಟು "ಆರು ಟಿಕೆಟ್‌ಗಳು ಬೇಕು" ಎಂದೆ "ಹನ್ನೆರಡು ಪೌಂಡ್" ಎಂದ, ಆತ. ಹನ್ನೆರಡು ಪೌಂಡು ತೆತ್ತೆ. ಟಿಕೆಟ್ ತೆಗೆದುಕೊಂಡು ಬಂದೆ. "ಒಬ್ಬೊಬ್ಬರೂ ಎರಡೆರಡು ಪೌಂಡು ಪೀಕಿ" ಎಂದೆ. "ಅಷ್ಟು ಭಾರಿ ಸೀಟಿಗೆ ಯಾಕೆ ಟಿಕೆಟ್ ಕೊಂಡೆ ? ಗ್ಯಾಲರಿ ಅಥವಾ ಚಾಪೆ ಸೀಟುಗಳ ಟಿಕೆಟ್ ಕೊಂಡಿದ್ದರಾಗಿತ್ತಲ್ಲ!" ಎಂದು ಜತೆಯಲ್ಲಿದ್ದವರು ಆಕ್ಷೇಪಿಸಿದರು. "ಎಲ ಮಾರಾಯ್ರಾ ! ನಾವು ಇಳಿದುಕೊಂಡಿದ್ದ ಹೋಟಲಿನವ ಸೀಟುಗಳನ್ನು ರಿಸರ್ವ್ ಮಾಡಿಸಿದ. ಇಲ್ಲಿ ಇವ ಇಷ್ಟು ತೆರು ಅಂದ, ತೆತ್ತೆ, ಇದ್ದ ಸೀಟು ಕೊಟ್ಟಾರೇ ಹೊರತು, ಕೇಳಿದ ಸೀಟು ಕೊಡುವ ಹಾಗಿಲ್ಲವಲ್ಲ. ಎಲ್ಲ ಸೀಟುಗಳನ್ನು ತಿಂಗಳಾನುಗಟ್ಟಲೆ ಮೊದಲೇ ಕಾದಿರಿಸಿಕೊಂಡಿರುತ್ತಾರಲ್ಲ" ಎಂದೆ. ನನ್ನ ಬೆನ್ನ ಹಿಂದೆ ಬಂದ ಐವರಲ್ಲಿ ಒಂದು ಹೆಣ್ಣು. ಅದಕ್ಕೂ ನಾಟಕ ನೋಡಬೇಕು ಅಂತ ಚಪಲ. ಯಾರಿಗೂ ಸಿಗದ ಟಿಕೆಟ್ ಸಿಗುತ್ತಲ್ಲ ಅಂತ ಹೆಮ್ಮೆ. ಯಾರಿಗೂ ಸಿಗದ ಟಿಕೆಟ್ ಸಿಕ್ಕಿತ್ತಲ್ಲ ಅಂತ ಬಂದುಬಿಟ್ಟಿತ್ತು. ಎರಡು ಪೌಂಡುಗಳನ್ನು ನನ್ನ ಕೈಲಿಡುತ್ತ "ಪೆಚ್ಚು ಪೆಚ್ಚಾಗಿ ಬಂದುಬಿಟ್ಟೆ ಇಷ್ಟು ಹಣ ಖರ್ಚು ಮಾಡುತ್ತಿದ್ದೇನೆ, ಅದಕ್ಕೆ ತಕ್ಕ ಹಾಗೆ ನಾಟಕವಾದರೂ ಇದ್ದರೆ ?" ಎಂದು ರಾಗ ಎಳೆಯಿತು. "ನೋಡವ್ವಾ ! ನ್ಯಾಯವಾಗಿ ಹೆಣ್ಣಿಗೆ ಗಂಡು ಟಿಕೆಟ್ ಕೊಂಡು ಕೊಡಬೇಕು. ನಮ್ಮೂರಿನಲ್ಲಿ ಆಗಿದ್ದರೆ ಹಾಗೆ ಮಾಡ್ತಾ ಇದ್ದೆ. ಇದು ಲಂಡನ್. ನನ್ನ ಹತ್ತಿರ ಇರುವ ಹಣ ಅತ್ಯಲ್ಪ. ಹಸಿವು ಬಾಯಾರಿಕೆಗಳಿಗೇ ಸಾಲದು. ಅಂದ ಮೇಲೆ ನೋಟ ಮಾಟಕ್ಕೆ ಎಲ್ಲಿಂದ ತರಲಿ. ತೆರೋಳೇನೋ ತೆತ್ತಿದ್ದಿ. ಹಬ್ಬದ ದಿವಸವೂ ಹಳೇ ಗಂಡನೇ ಅಂತ ನಾಟಕ ನೋಡಿದಮೇಲೆ ನನ್ನ ಬಯ್ಯಬೇಡ," ಎಂದು ಆ ಹೆಣ್ಣಿಗೆ ಕಠೋರವಾಗಿ ಉಪದೇಶ ಮಾಡಿದೆ.

ಎಲ್ಲರೂ ಥಿಯೇಟರಿನ ಒಳಕ್ಕೆ ಹೋದೆವು. ಸುಮಾರು ದೊಡ್ಡದಾದ ಥಿಯೇಟರು. ರಂಗಮಂಟಪವು ಭವ್ಯವಾಗಿ ಕಾಣಿಸುತ್ತಿತ್ತು. ಅದರ ಮುಂದೆ ಸಂಗೀತದವರ ತಂಡಕ್ಕೆ ಮೀಸಲಾಗಿದ್ದ ಕೊಟ್ಟಿಗೆ, ಅದರ ಮುಂದೆ ಸಾಲು ಸಾಲು ಕುರ್ಚಿಗಳು. ಎರಡು ಫರ್ಲಾಂಗ್ ಅಷ್ಟು ದೂರ ಇರಬಹುದು. ಅದರ ಮುಂದೆ ಎರಡು ಫರ್ಲಾಂಗ್ ದೂರದಷ್ಟು ಇತರ ತರಹ ಕುರ್ಚಿಗಳು. ಅಂದರೆ ರಂಗಮಂಟಪದಿಂದ ಅರ್ಧ ಮೈಲಷ್ಟು ದೂರ ಆಯಿತು. ಅದಾದಮೇಲೆ ಬಾಲ್ಕನಿ. ಆ ಬಾಲ್ಕನಿಗಳ ಹಿಂದೆ ಹಿಂದೆ ಇದ್ದ ಕೂಡುಕೋಣೆಯೇ ನಮ್ಮ ಸ್ಥಾನ. ನಮ್ಮ ಹಿಂದೆ ಥಿಯೇಟರಿನ ಹಿಂಬದಿ ಗೋಡೆ !

ನಾಲ್ವರಿಗೆ ಒಂದೊಂದು ಕೂಡುಕೋಣೆ. ನಮ್ಮ ಪಕ್ಕದ ಕೂಡುಕೋಣೆಯಲ್ಲಿ ಇಬ್ಬರು, ನಾಲ್ವರು ನಮಗೆ ಒಂದು, ಹೀಗೆ ವ್ಯವಸ್ಥೆ ಆಗಿತ್ತು. ನಾನಿದ್ದ ಕೂಡುಕೋಣೆ ಯಲ್ಲಿಯೇ ಹೆಣ್ಣು ಬಂದು ಕೂತಿತ್ತು. ನನ್ನ ಹಿಂದಿನ ಕುರ್ಚಿಯಲ್ಲೇ ಕೂತಿತ್ತು.

''ನೋಡಿದರೇನ್ರೋ ! ಎರಡು ಪೌಂಡು ಕೊಟ್ಟಿದ್ದಕ್ಕೆ ಇಲ್ಲಿ ಕೂರಿಸಿದ್ದಾರೆ. ಇದೇ ನಮ್ಮೂರಿನ ಚಾಪೆ ಟಿಕೆಟ್ಟು, ನಮ್ಮ ಮುಖ ನೋಡಿ ಹೋಟಲ ಮ್ಯಾನೇಜರು ಕಡೇ ಸೀಟುಗಳನ್ನೇ ಕೇಳಿದ್ದಾನೆ. ಆ ಹೋಟಲಿಗೆ ಹೋಗುವವರು ನಮ್ಮಂತಹ ಕುಚೇಲರೇ ಇರಬೇಕು. ಅದಕ್ಕೆ ತಕ್ಕ ಸೀಟುಗಳನ್ನೇ ರಿಸರ್ವ್ ಮಾಡಿದ್ದಾರೆ. ಹತ್ತು ಷಿಲಿಂಗ್ ಟಿಕೆಟ್ ಕೊಡಿ ಅಂತ ಕೇಳಿದ್ದರೆ ನಗೆಪಾಟಲ್ ಆಗ್ತಿತ್ತು.'' ಎಂದು ಸ್ವಲ್ಪ ಕೊಚ್ಚಿದೆ. ಅಷ್ಟು ಹೊತ್ತಿಗೆ ಸಂಗೀತದವರು ಶುರು ಮಾಡಿದರು, ತಮ್ಮ ಸಂಗೀತವನ್ನು,

ನಮ್ಮೂರಿನಲ್ಲಿ ನಾನು ಕೇಳಿರುವ ಜೀವಂತ ಬ್ಯಾಂಡ್ ಅಂದರೆ :- ಕೆಲವು ಜಾತಿಯವರು ಹೆಣ ಸಾಗಿಸುವಾಗ ಮುಂದೆ ಬ್ಯಾಂಡ್ ಬಾರಿಸಿಕೊಂಡು ಹೋಗುತ್ತಾರೆ ಅಂತಹ ಬ್ಯಾಂಡನ್ನು ಮಾತ್ರ. ಕೆಲವು ಸರ್ತಿ ಸೈನ್ಯದವರೂ ಬ್ಯಾಂಡ್ ಬಾರಿಸಿದ್ದನ್ನು ಕೇಳಿದ್ದೀನಿ. ಪಾಹಿಪದ್ಮ ಬಂಧು ನೇತ್ರ ಇತ್ಯಾದಿ. ಇವನ್ನು ಸಂಗೀತ ಅಂತ ಕರೆಯುವದಕ್ಕೆ ಯಾಕೋ ಮನಸ್ಸು ಬಾರದು.

ಆದರೆ ಆ ರಾತ್ರಿ ಡ್ರೂರಿಲೇನ್ ಥಿಯೇಟರಿನ ಬ್ಯಾಂಡ್ ಸುಶ್ರಾವ್ಯವಾಗಿತ್ತು. ಹೆಣ ಸಾಗಿಸುವ ಚಿಹ್ನೆಗಳೇನೂ ಇರಲಿಲ್ಲ. ಸೋಲ್ಜರುಗಳು ನಡೆದ ಹಾಗೂ ಇರಲಿಲ್ಲ.

ನದಿ ಹರಿದ ಹಾಗೆ. ಹಕ್ಕಿಗಳು ಚಿಲಿಪಿಲಿಗುಟ್ಟಿದ ಹಾಗೆ. ಹರಿಣಿಗಳು ಓಡಿದ ಹಾಗೆ. ಜಲಪಾತದ ಭೋರ್ಗರೆಯುವಿಕೆ, ಈ ರೀತಿ ದನಿತರಂಗಗಳು ಪಸರಿಸುತ್ತಿತ್ತು. ಕಿವಿಗೆ ಹಿತವಾಗಿತ್ತು.

ನನ್ನ ತಲೆ ಹಿಂದೆ ಯಾರೋ ಬಗ್ಗಿ ನೋಡಿದಂತಾಯಿತು. ತಲೆಯನ್ನು ಹಿಂದಕ್ಕೆ ಎತ್ತಿದೆ. ಯಾರದೋ ಗಲ್ಲಕ್ಕೆ ಬಡಿಯಿತು. ''ಸಾರಿ. ಸಾರಿ'' ಎಂದು ನಾನೇ ಅಂದೆ. ನನ್ನ ತಲೆಗೇ ಪೆಟ್ಟಾಗಿದ್ದುದು, ನಾನೇ 'ಸಾರಿ'ಯಾಗಬೇಕಲ್ಲವೇ ?''ಪರವಾಗಿಲ್ಲ, ಪರವಾಗಿಲ್ಲ'' ಎಂದಿತು ಬಡಿದ ಗಲ್ಲದ ಮೇಲಿದ್ದ ಬಾಯಿ, ಕೇಳಿದ ದನಿ. ಹಿಂತಿರುಗಿದೆ. ನಮ್ಮ ಜತೆ ಬಂದಿದ್ದ ಹೆಣ್ಣು.

ಎಂತದೋ 'ಗಂಧ' ಬಳಿದುಕೊಂಡಿತ್ತು ಹೆಣ್ಣು. ಹಾಡುತ್ತಲೇ ಇರುವಾಗ ಈ ಹೆಣ್ಣು, ಶವ ಪೂಜೇಲಿ ಕನ್ನಡಿ ಇಟ್ಟಹಾಗೆ, ಮಧ್ಯೆ ಬಾಯಿ ಹಾಕಿತ್ತು. ಸಿಗರೇಟ್ ಹೊಗೆ ಹಾಕಿ, ಆ 'ಗಂಧ'ವನ್ನು ಹುದುಗಿಸಿಟ್ಟೆ. ಆ ಮೇಲೆ ಸಾವಧಾನವಾಗಿ, ಮೆಲ್ಲಗೆ ಹೆಣ್ಣಿನ ತಲೆಗೂದಲಿಗೆ ''ನಾಟಕ ಶುರುವಾಗುವುದಕ್ಕೆ ಇನ್ನೂ 120 ನಿಮಿಷಗಳಿವೆ. ಬಂದಿದ್ದವರು ಬೇಜಾರು ಪಡದಿರಲಿ ಅಂತ ಪಾಶ್ಚಾತ್ಯ ತ್ಯಾಗರಾಜರು, ದೀಕ್ಷಿತರು, ದಾಸರು ಇವರುಗಳ ಸುಪ್ರಸಿದ್ಧ

ಹಾಡುಗಳನ್ನು ಬಾರಿಸುತ್ತಾರೆ'' ಎಂದು ಹೇಳಿದೆ. ಹೇಳಿದ ಮಾತಿಗಿಂತ ಹೇಳುವ ರೀತಿ ಆ ಹೆಣ್ಣಿನ ಗಂಟಲನ್ನು ಬಂಧಿಸಿತು. ನಾಟಕ ಸುರುವಾಗುವ ತನಕ ಆಕಿ ಬಾಯಿ ಬಿಡಲಿಲ್ಲ.

ನಾಟಕ ಶುರುವಾಯ್ತು. ಬರ್ನಾರ್ಡ್ ಷಾವಿನ ಪಿಗ್ಮೇಲಿಯನ್ ಕತೆಯ ನಾಟಕಾಂತರ. ಗ್ರಾಮ್ಯ ಭಾಷೆಯನ್ನು ಆಡುವ ಹಳ್ಳಿ ಹುಡುಗಿಯೊಂದನ್ನು ತರಪೇತು ಮಾಡಿ, ಪ್ರಯೋಗಕಾರನೊಬ್ಬ ಸುಸಂಸ್ಕೃತ ರೂಪಸ್ಥ ತರುಣಿಯನ್ನಾಗಿ ಪರಿವರ್ತಿಸುವ ಕತೆ. ಬೀದಿಯ ಮೂಲೆಯಲ್ಲಿ ಹೂವುಗಳನ್ನು ಮಾರುವ ಹುಡುಗಿ, ಅವಳಾಡುವ ಗ್ರಾಮ್ಯ ಭಾಷೆ. ಹಳ್ಳಿಯವರ ತರಹ ಚೆಲ್ಲು ಚೆಲ್ಲು ಚಕ್ಕಂದದ ಮಾತು. ಪ್ರಯೋಗಕಾರ ಸ್ನೇಹಿತನೊಂದಿಗೆ ಮಾತನಾಡುತ್ತ ಈ ಪ್ರಯೋಗಕ್ಕೆ ಕೈ ಹಾಕಿದುದು. ಹಳ್ಳಿ ಹುಡುಗಿಯ ಹಂತ ಹಂತದ ಪರಿವರ್ತನೆ. ಕಡೆಗೆ ಪ್ರಯೋಗಕಾರ ತಾನು ಸಾಧಿಸಿದ ಕಲಾಕೃತಿಯನ್ನು ತಲೆಕಾಲ್ ಅರಿಯದೆ ಮೋಹಿಸಿದ್ದು ಇತ್ಯಾದಿ, ಅನೇಕ ಅವಕಾಶಗಳಿತ್ತು, ಕತೆಯಲ್ಲಿ ; ನಟರು ತಮ್ಮ ಕೌಶಲವನ್ನು ತೋರ್ಪಡಿಸಲು.

ತರಕಾರಿ ಮಾರುವವರ ತರಹ ಮಾತನಾಡುತ್ತಿದ್ದ ಆ್ಯನ್ ರೋಜರ್ಸ್ ತರಪೇತು ಮುಂದುವರಿದು, ಸಿದ್ಧಿ ದೊರಕಿದಮೇಲೆ, ಎಂ.ಎಸ್.ತರಹ ನುಡಿದುದನ್ನು ಕಂಡಾಗ ''ಹೇಗಾದರೂ ಈ ವೈಯ್ಯಾರಿ ಈ ತರಹಾನೂ ಗದರ್ತಾಳೆ, ಆ ತರಹಾನೂ ನುಡೀತಾಳೆ, ಕಾಗೆ ತರಹ ಕರ್ ಅಂತಾಳೆ, ಕೋಗಿಲೆ ತರಹ ಕುಹ್ಹೂ ಅಂದು ಎದೇನ ಸೆಳೀತಾಳೆ'' ಅನ್ನಿಸಿತು.

ಗೀತನಾಟಕ ಅಂದಮೇಲೆ ಹಾಡುಗಳ ಹಿತ ಕೇಳಬೇಕೇ ? ಲಂಡನ್ನಿನ ರಂಗಮಂಟಪ. ಒಂದು ಕ್ಷಣ ರಸ್ತೆ ತುದಿಯಲ್ಲಿ ಹುಡುಗಿ ಹೂವು ಬೇಕೇ ಎಂದು ಕೇಳುತ್ತಿರುತ್ತಾಳೆ. ಮರುಕ್ಷಣದಲ್ಲೇ ರಂಗಮಂಟಪ ಸಿಂಧಗಟ್ಟದ ದೇವರ ತರಹ ಹಿಂದುಮುಂದಾಗಿ ಚಕ್ಕಂತ ತಿರುಗಿ ಹೂವಿನ ಮಾರುಕಟ್ಟೆಯ ದೃಶ್ಯ. ಹತ್ತಾರು ಹುಡುಗ ಹುಡುಗಿಯರು ನೃತ್ಯಮಾಡುತ್ತ, ಹಾಡುತ್ತ, ಹಗೂರಾಗಿ ಹೂವು ಮಾರುವ ದೃಶ್ಯ. ಪ್ರಯೋಗಕಾರನು ಪಾಠ ಹೇಳಿಕೊಡುವ ರೀತಿ. ಸ್ವಲ್ಪ ರೇಗಿದಾಗ ಅಂದವಾಗಿ ರಂಗದ ಪಕ್ಕದಲ್ಲಿ ಹಾಕಿದ್ದ ಅಟ್ಟಕ್ಕೇರಿ ಹಾಡುವುದು. ಕೋಪವಿಳಿದು, ಪ್ರೇಮ ಸೆಳೆದಾಗ ಇಳಿದು ಬರುವುದು. ಹಾಡುವ ಹಾಡಿನ ತಾಳಕ್ಕೆ ಸರಿಯಾಗಿ ಮೆಟ್ಟಿಲ ಮೇಲೆ ಹೆಜ್ಜೆಯಿಟ್ಟು ಇಳಿಯುವುದು. ಇವಕ್ಕೆಲ್ಲ ಅಣಿಯಾದ ದನಿಗೂಡಿಸುವ ಸಂಗೀತದ ಹಿನ್ನೆಲೆ.

ದಿಟವಾಗಲೂ ನೋಡುಕ್ಕೆರಡು ಕಣ್ಣು ಸಾಲದು. ಕೇಳುಕ್ಕೆರಡು ಕಿವಿ ಸಾಲದು. ಬಾಯಿ ಬಾಯಿ ಬಿಟ್ಟುಕೊಂಡು ನೋಡುತ್ತಿದ್ದಾಗ ಯಾವುದೋ ಲೋಕದಲ್ಲಿದ್ದೇವೆ. ಅದೇ ಸತ್ಯಲೋಕ ಅನ್ನಿಸಿತು.

ಆ ನಾಟಕ ನೋಡಿದಾಗ ಹೀಗೆಲ್ಲಾ ಅನ್ನಿಸಿತು ಅಂತೀರಾ ? ಇಲ್ಲ. ನಾಟಕ ನೋಡಿ ಹೋಟಲಿಗೆ ಹಿಂತಿರುಗಿದಾಗ, ನಿದ್ರೆ ಬರಲಿಲ್ಲ. ವರದಿ ಬರೆಯಲು ಕುಳಿತಾಗ ಹೀಗೆಲ್ಲಾ ಅನ್ನಿಸಿತು.

ನಾಟಕ ನೋಡುತ್ತಿದ್ದಾಗ, ನಾನು ಬಾಯಿ ಬಾಯಿ ಬಿಟ್ಟುಕೊಂಡು ನೋಡುತ್ತಿದ್ದಾಗ, ನನ್ನ ಹಿಂದೆ ಇತ್ತಲ್ಲ ಆ ಹೆಣ್ಣು ; ಅದೂ ಬಾಯಿ ಬಾಯಿ ಬಿಟ್ಟುಕೊಂಡಿತ್ತು. ಆದರೆ ಅದರ ಪಾಪಿ ನಾಲಿಗೆ ಬಾಯಿಯ ಹೊರಗೆ ಬಂದು ಬಡಬಡಿಸುತ್ತಿತ್ತು. ಯಾವಾಗ ರಂಗ ಮಂಟಪದಲ್ಲಿ ಸ್ವಾರಸ್ಯವಾದ ಸನ್ನಿವೇಶ, ಮನ ಸೆಳೆವ ಅಭಿನಯ ಕಾಣಬರುತ್ತಿತ್ತೋ, ಆ ರಸನಿಮಿಷದಲ್ಲೇ, ನನ್ನ ಹಿಂದಿನ ಹೆಣ್ಣಿನ ನಾಲಿಗೆಗೆ ತೀಟೆ ಹತ್ತುತ್ತಿತ್ತು ಆ ತೀಟೇನ ತೀರಿಸಿಕೊಳ್ಳುಕ್ಕೆ ಎದುರಿಗಿದ್ದ ನಾನೇ ಬಲಿ.

ಆ್ಯನ್‌ರೋಜರ್ಸ್ ಹೂವಿನ ಮಾರುಕಟ್ಟೆಯಲ್ಲಿ ತರುಣ ತರುಣಿಯರೊಂದಿಗೆ ಹಾಡುತ್ತಿದ್ದಾಳೆ, ಜನಪದ ಹಾಡಿನ ತರಹ.

ಬೆನ್ನ ಹಿಂದಿನ ಹೆಣ್ಣು "ಏನ್ಮಾಡ್ತಾ ಇದಾರೆ ಅವರೆಲ್ಲ ?" ಎಂದು ಕೇಳಿತು. "ಕುಣೀತಾ ಇದಾರೆ. ಕಾಣೆಸುಲ್ವೆ" ಎಂದು ತೀಟೆ ತೀರಿಸಿದೆ, ಬೇಗ.

ಸುಸಂಸ್ಕೃತವಾಗಿ ವ್ಯಾಕರಣಬದ್ಧವಾಗಿ, ಸ್ಪಷ್ಟವಾಗಿ, ಉಚ್ಚರಿಸುವ ಪಾಠಗಳನ್ನು ನಾಟಕದ ನಾಯಕಿಗೆ ಕಲಿಸುವಾಗ, ಪ್ರೇಕ್ಷಕರಾಗಿದ್ದ ನಾವೂ ಕಲಿಯಬಹುದಾಗಿತ್ತು. ಅಷ್ಟು ಚೆನ್ನಾಗಿತ್ತು. ಅರ್ಧ ಪಾಠ ಆಗಿದೆ ನಾಯಕಿ ಕಷ್ಟಪಟ್ಟು ಸರಿಯಾಗಿ ಉಚ್ಚರಿಸುತ್ತಿದ್ದಾಳೆ.

ಬೆನ್ನ ಹಿಂದಿನ ಹೆಣ್ಣು "ಅವರಿಬ್ಬರೂ ಏನು ಮಾತಾಡ್ತಾ ಇದಾರೆ ? ಒಂದು ಮಾತೂ ಅರ್ಥವಾಗುಲ್ಲ. ಲೊವ್ ಮಾತಾಡ್ತಿದಾರಾ ?" ಎಂದು ಅಸೂಯೆಯಿಂದ ಕೇಳಿತು.

"ಹೌದು ಹೌದು ಗಟ್ಟಿಯಾಗಿ ಕೇಳಬೇಡಿ. ಜನ ನೋಡಿ ಅಪಾರ್ಥ ಮಾಡಿಕೋತಾರೆ"- ಎಂದು ಎಚ್ಚರಿಕೆ ಕೊಟ್ಟೆ. ಹಾಗಾದರೂ ತೆಪ್ಪಗಿರುತ್ತೇನೋ ಹೆಣ್ಣು ಅಂತ.

"ನಿನ್ನ ಕೈ ಹಿಡೀಬೇಕು. ನನ್ನ ಹೃದಯದ ರಾಣಿ ನೀ ನನ್ನ ಮನೆಯ ಭಾಗ್ಯ ಲಕ್ಷ್ಮಿಯಾಗಬೇಕು" ಎಂದು ನಾಯಕ ಬೇಡಿಕೊಳ್ಳುತ್ತಿದ್ದಾನೆ. ಸುಮಶರನು ಬಾರಿಸಿದ ಪೆಟ್ಟಿಗೋ ಏನೋ ತನ್ನ ಎದೆಯನ್ನು ಅದುಮಿ ಹಿಡಿದುಕೊಂಡಿದ್ದಾನೆ. ಅಭಿನಯವೋ ಅಥವಾ ದಿಟವಾಗಲೂ ಈ ನಟ ನಟಿ !? ಅಂತ ಅನುಮಾನ ಬರುವ ಹಾಗಿದೆ.

ಬೆನ್ನ ಹಿಂದಿನ ಹೆಣ್ಣು "ಆ ಹುಡುಗಿ ಏನಂತಿದ್ದಾಳೆ, ಹ್ಞೂ ಅಂದಳಾ ಒಲ್ಲೆ ಅಂದಳಾ" ಎಂದು ನನ್ನತ್ತ ಬಾಗಿ ಕೇಳಿತು.

"ಎಷ್ಟು ಒಡವೆ ಇಡ್ತಿ ; ಎಂತಹ ಸೀರೆ ಕೊಂಡು ಕೊಡ್ತಿ ಅಂತ ಕೇಳ್ತಾ ಇರಬೇಕು" ಎಂದೆ.

ಶ್ರೀಮಂತ ಸತ್ಕಾರ ಕೂಟದಲ್ಲಿ ಆತಿಥೇಯಳಾಗಿದ್ದ ನಾಯಕಿ ಬಲು ಇಂಪಾಗಿ ಅತಿಥಿ ದಂಪತಿಗಳನ್ನು ಸ್ವಾಗತಿಸುತ್ತಿದ್ದಾಳೆ. ಕಿಲಕಿಲವಾಣಿ, ಹಗುರವಾದ ಹಾಸ್ಯ, ಬೆಳದಿಂಗಳಂತಹ ನಗೆ.

ಬೆನ್ನ ಹಿಂದಿನ ಹೆಣ್ಣು ''ಯಾಕೆ ಎಲ್ಲಾ ನಗ್ತಾ ಇದಾರೆ, ಅವಳೇನಂದಳು. ಜೋಕ್ ಏನು'' ಎಂದಿತು. ತೆಪ್ಪಗಿದ್ದೆ. ಬೆನ್ನನ್ನು ತಿವಿದು ಹೇಳಿತು.

ಎದ್ದು ಒದ್ದುಬಿಡೋಣವೋ ಎನ್ನಿಸಿತು. ಹೆಣ್ಣನ್ನು ಒದೆಯಬಾರದು.

ಹೆಣ್ಣು ಕಲ್ಲಾಗಿದ್ದರೆ, ನಾನು ರಾಮ ಆಗಿದ್ದರೆ ಒದೆಯಬಹುದು. ಮಿಕ್ಕ ಸಂದರ್ಭ ಗಳಲ್ಲಿ ಅದು ಕೂಡದು. ಏನಾರ ಮಾಡಿ ಈಕೆ ಬಾಯಿ ಮುಚ್ಚಿಸಬೇಕು.

''ಬಂದಿದ್ದ ಅತಿಥಿ ದಂಪತಿಗಳ ಗಂಡನ್ನು ಸ್ವಾಗತಿಸುತ್ತಾ, ಅವನ ಹೆಂಡತಿ ಕಡೆ ಕೈ ಮಾಡಿ ಈ ಪ್ರಾರಬ್ಧಾನ ಯಾಕೆ ಕಟ್ಟಿಕೊಂಡು ಬಂದೆ'' ಎಂದು ಕೇಳಿದಳು. ''ಅದಕ್ಕೇ ನಗ್ತಾ ಇದಾರೆ'' ಎಂದು ಪಿಸುಮಾತಿನಲ್ಲಿ ಹೇಳಿದೆ.

ಆ ಹೆಣ್ಣಿಗೂ ಅನುಮಾನ ಬಂದಿರಬೇಕು. ನಾನು ಸುಳ್ಳು ಹೇಳ್ತಾ ಇದೀನಿ ಅಂತ. ಸ್ವಲ್ಪ ಹೊತ್ತು ಸುಮ್ಮಗಿತ್ತು. ನಾಟಕ ಮುಗಿಯುತ್ತಾ ಬಂತು.

ಬೆನ್ನ ಹಿಂದಿನ ಹೆಣ್ಣಿಗೆ ತೀಟೆ ತಡೆಯಕ್ಕಾಗಲಿಲ್ಲವೇನೋ ? ''ಅದರಲ್ಲಿ ನಗೋ ಅಂತಹ ಜೋಕ್ ಏನಿದೆ'' ಎಂದು ಕೇಳಿತು.

ನಾಟಕ ಮುಗಿದಿತ್ತು. ''ನಾಯಕಿ ಅತಿಥಿ ಗಂಡನ್ನು ಕೇಳಲಿಲ್ಲ ಹಾಗಂತ ನನ್ನ ಕೇಳಿದಳು.'' ಎಂದೆ, ಮಾನ ಮರ್ಯಾದೆ ಬಿಟ್ಟು.

ಹೆಣ್ಣಿಗೆ ಕೋಪ ಬಂತು. ಹೋಟಲಿಗೆ ಹಿಂತಿರುಗುವ ತನಕ ಮಾತಾಡಲಿಲ್ಲ. ನನಗೇನೂ ದುಃಖವಿಲ್ಲ.

ಹೆಣ್ಣಿಗೆ 62ರ ಪ್ರಾಯ.

# ಮೋಜಿನ ಪ್ಯಾರಿಸ್-ಮೂರು ಹಗಲು

ಹುಡುಗನಾಗಿದ್ದಾಗ ನಮ್ಮೂರಿನ ಪ್ಯಾರಿಸ್ ಹೇರ್ ಕಟಿಂಗ್ ಸೆಲೂನಿಗೆ ಸೋದರಮಾವ ಒಮ್ಮೆ ಕರೆದುಕೊಂಡು ಹೋಗಿದ್ದರು. 10-12 ವರ್ಷದ ಪ್ರಾಯ. ಸೆಲೂನಿಗೆ ಮೊದಲ ಬಾರಿ ಕಾಲಿರಿಸಿದ್ದು ಆಗಲೇ. ಅದಕ್ಕೆ ಮುಂಚೆ ಮನೆ ವರಾಂಡದಲ್ಲಿ ಕ್ಷೌರಿಕನ ಹತ್ತಿರ ತಲೆ ಮಾಡಿಸಿಕೊಂಡು ಮನೆಯನ್ನು ಸುತ್ತಿ ಹಿತ್ತಲಿಗೆ ಹೋಗಿ ಅಲ್ಲಿ ಭಾವಿ ಕಟ್ಟೆಯ ಬಳಿ ಯಾರಾದರೂ ಸಚೇಲ ಸ್ನಾನ ಮಾಡಿಸಿದ ಮೇಲೆ, ಮನೆ ಒಳಕ್ಕೆ ಹೋಗುತ್ತಿದ್ದೆ. ಆದಕಾರಣ ಹೇರ್ ಕಟಿಂಗ್ ಸೆಲೂನಿಗೆ ಮಡಿ ಮೈಲಿಗೆ ಇಲ್ಲದೆ ಹೋಗುವುದೇ ಒಂದು ಸಾಧನೆ ಎನಿಸಿತ್ತು. ಆ ಸೆಲೂನಿನಲ್ಲಿ ಅಪ್ಸರೆ ಸ್ತ್ರೀಯರ ಫೋಟೋಗಳಿದ್ದುವು. ಮನುಷ್ಯನು ಸಸ್ತನಿ ಪ್ರಾಣಿ ಎಂದು ನೆನಪು ಕೊಡುತ್ತಿದ್ದುವು, ಆ ಫೋಟೋಗಳು. ಆಗಿನಿಂದ ನನ್ನ ಮನಸ್ಸಿನಲ್ಲಿ ಪ್ಯಾರಿಸ್ ಅಂದರೆ ಅರೆನಗ್ನ ಸ್ತ್ರೀಯರು ಮೋಜು ಮಾಡುವ ಸ್ವರ್ಗ ಎಂದು ಒಂದು ರೀತಿಯ ಊಹೆ.

ನಾಲ್ವತ್ತು ವರ್ಷಗಳಾದ ನಂತರ ಪ್ಯಾರಿಸ್ಸಿನ ವಿಮಾನ ನಿಲ್ದಾಣದಲ್ಲಿ ಇಳಿದಾಗ, ಹಳೆಯ ನೆನಪೇ ಉಕ್ಕಿ ಉಕ್ಕಿ ಬರುತ್ತಿತ್ತು. ಇಳಿ ವಯಸ್ಸಿನಲ್ಲಿ ಇಲ್ಲಿಗೆ ಏಕೆ ಬಂದೆ ಎಂದು ಒಮ್ಮೆ ಅನ್ನಿಸಿತು. ತುಂಬು ಪ್ರಾಯದಲ್ಲಿ ಯಾವ ಹಳ್ಳಿ ಕೇರಿಯಲ್ಲಿದ್ದರೂ ಜತೆ ಇದ್ದರೆ ಅದೇ ಪ್ಯಾರಿಸ್ಸಿನ ತರಹ ಇರುತ್ತೆ. ಇಳಿವಯಸ್ಸಾದಮೇಲೆ ದಿಟವಾದ ಪ್ಯಾರಿಸ್ಸಿಗೆ ಹೋಗಬೇಕಾಗು ವುದು, ಜೀವನದ ಧರ್ಮ, ಎಂದು ಆಮೇಲೆ ತೋಚಿತು. ಅಂತೂ ಬಂದಿದ್ದಾಯಿತಲ್ಲ. ಮೂರು ಹಗಲು ಮೂರು ರಾತ್ರಿ ನೋಡೇ ಬಿಡುವ, ಕಣ್ಣಲ್ಲಿ ಕಣ್ಣಿಟ್ಟುಕೊಂಡು ಕಂಡೇ ಬಿಡುವ ಎಂದು ನಿರ್ಧರಿಸಿದೆ.

ಸುಮಾರು ಹನ್ನೊಂದು ಗಂಟೆ ಬೆಳಿಗ್ಗೆ, ವಿಮಾನ ನಿಲ್ದಾಣದಲ್ಲಿ ಇಳಿದಾಗ. ಹನ್ನೊಂದುವರೆಯ ಹೊತ್ತಿಗೆ ಬಸ್ ಹತ್ತಿ ಊರೊಳಕ್ಕೆ ಹೊರಟೆವು.

ವಿಮಾನ ನಿಲ್ದಾಣದಿಂದ ಊರೊಳಕ್ಕೆ ಹೋಗಬೇಕಾದರೆ ಯಥಾಪ್ರಕಾರ 10-15 ಮೈಲು ಬಸ್ ಪ್ರಯಾಣ.

ಊರೊಳಕ್ಕೆ ಹೋಗುವ ಮೊದಲು ಮೂರು ನಾಲ್ಕು ಸಣ್ಣಪುಟ್ಟ ಹಳ್ಳಿಗಳು ದಾರಿಯ ಪಕ್ಕದಲ್ಲಿ ಸಿಕ್ಕವು. ಹೇರ್ ಕಟಿಂಗ್ ಸೆಲೂನ್ ಚಿತ್ರಗಳ ತರಹ ಏನೊಂದೂ ಕಾಣಿಸಲಿಲ್ಲ. ಆದರೆ ಪ್ರತಿ ಹಳ್ಳಿಯಲ್ಲೂ ರಸ್ತೆಯ ಅಂಚಿನಲ್ಲಿ, ತಾವೇ ಚಿತ್ರಿಸಿದ ವರ್ಣಚಿತ್ರಗಳನ್ನೂ ಕಲಾವಿದರು ಮಾರಾಟಕ್ಕೆ ಇರಿಸಿದ್ದರು. ಫ್ರೆಂಚ್ ನಾಡು ಕಲಾವಿದರ ಬೀಡು ಎಂದು ಹೆಸರು ಬರುವುದಕ್ಕೆ ಇದೂ ಕಾರಣ ಎನಿಸಿತು. ಹಳ್ಳಿಹಳ್ಳಿಗಳಲ್ಲೂ ಮಾರಾಟಕ್ಕೆ ವರ್ಣಚಿತ್ರಗಳ ನ್ನಿಟ್ಟಿದ್ದರೆ ಅದನ್ನು ಕೊಳ್ಳುವವರು ಇರಲೇಬೇಕಲ್ಲ ! ಅದೂ ಒಂದು ಲಾಭದಾಯಕ ಉದ್ಯಮವೇ ಆಗಿರಬೇಕಲ್ಲ ನಮ್ಮೂರಿನ ಕಲಾವಿದನ ಹಾಗೆ ಸಂತಸದಾಯಕ ಚಿತ್ರಗಳನ್ನು ಬಿಡಿಸಿ, ನಂತರ ಹೊಟ್ಟೆಪಾಡಿಗಾಗಿ ಅದನ್ನು ಮಾರಲು ಹೋದಾಗ, ಆತ ಪಡುವ ಕಷ್ಟ ಸಂಕಟ, ಕಡೆಗೆ ಹೋದಷ್ಟು ಬೆಲೆಗೆ ಅದನ್ನು ಮಾರಿ ಎರಡು ದಿನ ಹೊಟ್ಟೆ ಹೊರೆದುಕೊಳ್ಳುವ ಪರಿಸ್ಥಿತಿ ಇಲ್ಲಿಲ್ಲವಲ್ಲ! ಅನ್ನಿಸಿತು.

ಹೊಟೇಲ್ ನಾರ್ಮಂಡಿಯಲ್ಲಿ ನಾವು ಇಳಿದುಕೊಂಡಿದ್ದು. ಜಗತ್ ಪ್ರಸಿದ್ಧ ಲೂವ್ರೆ ಮ್ಯೂಸಿಯಂಗೆ ಅತಿ ಹತ್ತಿರದಲ್ಲಿತ್ತು ಆ ಹೋಟಲ್. ಅಲ್ಲಿದ್ದ ಸಿಬ್ಬಂದಿಯೂ ಅಲ್ಪಸ್ವಲ್ಪ ಇಂಗ್ಲೀಷ್ ಮಾತನಾಡುತ್ತಿದ್ದರು. ಸೇಲಂ ಕಡೆಯವರು ಕನ್ನಡಕ್ಕೆ ತಮಿಳು ಛಾಯೆ ಇಟ್ಟು ಮಾತನಾಡುಲ್ಲವೇ? ಆ ತೆರನಾದ ಇಂಗ್ಲೀಷ್. ಆದರೂ ಪರಸ್ಪರ ಅರ್ಥ ಮಾಡಿಕೊಳ್ಳುವುದು ಸಂಜ್ಞೆಗಳಿಲ್ಲದೇ ಸಾಧ್ಯವಾಗಿತ್ತು.

ಊರಿಂದ ಹೊರಟಾಗ ಪ್ಯಾರಿಸ್ಸಿನಲ್ಲಿ ಬಲು ಮುದ್ದಾದ ರೇಷ್ಮೆ ಸೀರೆಗಳು ಸಿಗುತ್ತವೆ. ಇಂತಹ ಕಡೆ ಇಂತಹ ಅಂಗಡಿಯಲ್ಲಿ ವಿಚಾರಿಸಿ ಸಿಗುತ್ತೆ ಎಂದು ಹೇಳಿದ್ದರು. ಪ್ಯಾರಿಸ್ಸಿನಲ್ಲಿ ಹಗಲು ಕಾಲ ಕಳೆಯುವುದು ಹೇಗೆ ? ಮ್ಯೂಸಿಯಂಗಳನ್ನು ನೋಡುವುದು. ಅವುಗಳಲ್ಲಿ ಒಂದು ಗಂಟೆಯಿಂದ ಒಂದು ವರ್ಷದ ಕಾಲ ಕಳೆಯಬಹುದು. ಮೂರು ದಿನಗಳಲ್ಲಿ ಏನು ತಾನೆ ಸಾಧ್ಯ ? ಒಂದೇ ಗಂಟೆ ಸಾಕು ಎಂದುಕೊಂಡೆ. ನಮ್ಮಲ್ಲಿ ಬೇಲೂರು, ಹಳೇಬೀಡು, ಸೋಮನಾಥಪುರ ಇದ್ದ ಹಾಗೆ ಪ್ಯಾರಿಸ್‌ನಲ್ಲಿ ಕೂಡ ಪುರಾತನ ದೇಗುಲಗಳಿವೆ. ಅವನ್ನೆಲ್ಲಾ ಒಂದು ಬೆಳಿಗ್ಗೆ ಸುತ್ತುಹಾಕಿ ಬಂದರಾಯಿತು. ಲೋಕಪ್ರಸಿದ್ಧವಾದ ಸ್ವತಂತ್ರ ಕಲಾವಿದರು ಅತಿ ಸ್ವತಂತ್ರ ಜೀವನ ನಡೆಸುತ್ತಾ ಕಲಾರಾಧನೆಯನ್ನು ರೇಗಿದಾಗ ಮಾಡುವ ಮೌಂಟ್ ಮಾರ್ಟರ್‌ನ್ನು ಒಂದು ಹಗಲು ಮುಗಿಸಿದರಾಯಿತು. ಹಗಲಿನ ಮಿಕ್ಕ ಹೊತ್ತನ್ನೆಲ್ಲಾ ಸೀರೆ ಅಂಗಡಿ ಹುಡುಕುವುದರಲ್ಲಿ, ಸೀರೆ ಕೊಳ್ಳುವುದರಲ್ಲಿ ಕಳೆಯಬಹುದು ಎಂದು ಅಂದಾಜು ಹಾಕಿದೆ.

ಯೋಜನೆಯ ಪ್ರಕಾರ ಕಾರ್ಯೋನ್ಮುಖನಾದೆ. ಮ್ಯೂಸಿಯಂಗಳು, ದೇಗುಲಗಳು ಮೌಂಟ್ ಮಾರ್ಟರ್ ಎಲ್ಲಾ ಮುಗಿಯಿತು. ಸೀರೆ ಅಂಗಡಿ ಹುಡುಕುವುದಕ್ಕೆ ಹೊರಟೆ. ಆ

ಅಂಗಡಿಯ ವಿಳಾಸವನ್ನು ಹಾದಿಯಲ್ಲಿ ಸಿಕ್ಕವರಿಗೆ ತೋರಿಸುವುದು, ಅವರು ಸನ್ನೆ ಮಾಡಿ ತೋರಿದ ದಾರಿ ಹಿಡಿಯುವುದು, ಇದೇ ಕಾರ್ಯಕ್ರಮ. ಮೂರು ಜನ ಹಾದಿಯಲ್ಲಿ ಮೂರು ತರಹ ಸೂಚನೆ ಕೊಟ್ಟರು. ನಾಲ್ಕನೆಯವ ಅಂಗೈಯಲ್ಲಿ ಯಾವುದೋ ಚಿತ್ರವನ್ನು ಮುಚ್ಚಿಟ್ಟುಕೊಂಡು ''ಪಿಸ್ಟ್'' ಅಂತ ಸಣ್ಣ ಸಿಳ್ಳೆ ಹಾಕಿದ. ಅರವತ್ತರ ಪ್ರಾಯದ ಧಡಿಯ. ಏನಯ್ಯಾ ಎಂದು ಹುಬ್ಬೆತ್ತಿ ಅವನತ್ತ ಹೋದೆ. ಇಂಗ್ಲೀಷ್ ಬರಬಹುದು, ದಾರಿ ತೋರಿಸಾನು ಅಂತ. ಅವ ಅಂಗೈಯಲ್ಲಿದ್ದ, ಮುಂಗೈಯ್ಯಲ್ಲಿ ಮುಚ್ಚಿದ್ದ ಫೋಟೋ ಒಂದನ್ನು ಅರೆ ತೋರಿಸಿದ. ಪುರಾತನ ದೇವಸ್ಥಾನಗಳ ತೇರುಗಳ ಮೇಲೆ, ದೃಷ್ಟಿ ಪರಿಹಾರಾರ್ಥವಾಗಿ ಕೆಲವು ಜತೆ ವಿಗ್ರಹಗಳನ್ನು ಕೆತ್ತಿರುವುದಿಲ್ಲವೇ ? ಅಂತಹ ಚಿತ್ರಗಳು. ಐದು ಫ್ರಾಂಕ್ ಎಂದು ಐದು ಬೆರಳುಗಳನ್ನು ತೋರಿಸಿದ. ''ಪಿಸ್ಟ್'' ಅಂತ ನಾನೂ ಸಿಳ್ಳೆ ಹೊಡೆದು ನಿನಗೆ ಪಂಗನಾಮ ಎಂದು ಹೇಳಿ ಷರಾಯಿ ಜೇಬಿನಲ್ಲಿ ಕೈ ಹಾಕಿಕೊಂಡು ಮುಲಾಜಿಲ್ಲದೆ ಮುಂದೆ ಸಾಗಿದೆ.

ಕಡೆಗೂ ಸೀರೆ ಅಂಗಡಿ ಸಿಕ್ಕಿತು. ಮಹಡಿಯ ಮೇಲಿತ್ತು. ಅಲ್ಲಿದ್ದ ಮೂವರು ಹೆಣ್ಣು ಮಕ್ಕಳಿಗೂ ಇಂಗ್ಲೀಷ್ ಬರುತ್ತಿತ್ತು. ಅಂಗಡಿಯ ಮಾಲೀಕ ಭಾರತದವ. ಅಂದರೆ ಅವನ ತಾತನ ಕಾಲಕ್ಕೆ ಪ್ಯಾರಿಸ್ಸಿಗೆ ವ್ಯಾಪಾರಕ್ಕೆ ಬಂದು ಅಲ್ಲೇ ನೆಲೆಸಿದ ಭಾರತೀಯ ಮನೆತನ ಅವನದು. ಆತನೂ ಬಲು ಒಲುಮೆಯಿಂದ ನನ್ನ ಹತ್ತಿರ ಇದ್ದ ಹಣವನ್ನೆಲ್ಲಾ ಸೀರೆಗಳ ಮೇಲೆ ವಿನಿಯೋಗಿಸುವಂತೆ ಮಹಾ ಪ್ರಯತ್ನ ಮಾಡಿ, ಯಶಸ್ಸು ಗಳಿಸಿದ. ಅಂಗಡಿ ಸಿಬ್ಬಂದಿಯ ಆ ಮೂರೂ ಫ್ರೆಂಚ್ ಮಹಿಳೆಯರು, 40, 30. 20ರ ಪ್ರಾಯದವರು. ಒಬ್ಬಾಕೆಯಾದರೂ ಪ್ಯಾರಿಸ್ ಹೇರ್ ಕಟಿಂಗ್ ಸೆಲೂನಿನ ಚಿತ್ರಗಳಂತಿಲ್ಲ. ಹದಿನಾರಾಣೆ ವೈದಿಕ ಬ್ರಾಹ್ಮಣ ಮನೆಯ, ಹೂ ವೀಳ್ಯಕ್ಕೆ ಮಡಿಯಲ್ಲಿ ಹೊರಟ ಮುತ್ತೈದೆಯರಂತೆ ಕಾಣಿಸಿದರು. ಯಾರಿಗೆ ಸೀರೆ, ಅವರ ವಯಸ್ಸೆಷ್ಟು, ಅವರ ಬೆಳವಣಿಗೆ ಹೇಗೆ, ಬಣ್ಣ ಎಂತು ಎಂದೆಲ್ಲಾ ಸೌಜನ್ಯದಿಂದ ಕೇಳಿ ಅದಕ್ಕೆ ಸರಿಯಾಗಿ ಸೀರೆಗಳನ್ನು ಚುನಾಯಿಸಿ, ಕೈಲಿಟ್ಟರು.

ಯಾವ ದೇಶಕ್ಕೆ ಹೋಗಲಿ ಭಾರತೀಯ ಉಡುಪನ್ನು ಬಿಡಬಾರದು ಎಂದು ನನ್ನ ಅಭಿಮತ. ಮುಚ್ಚಿದ್ದ ಕಾಲರಿನ ಕಪ್ಪು ಅಂಗಿ, ಬಿಳಿ ಥಳುಕಿನ ಷರಾಯಿ ನಮ್ಮ ಈ ಉಡುಪೇ ಶ್ರೇಷ್ಠ ಅಂತ. ಈ ಏರ್ಪಾಡಿನಿಂದ ಒಂದು ಪ್ರಯೋಜನ. ದಿನಾಲೂ ಸ್ವಚ್ಛ ಷರ್ಟ್ ಹಾಕಬೇಕಿಲ್ಲ. ತುದಾ ಷರ್ಟು ಹಾಕಲೇಬೇಕು ಎಂದೂ ಇಲ್ಲ. ಕಾಲರ್ ನೆಕ್ ಟೈ ಇವುಗಳ ಗಲಭೆ ಇಲ್ಲ. ಪರಊರಿನವರಿಗೂ ನಮ್ಮನ್ನು ಕಂಡರೆ, ಅವರನ್ನು ಅನುಕರಿಸಲಿಲ್ಲ ಎಂದು ಕಂಡರೆ, ಅವರಿಗೂ ಮರ್ಯಾದೆ ತೋರಿಸೋಣ ಎಂದೆನಿಸುತ್ತದೆ. ಆದುದರಿಂದ ಕರಿ ಮುಚ್ಚಿದ ಅಂಗಿ, ಬಿಳಿ ಷರಾಯಿ ಧರಿಸಿ ಅಂಗಡಿಗೆ ಹೋಗಿದ್ದೆ. ಕೊಂಡ ಸೀರೆಗಳ ಪೆಟ್ಟಿಗೆಯನ್ನು ಕೈಯಲ್ಲಿ ಹಿಡಿದಿದ್ದೆ.

ಅಂಗಡಿಯಲ್ಲಿ ಗುಜು ಗುಜು ಪ್ರಾರಂಭವಾಯಿತು. ಅಂಗಡಿಯ ಮಾಲೀಕ ಸರ ಸರ ಎಂದು ಅಡ್ಡಾಡಲಾರಂಭಿಸಿದ. ಅಂಗಡಿಯ ಒಳಕ್ಕೆ ಭಾರತೀಯನೊಬ್ಬ ಫ್ರೆಂಚ್

ಮಹಿಳೆಯ ಜತೆಯಲ್ಲಿ ಬಂದಿದ್ದ. ಮಹರಾಜಾ, ಮಹರಾಜಾ ಎಂದು ಅಂಗಡಿ ಸಿಬ್ಬಂದಿ ಗುಸು ಗುಸು ಮಾಡಿತು. ಬಂದಿದ್ದ ಮಹರಾಜಾ ನನ್ನನ್ನೇ ನೋಡಿದ. ಹತ್ತಿರ ಬಂದು, ''ಯಾವಾಗ ಪ್ಯಾರಿಸ್ಸಿಗೆ ಬಂದಿರಿ'' ಎಂದು ಕೇಳಿದ. ಅವನ ಪರಿಚಯ ನನಗಿರಲಿಲ್ಲ. ಕುದುರೆ ಜೂಜಿನಲ್ಲಿ ಪೆಚ್ಚುಮುಖ ಹಾಕಿಕೊಂಡು ಹುಚ್ಚು ನಾಯಿಗಳ ತರಹ ಅತ್ತ ಇತ್ತ ಓಡಾಡುತ್ತಾ ಕಾಲ ಕಳೆಯುವ, ಸಣ್ಣ ಪುಟ್ಟ ಮಾಜಿ ಮಹಾರಾಜರ ತರಹವೇ ಇವನ ಮುಖವು ಕಾಣಿಸುತ್ತಿತ್ತು. ನನಗೆ ಯಾವ ಮಹಾರಾಜರ ಪರಿಚಯವೂ ಇಲ್ಲ. ಇಲ್ಲವಲ್ಲಾ ಅಂತ ದುಃಖವೂ ಇಲ್ಲ. ಹಾಗಿರುವಾಗ್ಗ ಇವ ಎಲ್ಲಿ ಗಂಟು ಬಿದ್ದ. ಇನ್ನೆಲ್ಲಿ ಸಾಲ ಕೇಳ್ತಾನೋ ? ಎಂದು ಸ್ವಲ್ಪ ಸಂಶಯವೂ ಬಂದಿತು. ಅವನೇ ಅಂದ ''ನೀವು ಕೊಲಂಕಾ ಅಲ್ಲವಾ'' ಅಂದ. ಅಲ್ಲ ಅಂದೆ. ''ನಾನು ಬರಿ ಲಂಕಾದಹನ ಮಾಡಿದವ ಹೆಸರು ಹನುಮಂತರಾಯ ಕೆಲಸ ಅಪರ ಕರ್ಮ'' ಎಂದೆ.

''ಹಾಗೆಯೇ ? ಕೋಲಂಕಾ ಅಂತ ಅಂದುಕೊಂಡೆ. ಅವರ ಹಾಗೆಯೇ ಇದ್ದೀರಿ.'' ಎಂದ. ಮುಂದು ನಡೆದು ಹೊರಟು ಹೋದ.

ಅಂಗಡಿಯ ಮಾಲೀಕ, ಅಂಗಡಿಯ ಸಿಬ್ಬಂದಿಯ ಮೂರೂ ಹೆಣ್ಣು ಮಕ್ಕಳು ನನಗೆ ಜೋತು ಬಿದ್ದರು. ''ನಾನೂ ಒಬ್ಬ ಮಹರಾಜಾ ; ಬೂಟಾಟಿಕೆ ಮಾಡುತ್ತ ಕೇವಲ ನೂರು ಫ್ರಾಂಕ್‌ಗಳ ವ್ಯಾಪಾರ ಮಾಡಿದ್ದೀನಿ. ನ್ಯಾಯವಾಗಿ ಲಕ್ಷಾಂತರ ತೆತ್ತು ಆ ಹೆಣ್ಣು ಮಕ್ಕಳಿಗೂ ಕೈ ತುಂಬ ಬಕ್ಷೀಷ್ ಕೊಡಬೇಕಾಗಿತ್ತು'' ಎಂದು ಅವರ ಮನಸ್ಸಿನಲ್ಲಿ ಅನ್ನಿಸಿತೇನೋ. ಲಗ್ಗೆ ಹಾಕಿದರು ನನ್ನ ಮೇಲೆ.

ಅರ್ಧಗಂಟೆ ಕೂತು, ಅಂಗಿ ಬಿಚ್ಚಿ, ಷರಟು ತೆಗೆದು ಜನಿವಾರ ತೋರಿಸಿ, ಅದರ ಬ್ರಹ್ಮ ಗಂಟು ಹಿಡಿದು ಪ್ರಮಾಣ ಮಾಡಿ ಹೇಳಿದೆ. ''ಬಡವ ನಾನು ; ಅಷ್ಟೇ ದುಡ್ಡು ನನಗೆ ಭಿಕ್ಷ ಸಿಕ್ಕಿರೋದು. ಇದರಲ್ಲಿ ನಾಲ್ಕೂ ಹೆಣ್ಣುಮಕ್ಕಳಿಗೆ ಅರಿಶಿನ ಕುಂಕುಮಕ್ಕೆ ಅಂತ ನಾಲ್ಕು ಅರಿವೆ ಕೊಂಡಿದ್ದೇನೆ. ಈಗ ಬರಿಕೈ ಭಿಕಾರಿ. ಬಾಯಾರುತ್ತಾ ಇದೆ. ಒಂದು ಬಟ್ಟಲು ಕಾಫಿ ಕುಡಿಯೋಣ ಅಂದರೆ ಕಾಸಿಲ್ಲ. ತುಟಿಗೆ ನಾಲಿಗೇನ ಆಡಿಸ್ತಾ ಇದೀನಿ. ನೋಡಿ'' ಎಂದು.

ನಂಬಿದರು ಸತ್ಯ ಸಂಗತಿಯನ್ನು ಅವರು. ಕನಿಕರದಿಂದ ಅವರೇ ಒಂದು ಬಟ್ಟಲು ಕಾಫಿ ತರಿಸಿಕೊಟ್ಟರು. ಅಂಗಡಿ ಖರ್ಚಿನಲ್ಲಿ. ಆಮೇಲೆ ಹಿಂತಿರುಗಿದೆ.

# ಪ್ಯಾರಿಸ್ಸಿನಲ್ಲಿ ಮೊದಲ ರಾತ್ರಿ

ಅಮೆರಿಕಾದ ಲಕ್ಷಾಧೀಶ್ವರರು ಮಜ ಮಾಡಬೇಕಾದರೆ ಏನು ಮಾಡ್ತಾರೆ ? ಪ್ಯಾರಿಸ್ಸಿಗೆ ಓಡಿ ನೈಟ್ ಕ್ಲಬ್‌ಗೆ ಯಾತ್ರೆ ಹೋಗ್ತಾರೆ.

ಇಂಗ್ಲೆಂಡಿನ ಶ್ರೀಮಂತರು ಮಸ್ತ್‌ಬಂದಾಗ ಎಲ್ಲಿಗೆ ಹೋಗ್ತಾರೆ ? ವ್ಯಾಪಾರದ ನೆಪ ಹೇಳಿಕೊಂಡು ಪ್ಯಾರಿಸ್ಸಿಗೆ ಹೋಗುತ್ತಾರೆ.

ಭಾರತದ ರಾಜ ಮಹಾರಾಜರುಗಳು ಬೇಸರ ಕಳೆದುಕೊಳ್ಳಲು ಎಲ್ಲಿಗೆ ಹೋಗ್ತಾರೆ ? ಕಾಡಿಗೆ ಹೋಗಿ ಷಿಕಾರಿ ಮಾಡ್ತಾರೆ. ಅಥವಾ ಪ್ಯಾರಿಸ್ಸಿಗೆ ಹೋಗಿ ಷಿಕಾರಿ ಹೂಡ್ತಾರೆ.

13-14 ವಯಸ್ಸಾಗಿದ್ದಾಗ ಹೈಸ್ಕೂಲಿನ ಮಾಸ್ತರರೊಬ್ಬರು ಇದನ್ನು ಬಲು ರಸವತ್ತಾಗಿ ವರ್ಣಿಸಿ, ತುಸು ಜೊಲ್ಲು ಸುರಿಸುತ್ತಿದ್ದರು.

ಹೈಸ್ಕೂಲಿನ ಮಾಸ್ತರು ಹೇಳಿದುದು ಮೇಲೆ ಮೇಲೆ ಒತ್ತಿಕೊಂಡು ನೆನಪಿಗೆ ಬಂತು, ನಾನು ಪ್ಯಾರಿಸ್ಸಿನಲ್ಲಿ ಇಳಿದಾಗ. ಅತ್ತೆ ಮನೆಗೆ ಅಳಿಯ ಹೋದರೆ ಮಾನವಾಗಿರಬೇಕಾದರೆ ಮೂರು ದಿನ ಮಾತ್ರ ಅಂತ ನಮ್ಮ ರಂಗಜ್ಜಿ ಹೇಳಿದ್ದೂ ಜ್ಞಾಪಕಕ್ಕೆ ಬಂತು. ಯಾಕೋ ಕಾಣೆ. ಪ್ರಾಯಶಃ ಪ್ಯಾರಿಸ್ಸಿನಲ್ಲಿ ಮೂರು ದಿನದ ಪ್ರವಾಸ ಅಂತ ಏರ್ಪಾಡಾಗಿದ್ದುದೂ ಇದೇ ಕಾರಣದಿಂದ ಇರಬಹುದು.

ಅಂತೂ ದಿನವೆಲ್ಲಾ ಒಂದೇ ಯೋಚನೆ. ರಾತ್ರಿ ಯಾವ ನೈಟ್ ಕ್ಲಬ್ಬಿಗೆ ಹೋಗೋದು? ಆದಷ್ಟು ಕಡಿಮೆ ಖರ್ಚಿನಲ್ಲಿ ನಿಶಿ ಯಾತ್ರೇನ ಮುಗಿಸೋದು ಹೇಗೆ ? ಇಳಿದುಕೊಂಡಿದ್ದ ಹೋಟಲ್ ಮಾಲೀಕನನ್ನೇ ಸಲಹೆ ಕೇಳಿದೆವು. ಆತ ನಮ್ಮ ಮುಪ್ಪಿನ ವಯಸ್ಸು, ಬಟ್ಟ ತಲೆ, ನೆರಿ ನೆರಿ ಮುಖಗಳನ್ನು ಸಾವಧಾನವಾಗಿ ನೋಡಿದ. ಮೂರು ರಾತ್ರಿ ಕಳೆಯಬೇಕು ಎಂದಿದ್ದೀರಿ. ಅದರ ಬದಲು ಒಂದೇ ರಾತ್ರಿಯನ್ನು ಒಂದು ನೈಟ್ ಕ್ಲಬ್ಬಿನಲ್ಲಿ ಕಳೆಯಿರಿ, ಮಿಕ್ಕ ಎರಡು ರಾತ್ರಿ ಬೇಗ ಹೋಟಲಿಗೆ ಬಂದು ರಾಮಸ್ಕಂದಂ ಹನೂಮಂತಂ

ಹೇಳಿಕೊಂಡು ತೆಪ್ಪಗೆ ಬಿದ್ದುಕೊಳ್ಳಿ. ಹಾಗೆ ಮಾಡಿದರೆ ಖರ್ಚು ಮಾಡುಕ್ಕೆ ಹೆಚ್ಚು ಹಣವೂ ಇರುತ್ತೆ. ಹಾಗೂ ಸುಪ್ರಸಿದ್ಧ ಲೀಡೋವಿಗೂ ಹೋಗಬಹುದು ಎಂದು ಸಲಹೆ ಕೊಟ್ಟ. ಆದರೆ ಲೀಡೋಕ್ಕೆ ಹೋಗಬೇಕಾದರೆ ಮೊದಲೇ ನಿಮ್ಮ ಸ್ಥಾನಗಳನ್ನು ಕಾದಿರಿಸಿಕೊಂಡಿರಬೇಕು. ಈ ಹೋಟೆಲಿಗೆ ನಾಲ್ಕು ಸ್ಥಾನ ಮೀಸಲು. ಅವೆಲ್ಲವನ್ನೂ ಆಗಲೇ ಕಾದಿರಿಸಿದೆ. ಮಿಕ್ಕವರು ಅಲ್ಲಿಗೆ ಹೋಗಿ ಅದೃಷ್ಟ ಪರೀಕ್ಷೆ ಮಾಡಿಕೊಳ್ಳಬಹುದು ಎಂದ.

ನಮ್ಮ ಗುಂಪಿನಲ್ಲಿ ಮಿಕ್ಕವರು, ನಾನೊಬ್ಬನೇ.

ಮೊದಲನ್ನಿಸಿತು. ತೆಪ್ಪಗೆ ಉಂಡು ಬೆಚ್ಚಗೆ ಹೋಟಲಲ್ಲಿ ಮಲಗೋಣ ಅಂತ. ಆಮೇಲೆ ಅನ್ನಿಸಿತು. ಹುಟ್ಟಿದಾಗಿನಿಂದ ಬಾಳಿನಲ್ಲಿ ಒಂದೊಂದು ಹಂತದಲ್ಲೂ ಅದೃಷ್ಟ ಪರೀಕ್ಷೆನೇ ನಾನು ಮಾಡ್ತಾ ಇರೋದು. ಹಾಗೂ ವಯಸ್ಸಾಗುತ್ತ ಬಂತು. ಲೀಡೋಗೆ ಹೋಗಿ ಅದೃಷ್ಟ ಪರೀಕ್ಷೆ ಮಾಡೋಣ. ಪ್ರವೇಶ ದೊರಕಿದರು ಚೆನ್ನ, ಸಿಗಲಿಲ್ಲ ಅಂದರೆ ಇನ್ನೂ ಚೆನ್ನ. ದುಡ್ಡು ಉಳಿಸಿಕೊಂಡು ಹಿಂತಿರುಗೋದು, ಬೆಚ್ಚಗೆ ಮಲಗೋದು, ಎಂದು ಯೋಚಿಸಿದೆ.

ರಾತ್ರಿ ಎಂಟಕ್ಕೆಲ್ಲಾ ಊಟದ ಶಾಸ್ತ್ರ ಮುಗಿಸಿ, ಸ್ಥಾನಗಳನ್ನು ಕಾದಿರಿಸಿದ ನಾಲ್ವರ ಜತೆಗೆ ನಾನೂ ಹೊರಡಲು ಸಿದ್ಧ ಮಾಡಿಕೊಂಡೆ. ಮೋಜಿನ ಉಡುಪನ್ನು ಹಾಕಿಕೊಂಡು ಮೆರೆಯುತ್ತಿದ್ದರು, ನನ್ನ ಸ್ನೇಹಿತರು. ಡ್ರೆಸ್ ಸೂಟ್ ಅಂತಾರಲ್ಲಾ, ಕರಿ ಷರಾಯಿ, ಹೊಳೆಯುವ ಬಿಳಿ ಅಂಗಿ, ಸ್ವಚ್ಛಾನೆ ಬಿಳಿ ಷರಟು, ಕರಿ ಬೊಟೈ ; ಉಡುಪು ಬಲು ಚೆಂದ ಕಾಣಿಸಿತು. ಮುಖಗಳನ್ನು ನೋಡದೆ ಇದ್ದರೆ ಡ್ರೆಸ್ಸು ಬಲು ಚೆನ್ನ. ಒಂದು ತರಹಾ ಬೇಜಾರು ನನಗೆ. ಇಷ್ಟೆಲ್ಲಾ ಶೃಂಗಾರ ಮಾಡಿಕೊಳ್ಳುಕ್ಕೆ ಯಾರ ಕೈಲಿ ಆಗುತ್ತೆ ಅಂತ. ಕಾರಣ ನಮ್ಮ ಭಾರತದ ಕರಿ ಮುಚ್ಚಂಗಿಯನ್ನು ತೊಟ್ಟುಕೊಂಡಿದ್ದೆ. ಷರ್ಟು ಕಾಲರು ಬೋ ಇವುಗಳ ಗೋಳಿಲ್ಲವಲ್ಲಾ ಅಂತ. ಎಲ್ಲರೂ ಹೋಟಲಿನಿಂದ ನಡೆದು ಲೀಡೋಕ್ಕೆ ಹೊರಟೆವು. ರಾತ್ರಿ ಒಂಭತ್ತರ ಸಮಯ. ರಸ್ತೆಗಳೆಲ್ಲಾ ದೀಪಗಳಿಂದ ಝಗಿ ಝಗಿ ಹೊಳೆಯುತ್ತಿದ್ದುವು. ಹಾಡೇ ಹಗಲಿನಲ್ಲಿ ಇದ್ದಷ್ಟು ಬೆಳಕೇ ರಸ್ತೆಯಲ್ಲೆಲ್ಲಾ ಆದರೆ ರಸ್ತೆ ಪಕ್ಕದಲ್ಲಿದ್ದ ಸಾಲು ಮರಗಳ ಕೆಳಗೆ ಅನುಕೂಲವಾಗಿ ಕತ್ತಲು ಕತ್ತಲು, ನಾವು ನಡೆದು ಹೋಗುತ್ತಿದ್ದಾಗ, ಆ ಮರಗಳಡಿಯ ಕತ್ತಲುಗಳಿಂದ ವಿಧ ವಿಧವಾದ ಶಬ್ದಗಳು ಕೇಳಿ ಬರುತ್ತಿತ್ತು. ಹಲ್ಲಿಗಳು ಲೊಚ ಲೊಚಗುಟ್ಟಿದ ಶಬ್ದ. ಎಂತಹ ಭಾರಿ ಹಲ್ಲಿಗಳಿರಬೇಕು ? ಅಷ್ಟು ದೊಡ್ಡ ದನಿಯಲ್ಲಿ ಲೊಚಗುಟ್ಟುತ್ತಿವೆ ? ಪಕ್ಕದಲ್ಲಿದ್ದವರನ್ನು ಕೇಳಿದೆ. ಎಂತಹ ಹಲ್ಲಿಗಳಪ್ಪಾ ಅಂತ. ಅವರು ನಕ್ಕು ಹಲ್ಲಿಗಳಲ್ಲಾ ಕಣೋ, ಮನುಷ್ಯರು. ಮರದ ಕೆಳಗೆ ಕತ್ತಲಲ್ಲಿ ಚತುರ್ಭುಜರಿದ್ದಾರೆ. ಅವರು ಕಣೋ ಲೊಚ ಲೊಚ ಶಬ್ದ ಮಾಡುತ್ತಾರೆ ಎಂದರು. ಇನ್ನೂ ಇನ್ನೂ ಎಂತೆಂತಹ ಸಪ್ಪಳಗಳೊ ಕೇಳಿಸುತ್ತಿತ್ತು. ಇವೆಲ್ಲಾ ಏನು ಎಂದು ವಿವರಣೆ ಕೇಳಿ ಸ್ನೇಹಿತರ ಕೈಲಿ ಅಪಹಾಸ್ಯ ಮಾಡಿಕೊಳ್ಳುವುದು ಬೇಡ ಎಂದು ತೆಪ್ಪಗೆ ಮುಂದೆ ನಡೆದೆ.

ಲೀಡೋವನ್ನು ತಲುಪಿದೆವು. ಸ್ಥಳ ಕಾದಿರಿಸಿಕೊಂಡಿದ್ದವರು ಒಳಕ್ಕೆ ಹೋದರು. ತಬ್ಬಲಿ ತರಹ ನಾನು ಹೊರಾಂಗಣದಲ್ಲಿ ಪಿಕ ಪಿಕ ನೋಡುತ್ತ ನಿಂತಿದ್ದೆ. ನನ್ನ ಎದುರುಗಡೆ ವರಾಂಡಾ ತರಹಾ ಇತ್ತು. ಅಲ್ಲೊಬ್ಬ ಆಕಿ ಮೇಜಿನ ಮುಂದೆ ಕೂತಿದ್ದಳು. 40-45ರ ಪ್ರಾಯ ಇರಬಹುದು. ಈಕೀನ ಮಾತನಾಡಿಸಿದರೆ ನನ್ನ ಪತ್ನೀ ವ್ರತಕ್ಕೆ ಧಕ್ಕೆ ಬೀಳುವುದಿಲ್ಲ ಎಂಬ ಧೈರ್ಯದಿಂದ ಆಕೆಯ ಬಳಿಗೆ ಹೋಗಿ, ''ಹೀಗೆ ನಾನು ಇಂಡಿಯಾದಿಂದ ಬಂದಿದ್ದೀನಿ. ಮೊದಲೇ ಸ್ಥಳ ಕಾದಿರಿಸಲಾಗಲಿಲ್ಲ. ಏನಾದರೂ ಅವಕಾಶ ಇದ್ದರೆ ಒಳಗೆ ಹೋಗಬೇಕು ಎಂದು ಆಸೆ'' ಎಂದೆ. ದುಂಡು ದುಂಡು ಮುಖದ ಆಕೆ, ನನ್ನನ್ನೊಮ್ಮೆ ಭಟ್ಟತಲೆಯಿಂದ ಷೂಗಳ ತನಕ ನೋಡಿದಳು. ಹತ್ತು ಫ್ರಾಂಕ್ ಕೊಡಿ ಎಂದಳು. ಕೊಟ್ಟೆ. ಇಲ್ಲೇ ಕೂತಿರಿ, ಅವಕಾಶ ಇದೆಯೇ ನೋಡ್ತೀನಿ ಎಂದು, ತಾನು ಕೂತಿದ್ದ ಕುರ್ಚಿಯಲ್ಲಿ ನನ್ನನ್ನು ಕೂರಿಸಿದಳು. ಅವಳು ಒಳಗೆ ಹೋದಳು. ಎರಡು ನಿಮಿಷ ಆಯಿತು, ಮೂರಾಯ್ತು, ಐದಾಯ್ತು, ಸುತ್ತಲೂ ಅಡ್ಡಾಡುತ್ತಿದ್ದ ಜನ, ಜನಿ, ಎಲ್ಲರೂ ನನ್ನನ್ನೇ ದುರುಗುಟ್ಟುತ್ತಾ ಬೆರಳು ತೋರಿಸಿ ಏನನ್ನೋ ಹೇಳುತ್ತಾ ಇದ್ದರು. ಕೆಲವರನಕ ಯಾರ್‍ಯಾರನ್ನೋ ಕರೆದುಕೊಂಡು ಬಂದು ನನ್ನನ್ನು ತೋರಿಸುತ್ತಿದ್ದರು. ಏಕೆ ಹೀಗೆ, ನನ್ನ ಅಂಗಿ ಏನಾದರೂ ಸಾರು ಹುಳಿಗಳಿಂದ ಕೊಳಕಾಗಿದೆಯೇ, ಅಥವಾ ಷರಾಯಿ ಏನಾದರೂ ಹರಿದಿದೆಯೇ ? ಅಥವಾ ತಲೆ ಮೇಲೆ ಗುಬ್ಬಚ್ಚಿ ಕೂತಿದೆಯೇ ಎಂದು ಅನುಮಾನ ಬಂತು. ಹೋದರೆ ಹೋಗಲಿ ಹತ್ತು ಫ್ರಾಂಕ್. ಬೇಗ ತಲೆ ಮರೆಸಿಕೊಂಡು ಹೋಟಲಿಗೆ ಹಿಂತಿರುಗೋಣ ಎನ್ನಿಸಿತು. ಆದರೂ ಚಪಲ. ನೋಡೋಣ ಕಡೆ ತನಕ. ಅದೃಷ್ಟ ಹೇಗಿರುತ್ತೊ ! ಎಂದು ಇನ್ನೊಂದು ಕಡೆ ಮನಸ್ಸು ಎಳೆಯುತ್ತಿತ್ತು.

ಅಷ್ಟು ಹೊತ್ತಿಗೆ ಆಕಿ ಬಂದಳು. ಅವಳ ಜತೇಲಿ ಒಬ್ಬ ಮಾಣಿ ಬಂದಿದ್ದ. ಲೀಡೋದ ಮಾಣಿಗಳು, ಯೂರೋಪಿನ ಹೋಟಲುಗಳಲ್ಲೆಲ್ಲಾ ಅಚ್ಚುಕಟ್ಟಾದ ಉಡುಪು ಧರಿಸಿರುತ್ತಾರೆ. ಅಲ್ಲಿಗೆ ಬಂದ ಅತಿಥಿ ಅಭ್ಯಾಗತರು ಯಾರು, ಸೇವೆ ಮಾಡುವ ಮಾಣಿಗಳು ಯಾರ್‍ಯಾರು ಎಂದು ಹೇಳುವುದು ಸ್ವಲ್ಪ ಕಷ್ಟವೇ ? ಹುಚ್ಚಾಸ್ಪತ್ರೆಯ ತರಹ, ರೋಗಿಗಳ್ಯಾರು, ವೈದ್ಯರು ಯಾರು ಎಂದು ಸುಲಭವಾಗಿ ಪತ್ತೆ ಹಚ್ಚುವುದು ಎಷ್ಟು ಕಷ್ಟವೋ ಅಷ್ಟೇ ಕಷ್ಟ ಆಯಿತು ಲೀಡೊದಲ್ಲಿ ಕೂಡ.

ಆದರೂ ಈ ಮಾಣಿ ''ನಮಸ್ತೆ'' ಮಾಡುತ್ತ ಬಂದಿದ್ದನಾದ್ದರಿಂದ, ಮಾಣಿ ಅಂತ ತಿಳಿಯಿತು. ಅಂಗೈ ಅಂಗೈ ಹೊಸೆಯುತ್ತಿದ್ದ ರೀತಿ ನೋಡಿದರೆ ಇವನು ಅಂಗೈ ಹಿಂಗೈ ಸಂಪಾದನೆ ಯುವನೇ ಇರಬೇಕು ಎಂದು ಖಂಡಿತವಾಯಿತು. ಬಂದವನೇ ''ಹೀಗೆ ಬರಬೇಕು, ಮಹಾಸ್ವಾಮಿ, ದಯಮಾಡಿ'' ಎಂದು ಬಲು ಮರ್ಯಾದೆಯಿಂದ ಮಾತಾಡಿದ. ಬಲು ಗೌರವದಿಂದ ರಂಗಮಂಟಪದ ಪಕ್ಕದ ಮೊದಲನೆ ಸಾಲಿನಲ್ಲೇ ನನಗೆ ಸ್ಥಳ ಮಾಡಿಕೊಟ್ಟು, ''ಏನು ಒಪ್ಪಿಸಲಿ'' ಎಂದು ವಿನಯದಿಂದ ಕೇಳಿದ.

ಸುತ್ತಲೂ ನೋಡಿದೆ. ಸಾಸಿವೆ ಕಾಳು ಹಾಕಿದರೆ ನೆಲಕ್ಕೆ ಬೀಳದೆ ಇರೋಹಾಗೆ ಜನ ದೊಡ್ಡಿ ಕೂಡಿದ್ದರು. ಸಿಗರೇಟಿನ ಹೊಗೆ ರೈಲು ಇಂಜಿನ್ನಿನ ಹೊಗೆ ತರಹ ದಟ್ಟವಾಗಿ ತೆರೆ ತೆರೆಯಾಗಿ ಸುರುಳಿ ಸುರುಳಿಯಾಗಿ ಏರೇರುತ್ತಿತ್ತು. ಸ್ಥಳ ಕಾದಿರಿಸಿದ್ದ ಸ್ನೇಹಿತರು ಎಲ್ಲಿ ? ಈಗಲೇ ನೋಡಿಕೊಂಡಿದ್ದರೆ, ಹಿಂತಿರುಗುವಾಗ ಜತೆ ಸಿಕ್ಕಿದ ಹಾಗೆ ಆಗುತ್ತೆ. ಇಲ್ಲದೆ ಇದ್ದರೆ, ನಿಶಿ ರಾತ್ರೀಲಿ ಪ್ಯಾರಿಸ್ಸಿನಲ್ಲಿ ದಾರಿ ತಪ್ಪಿದರೆ ? ಸ್ವಲ್ಪ ಹೊತ್ತು ನೋಡಿದಮೇಲೆ ರಂಗ ಮಂಟಪದ ಒಂದು ಫರ್ಲಾಂಗ್ ದೂರದಲ್ಲಿ ಹೊರ ಬಾಗಿಲಿನ ಹತ್ತಿರ ಒಂಟೆಗಳ ತರಹ ಕತ್ತುಗಳನ್ನು ಎತ್ತಿಕೊಂಡು ನೋಡುತ್ತ ನಿಂತಿದ್ದರು. ಅಷ್ಟು ದೂರದಲ್ಲಿ ಸಣ್ಣ ಬೊಂಬೆಗಳ ತರಹ ಕಾಣಿಸಿದರು. ತಟಕ್ಕನೆ ಹೊಳೆಯಿತು. ರಂಗ ಮಂಟಪದ ಮೇಲಿನ ವ್ಯಕ್ತಿಗಳು ಅವರಿಗೆ ಪುಟಾಣಿ ಬೊಂಬೆಗಳ ತರಹ ಕಾಣಿಸುತ್ತಿರಬೇಕು ಅಂತ

ಮತ್ತೆ ಈ ಮಾಣಿ ಈ ರಂಗಮಂಟಪದ ಮೊದಲ ಸಾಲಿನಲ್ಲಿ ನನ್ನನ್ನು ಕೂರಿಸಿದ ಮರ್ಮ ! ಇಷ್ಟೆಲ್ಲಾ ವಿನಯ ! ಗೌರವ ! ಓಹೋ ನನ್ನ ಮುಚ್ಚಂಗಿ ಮುದಿ ಮುಖ ನೋಡಿ ಇವನೆಲ್ಲೋ ಭಾರತದ ಚಿಲ್ಲರೆ ರಾಜ ಇರಬೇಕು. ತುಂಬಾ ಹಣ ಇರಬೇಕು. ಅಸ್ವಾಭಾವಿಕ ಕೆಟ್ಟ ಕೆಟ್ಟ ಚಪಲ ಇರಬೇಕು. ಹೇರಳ ಹಿಂಡಬಹುದು ಅಂತ ಮಾಣಿ ಹೀಗೆ ಮಾಡಿರಬಹುದು ಎಂದು ಅನುಮಾನ ಬಂತು. ಅವನು ಏನು ತಪ್ಪು ತಿಳಿದುಕೊಂಡರೆ ನನಗೇನು. ರಂಗ ಮಂಟಪದ ರಂಗೋಲಿ ಪಕ್ಕದಲ್ಲೇ ಕುಳಿತಿದ್ದೆ. ಇದೊಂದು ಅದೃಷ್ಟ ಪರೀಕ್ಷೆಯಲ್ಲಿ ಸದ್ಯಕ್ಕಾದರೂ ನಾನು ಜಯ ಗಳಿಸಿದ್ದೆ. ಮುಂದೆ ಏನಾಗುತ್ತೋ ಆಗಲಿ ಎಂದು, ರಾಜರ ಠೀವಿಯನ್ನು ಅಣಕಿಸುತ್ತಾ ಷ್ಯಾಂಪೇನ್ ಎಂದೆ. ಪಕ್ಕದಲ್ಲಿದ್ದವರಿಗೆ ಕೊಟ್ಟರೂ ಆಯಿತು ಎಂದುಕೊಂಡು, ಲೀಡೋ ಪ್ರವೇಶಕ್ಕೆ ಹಣವನ್ನು ಕೊಡಬೇಕಾಗಿಲ್ಲ. ಆದರೆ ಒಳಗೆ ಕೂತಾಗ ಏನಾದರೂ ಕುಡಿಯಲೇಬೇಕು, ಅಥವಾ ತಿನ್ನಲೇಬೇಕು ಎಂದು ಹೋಟಲಿನವರು ಹೇಳಿದ್ದು ಜ್ಞಾಪಕದಲ್ಲಿತ್ತು. ಮೊದಲು ಕೊಟ್ಟ ಹತ್ತು ಫ್ರಾಂಕ್ ಲಂಚದ ಲೆಕ್ಕಕ್ಕೆ ಸೇರಿದ್ದು ಎಂದೂ ಗೊತ್ತಿತ್ತು, ಆದುದರಿಂದಲೇ ಷ್ಯಾಂಪೇನ್ ಎಂದು ಸ್ವಲ್ಪ ಠೀವಿಯಿಂದಲೇ ಹೇಳಿದೆ. ಮಾಣಿ ಹೊರಟು ಹೋದ.

ನನ್ನ ಪಕ್ಕದಲ್ಲಿ ಅಮೇರಿಕಾದ ದಂಪತಿಗಳು ಕೂತಿದ್ದರು. ಆತನಿಗೆ ಸುಮಾರು ನನ್ನ ವಯಸ್ಸೇ ! ಹೆಂಡತಿ ಜತೆಗೆ ಇಂತಹ ಕಡೆಗೆ ಯಾಕೆ ಬಂದ ? ಅಥವಾ ಈಕೆ ಇವನು ಹೆಂಡತಿ ಅಲ್ಲವೇನೋ ? ಎಲ್ಲವೂ ಈ ಲೋಕದಲ್ಲಿ ಈ ಕಾಲದಲ್ಲಿ ಟೆಂಪರವರಿ ಆಗಿರುವ ಹಾಗೆ ಆಕೇನೂ ಟೆಂಪರವರಿ ಹೆಂಡತಿಯೋ ? ಹೀಗೆ ನನ್ನ ಆಲೋಚನೆಗಳು ಹೊಮ್ಮುತ್ತಿದ್ದಾಗ, ಆಕೆ ಗಂಡನನ್ನು ಕುರಿತು, ''ತೂಕಡಿಸುಕ್ಕೆ ಇಲ್ಲಿಗೆ ಯಾಕೆ ಬಂದೆ ಜಿಂ'' ಎಂದು ಕರ್ಕಶವಾಗಿ ಹೇಳಿದಳು. ಆತನಿಗೆ ಸ್ವಲ್ಪ ತೂಕಡಿಕೆ ಬಂದೂ ಇತ್ತು. ಕಠೋರವಾಗಿ ಮಾತಿನಲ್ಲಿ ಗುದ್ದಬೇಕಾದರೆ, ಮದುವೆಯಾದ ಹೆಂಡತೀನೆ ಇರಬೇಕು ಎಂದು ನಿರ್ಧರಿಸಿದೆ.

"ಈ ಹೊಗೇಲಿ ಉಸಿರಾಡುಕ್ಕೆ ಆಗುಲ್ಲ. ಹೊರಗೆ ಹೋಗುಕ್ಕೆ ಈ ಗಲಾಟೆಯಲ್ಲಿ ಅಸಾಧ್ಯ. ಎಲ್ಲಾದರೂ ಫೈರ್ ಎಸ್ಕೇಪ್ ಇದ್ದರೆ ಓಡಿ ಬಿಡ್ತಿದ್ದೆ" ಎಂದು ಆತ ನನಗೆ ಹೇಳಿದ. ನನ್ನ ಮನಸ್ಸಿನಲ್ಲಿರೋದನ್ನು ನೀವು ಹೇಳಿದಿರಿ ಎಂದು ನಾನೂ ದನಿಗೂಡಿಸಿ ಒಪ್ಪಿದೆ. ಮತ್ತೆ ಯಾಕೆ ಬಂದಿರಿ ಎಂದು ಕೇಳಿದ. ಹೆಂಡತಿ ಕಾಟಕ್ಕೆ ನಾನು ಬಂದೆ. ಒಂಟಿಯಾಗಿರೋ ನೀವು ಯಾಕೆ ಬಂದಿರಿ ಎಂದ ಆತ.

"ನೋಡಿ ! ಮಾರಾಯ ! ನಮ್ಮ ದೇಶದಲ್ಲಿ ಭರತನಾಟ್ಯ ಅಂತ ನಾಚು ಮಾಡ್ತಾರೆ. ಮುಖದಲ್ಲಿ ಮನಸ್ಸಿನ ಏನೆಲ್ಲಾ ಉದ್ವೇಗಗಳನ್ನು ಎಷ್ಟು ಚೆನ್ನಾಗಿ ತೋರಿಸುತ್ತಾರೆ ? ನಾಚು ಅಂದರೆ ನನಗೆ ಬಲು ಪ್ರಿಯ. ರಷ್ಯಾಗೆ ಹೋಗಿದ್ದೆ. ಅಲ್ಲಿ "ಬಾಲೆ" ನಾಟ್ಯ ಆಡುತ್ತಾರೆ. ಮುಖಮುದ್ರೆಗಳು ಬಲು ಅಂದ. ಆದರೆ ನಮ್ಮ ದೇಶದವರ ತರಹ ಅಲ್ಲ. ಅಷ್ಟು ಸೊಬಗಿಲ್ಲ. ಅಷ್ಟು ಅರ್ಥವಿಲ್ಲ. ಪ್ಯಾರಿಸ್ಸಿನಲ್ಲಿ ನಾಟ್ಯ ಜಗತ್ಪ್ರಸಿದ್ಧ. ನೋಡೋಣ ಅಂತ ಬಂದಿದ್ದೇನೆ" ಎಂದು ವಿಷಯ ತಿಳಿಸಿದೆ. ನಾನು ಹೇಳಿದ್ದನ್ನು ಆತ ನಂಬಬಹುದು ಅಂತ ನನ್ನ ನಂಬಿಕೆ. ಈಚಲ ಮರದ ಕೆಳಗೆ ಮಜ್ಜಿಗೆ ಕುಡಿದೆ ಅಂತ ಹೇಳೋವಾಗ, ನಾವಾದರೂ ಅದನ್ನು ನಂಬಲೇಬೇಕು ಅಲ್ಲವೇ ?

ಅಷ್ಟು ಹೊತ್ತಿಗೆ ರಂಗಮಂಟಪ ಸಿದ್ಧವಾಯಿತು. ಸೂತ್ರಧಾರ ಬಂದು ಎಲ್ಲರನ್ನೂ ಸ್ವಾಗತಿಸಿ, "ನೀವು ಹೀಗೇ ಇಲ್ಲಿಗೆ ರಾತ್ರಿ ಬಂದು ನಮ್ಮ ಆಟ ನೋಡಿ ಕೆರಳಿ ಸಂತೋಷಪಟ್ಟು, ತಲೆ ಬೋಳಿಸಿಕೊಂಡು ಹೋಗಿ," ಎನ್ನುವ ರೀತಿಯಲ್ಲಿ ನಗ್ತಾ ನಗ್ತಾ ಹೇಳಿದ.

ಠಿಣ್ ಣ್ ಣ್ ಅಂತ ಜಾಗಟೆ ತಿಳಿಯಾಗಿ ತೇಲುತ್ತ ಕೇಳಿಸಿತು. ತೆರೆ ಎತ್ತಿದರು. ಒಳಗಿನಿಂದ ನಾಟ್ಯರಾಣಿ ಜಿಗಿ ಜಿಗಿ ಕುಣಿಯುತ್ತಾ ಬಂದಳು. ಅವಳ ಮುಖವನ್ನೇ ದಿಟ್ಟಿಸಿ ನೋಡಿದೆ. ಅಂದವಾದ ಚೆಂದುಳ್ಳಿ ಮುಖ ಬೆಳದಿಂಗಳಿನಂತಹ ಹಾಲು ಕೆನ್ನೆಗಳು. ಗುಳಿ ಬೀಳುತ್ತಿದ್ದ ಕೆನ್ನೆಗಳು, ಗಲ್ಲದ ಮೇಲೂ ಗುಳಿ ಬಿದ್ದಿತ್ತು. ಮಾಟವಾದ ಮೂಗು. ಹೊಳೆಯುವ ಕಣ್ಣುಗಳು ಹುಬ್ಬುಗಳನ್ನು ತಿದ್ದಿ ಮೀನಾಕ್ಷಿಯ ತರಹ ಕಾಣಿಸುವಂತೆ ಮಾಡಿದ್ದಳು. ಕೆಳ ರೆಪ್ಪೆಗೆ ಕಾಡಿಗೆ ಹಚ್ಚಿ ಕಣ್ಣಂಚಿನಿಂದ ತುಸು ದೂರ ಎಳೆದಿದ್ದಳು. ಬಿರಿದ ದಾಳಿಂಬೆ ತರಹ ಬಾಯಿ ರಂಗು ರಂಗೇರಿದ ತುಟಿಗಳು. ಎಳಕಿನ ಪ್ರಾಯದಿಂದ ಮುಖ ಸಾರಿಸಲ್ಪಟ್ಟಿತ್ತು. ಅವಳ ಮುಖಾನೇ ನೋಡ್ತಾ ಇದ್ದೆ. ಸುಮಾರು ಹತ್ತು ನಿಮಿಷ ಕುಣಿದಳು. ಅವಳ ಮುಖದ ಮೇಲೆ ಒಂದು ಹಾವ ಭಾವ ಸುಳಿದಾಡಿದ್ದನ್ನು ಕಾಣಲಿಲ್ಲ. ತುಟಿಗಳು ಸುಟ್ಟ ಇಟ್ಟಿಗೆಯ ತರಹ ಬಿಗಿದುಕೊಂಡೇ ಇದ್ದುವು. ಕಣ್ಣುಗಳು ಒಂದೇ ದಿಕ್ಕಿನಲ್ಲಿ ಹಚ್ಚಿದ ಊದು ಕಡ್ಡಿಯ ತರಹ ಹೊಳೆಯುತ್ತಲೇ ಇದ್ದುವು. ಗಲ್ಲದ ಗುಳಿಗಳು, ಮೊದಲಿನಿಂದ ಕೊನೆಯ ತನಕ ಒಂದೇ ಮಾಟ, ಒಂದೇ ಆಳ, ಒಂದೇ ಕಳೆ. ಮುಖ ಮನಸ್ಸಿನ ಪ್ರತಿಬಿಂಬ ಎಂದರೆ ಅವಳ ಮನಸ್ಸು ಖಾಲಿ ಇದ್ದಿರಬೇಕು. ಅವಳು ಸಮಾಧಿ ಸ್ಥಿತಿಯಲ್ಲಿದ್ದಿರಬೇಕು. ಅವಳು ನಿರ್ವಾಣವನ್ನು ಹೊಂದಿದ್ದಿರಬೇಕು.

ಅವಳ ಹಿಂದೆ ಹತ್ತಿಪ್ಪತ್ತು ನರ್ತಕಿಯರು ಪುಣು ಪುಣು ಅಂತ ಕುಣಿಯುತ್ತಾ ಬಂದರು. ಎಲ್ಲರ ಮುಖಗಳನ್ನೂ ರೆಪ್ಪೆ ಹಾರಿಸದೆ ದುರುಗುಟ್ಟಿಕೊಂಡೇ ನೋಡುತ್ತಿದ್ದೆ. ಮಸಲಾ ಭಗವಂತ ಪ್ರತ್ಯಕ್ಷನಾದ ಅಂತ ಅನ್ನಿ. ಆಗ ಅವನ ದಿವ್ಯ ಮುಖವನ್ನೇ ನೋಡುತ್ತಾ ಆನಂದಿಸುತ್ತ ತನ್ನ ತನವನ್ನೇ ಭಕ್ತ ಮರೆತುಬಿಡುಲ್ಲವೇ, ಆತರಹ ನಾನು ನರ್ತಕಿಯರ ಮುಖವನ್ನೇ ದಿಟ್ಟಿಸಿ, ಏಕಾಗ್ರ ಚಿತ್ತದಿಂದ ನೋಡುತ್ತಿದ್ದೆ.

ಒಂದು ಮುಖದಲ್ಲಿ ಆಗಲಿ ಒಂದು ಹಾವ, ಒಂದು ಭಾವ, ಒಂದು ಚೈತನ್ಯ, ಒಂದು ಹೊಳಪು, ಒಂದು ಭಂಗಿ, ಕಾಣಿಸಬೇಕಲ್ಲ. ಬೇಲೂರಿನ ಶಿಲಾಬಾಲಿಕೆಯರ ಮುಖದಲ್ಲಿ ಒಂದೇ ನೋಟ ಕೆತ್ತಲ್ಪಟ್ಟಿದ್ದರೂ, ಅದು ಜೀವಂತವಾಗಿದೆ. ಆದರೆ ಈ ನರ್ತಕಿಯರ ಎಳೆ ಮುಖದಲ್ಲಿ ಬರೀ ಸ್ಮಶಾನದ ಕಳೆ. ಹಚ್ಚಿಕೊಂಡಿದ್ದ ಬೂದಿಯ ಭರಾಟೆ ನೋಡಿದ ಮೇಲೆ ಸುಡುವವರ ಸ್ಮಶಾನದ ಕಳೆ ಅಂತ ಹೇಳಬೇಕು.

ಇದೆಂತಹ ನರ್ತನ ? ನಮ್ಮ ದೇಶದ ನರ್ತನವೇ ಅರ್ಥಪೂರ್ಣವಾದುದು ಸುಸಂಸ್ಕೃತಿಯದು ಎಂದನ್ನಿಸಿತು.

ನರ್ತನ ಮುಗಿಯಿತು. ಮುಂದಿನ ಕಾರ್ಯಕ್ರಮಕ್ಕೆ ರಂಗವನ್ನು ಸಿದ್ಧಮಾಡುತ್ತಿದ್ದರು. ''ಹೇಗಿತ್ತು'' ಎಂದ, ಅಮೆರಿಕನ್ ನೆರೆಯವ ; ಕಣ್ಣು ಕಣ್ ಬಿಡುತ್ತಾ.

ನನಗೆ ಅನಿಸಿದ್ದನ್ನು ವಿವರಿಸಿದೆ.

ಮಂಕು ಮುಂಡೇದೇ ಅನ್ನುವ ರೀತಿಯಲ್ಲಿ ನನ್ನನ್ನು ನೋಡುತ್ತಾ, ಮೂದಲಿಸುವ ದನಿಯಲ್ಲಿ ''ಅಷ್ಟೆಲ್ಲಾ ಹುಡುಗಿಯರು, ತುಂಡು ದುಂಡಾಗಿ ಬಳುಕುದಿರು. ಬೆಳೆದ ಯುವತಿ ಯರು ಅಷ್ಟೆಲ್ಲಾ ಪ್ರದರ್ಶನ ಮಾಡಿದರು. ಯಾವುದೊಂದನ್ನೂ ಮುಚ್ಚುಮರೆಯಿಲ್ಲದೆ ತೋರಿಸುತ್ತಾ ಕುಣಿದಾಡಿದರು. ಷೋಡಶ ಕಲೆಗಳನ್ನೂ ಮೆರೆಸಿದರು. ಒಬ್ಬರಲ್ಲ, ಇಬ್ಬರಲ್ಲ 20–30 ಚೆಂದುಳ್ಳಿ ತರುಣಿಯರು. ಇಷ್ಟೆಲ್ಲಾ ಸುಗ್ಗಿ ಇದ್ದರೂ ಅವರುಗಳ ಮುಖಗಳನ್ನೇ ನೋಡುತ್ತಿದ್ದೆ ಅನ್ನುತ್ತೀಯಲ್ಲ'' ಎಂದ.

ನಾಟ್ಯಶಾಸ್ತ್ರದ ಅಮಲಿನಲ್ಲಿ ನರ್ತಕಿಯನ್ನೇ ಮರೆತಿದ್ದೆ ; ಮದುವೆ ಸಂಭ್ರಮದಲ್ಲಿ ಮದುವಣಗಿತ್ತಿಯನ್ನೇ ಮರೆತ ಹಾಗೆ.

ಮುಂದೆ ಹುಷಾರಾಗಿರ್ತೀನಿ ಎಂದು ಆತನಿಗೆ ಮಾತು ಕೊಟ್ಟೆ.

# ಮೊದಲ ರಾತ್ರಿಯ ಎರಡನೆ ಝೂಮ

ಪ್ಯಾರಿಸ್ಸಿನಲ್ಲಿ ಮೊದಲ ರಾತ್ರಿ ಅನುಭವಿಸಲು ಲೀಡೋಕ್ಕೆ ಹೋದುದನ್ನು ತಿಳಿಸಿ ಆಯಿತಲ್ಲ. ನರ್ತಕಿಯರ ಮುಖವನ್ನೇ ನೋಡುತ್ತಾ ಅಲ್ಲೇನನ್ನೂ ಕಾಣದೆ, ಕಡೆಗೆ ಪಕ್ಕದಲ್ಲಿದ್ದ ಅಮೆರಿಕನ್ನನಿಂದ ಉಗಿಸಿಕೊಂಡಿದ್ದೂ ಮುಗಿಯಿತಲ್ಲ. ಅಷ್ಟು ಹೊತ್ತಿಗೆ ರಾತ್ರಿಯ ಮೊದಲ ಝೂಮ ಮುಗಿದಿತ್ತು.

ಎರಡನೇ ಝೂಮ ಸಡಗರ ಸಂಭ್ರಮಗಳಿಂದ ಹುಟ್ಟಿತು. ಕಹಳೆ ಕೊಂಬುಗಳ ಎಚ್ಚರಿಕೆ ಕೇಳಿಸಿತು. ತುತ್ತೂರಿ ಊದಿದರು. ಆಕಾಶವಾಣಿ ಭೋರ್ಗರೆಯಿತು. ಲೀಡೋದ ರಂಗಮಂಚದ ಮುಖ ಮುಸುಕನ್ನು ಸರಿಸಿದರು.

ಸ್ಫುರದ್ರೂಪಿಯಾದ ಯುವಕನೊಬ್ಬ ಅಚ್ಚುಕಟ್ಟಾದ ಉಡುಪು ಧರಿಸಿ ನಿಂತಿದ್ದಾನೆ. ತೆರೆ ಸರಿದಮೇಲೆ ಕಿರುನಗೆಯನ್ನು ಸೂಸುತ್ತ ಸೊಂಟದಿಂದ ಬಾಗಿ ಪ್ರೇಕ್ಷಕರಿಗೆ ವಂದಿಸಿದ.

ಇದೇನು ಮೋಜು ? ಪ್ಯಾರಿಸ್ಸು. ನಿಶಿರಾತ್ರಿ. ಅಂತರಂಗ ಬಹಿರಂಗವಾಗುವ ಸಂಧಿ ಕಾಲ. ಹಣವಂತರೆಲ್ಲಾ ಹಣ ಚಲ್ಲಿ ಸ್ವಲ್ಪ ಹೊತ್ತಾದರೂ ಪ್ರಾಯದ ಅನುಭವಗಳನ್ನು ಮರುಕಳಿಸಿ ಅನುಭವಿಸಲು ಬಂದು ಕಾತುರರಾಗಿದ್ದಾರೆ. ಹಾಗಿರುವಾಗ ಅಪ್ಸರೆಯರು ಬಂದೇ ಕುಣಿಸಿ ಕುಣಿದಾಡುವುದು ನ್ಯಾಯ. ಅದರ ಬದಲು ಈ ಗಂಡು ಯುವಕ ಈ ಹೊತ್ತಿನಲ್ಲಿ ಇಲ್ಲಿ ಬಂದು ನಿಂತು !! ಓಹೋ. ಹಣವಂತ ಗಂಡಸರು ಮಾತ್ರ ಬರುತ್ತಾರೆ ಅಂತ ಯಾಕೆ ಅಂದುಕೊಂಡೆ ? ಡಾಲರ್ ರಾಜ್ಯದ ಶ್ರೀಮಂತ ಹೆಣ್ಣುಮಕ್ಕಳು. ಹಣ್ಣು ಹಣ್ಣು ಹೆಣ್ಣು ಮಕ್ಕಳು ಇಲ್ಲಿಗೆ ಬಂದಿರುತ್ತಾರಲ್ಲಾ ! ಅವರಿಗೆ ಮನರಂಜನೆಯಾಗಬೇಕಾದರೆ, ದೇಹ ಪುಳಕ ಬೇಕಾದರೆ ಚೆಂದುಳ್ಳಿ ಹುಡುಗರು ಬರಲೇಬೇಕು. ಹೆಣ್ಣು ಹೆಣ್ಣಿನ ಕುಣಿತ ನೋಡಿ ಸುಖ ಅನುಭವಿಸುವುದು ಸಾಧ್ಯವೇ ? ಅದಕ್ಕೆ ಈ ಯುವಕ ಮದುವೆ ಗಂಡಿನ ತರಹ ಅಣಿಯಾಗಿ ಬಂದು ನಿಂತಿದ್ದಾನೆ ಎಂದು ಅಂದುಕೊಂಡೆ. ಅಂದಮೇಲೆ ಇದೇ ತರಹ

ಹತ್ತಾರು ಹುಡುಗರು ಇನ್ನೂ ಸ್ವಲ್ಪ ಹೊತ್ತಿನಲ್ಲೇ ಧಂಗುತ್ತಾ ಬಂದು ಯಥಾ ಪ್ರಕಾರ ಡ್ರಿಲ್ ಮಾಡುತ್ತಾರೆ ಎಂದು ಊಹಿಸಿದೆ.

ಅಷ್ಟರಲ್ಲೇ ರಂಗಮಂಟಪದ ಮೇಲಿನ ಯುವಕ ಎಡಗೈಯನ್ನು ಕಿರುಗಾಳಿಯಲ್ಲಿ ಬಾಳೆಲೆ ಬೀಸುಲ್ಲವೇ, ಹಾಗೆ ಬೀಸಿದ. ಬೆರಳುಗಳನ್ನು ಮೆಲ್ಲಗೆ ಮಡಿಚಿದ. ಮತ್ತೆ ತೋಳನ್ನು ಎದೆಯ ಮುಂದಕ್ಕೆ ಹಾಯಿಸಿದ. ಬಲಗೈಯಿಂದ ಎಡಗೈಯನ್ನು ಭಿಕ್ಷಾಪಾತ್ರೆಯ ತರಹ ಹಿಡಿದ.

ಅರೆ ! ಅಚ್ಚು ಬಿಳಿಯ ಪಾರಿವಾಳ ರೆಕ್ಕೆ ಬಡಿಯುತ್ತಾ ಹಾರಿ ರಂಗ ಮಂಟಪದ ಮೇಲೆ ಹಾರಾಡಿತು.

ಆತ ತಲೆಬಾಗಿ ವಂದಿಸಿದ. ಬಲ ತೋಳನ್ನು ಹಾಗೆಯೇ ಹಾಯಿಸಿ ಎದೆಯ ಮುಂದೆ ತಂದು, ಭಿಕ್ಷಾಪಾತ್ರೆ ಮಾಡಿ, ಇನ್ನೊಂದು ಪಾರಿವಾಳ ಹಾರಿಸಿದ.

ಜನರೆಲ್ಲಾ ಚಪ್ಪಾಳೆ ತಟ್ಟಿದರು. ತಲೆಬಾಗಿ ವಂದಿಸಿದ. ಕಿರುನಗೆ ಹಾಗೇ ಇತ್ತು.

ಅಂಗಿಯ ಒಳ ಜೇಬಿಗೆ ಕೈ ಹಾಕಿದ. ಸಿಗರೇಟು ತೆಗೆಯುತ್ತಾನೋ ಎಂದುಕೊಂಡೆ. ಇಲ್ಲ, ಪಾರಿವಾಳ ತೆಗೆದ. ಹಾರಿಸಿದ. ಬಲಗಡೆ ಷರಾಯಿ ಜೇಬಿಗೆ ಕೈಹಾಕಿದ. ಬೆಂಕಿಪಟ್ಟಣ ಬರಲಿಲ್ಲ, ಇನ್ನೊಂದು ಪಾರಿವಾಳ ಬಂತು. ಅದೇನು ಹಸ್ತಗುಣವೊ ಅವನದು, ಎಲ್ಲಿ ಕೈ ಹಾಕಿದರೆ ಅಲ್ಲೊಂದು ಪಾರಿವಾಳ ಹಾರುತ್ತಿತ್ತು. ಸುಮಾರು 3–4 ನಿಮಿಷಗಳಲ್ಲಿ ಮೂವತ್ತು ನಲವತ್ತು ಪಾರಿವಾಳಗಳು ಹಾರಾಡ ಹತ್ತಿದುವು.

ಸಣ್ಣಪುಟ್ಟ ಪುಕ್ಕಗಳೆಲ್ಲವೂ, ಪಾರಿವಾಳಗಳು ಹಾರಿದಾಗ ಇವನ ಮೇಲೆ ಬಿದ್ದಿದ್ದುವು. ನಮ್ಮೂರಿನಲ್ಲಿ ಪಾರಿವಾಳ ಮೇಲೆ ಹಾರಿ ಹೋದರೆ ಟೋಪಿ ಅಂಗೀನ ಒಗೆಯುಕ್ಕೆ ಹಾಕಬೇಕಾಗುತ್ತೆ. ಅಲ್ಲಿ ಹಾಗಾಗಲಿಲ್ಲ, ಏಕೆಂದರೆ ರಂಗಮಂಟಪದ ಕಂಚುಕಿ ಒಂದು ನವಿರಾದ, ಹಗುರಾದ ರೇಷ್ಮೆಯಿಂದ ಮಾಡಲ್ಪಟ್ಟಿದ್ದ ಕಸಪರಿಕೆಯಿಂದ ಆತನ ಅಂಗಿ ಷರಾಯಿಗಳನ್ನು ಗುಡಿಸಿದಳು.

ಇದೇ ರೀತಿ ಹತ್ತು ನಿಮಿಷ ಇಂದ್ರಜಾಲ ಮಹೇಂದ್ರಜಾಲದ ಆಟಗಳನ್ನು ಆಡಿ ತೋರಿಸಿದ. ಒಂದು ಮಾತಿಲ್ಲ, ಒಂದು ಅವಸರ ಇಲ್ಲ. ಹೂವಿನಸರ ಎತ್ತಿದ ಹಾಗೆ ಜಾದೂ ಮಾಡಿದ.

ಕೈ ಜೇಬಿ ಗಾಜಿನ ಮುಷ್ಟಿಲಿ ಹಿಡಿದು, ಮುಷ್ಟಿ ಬಿಚ್ಚಿ ಪಾರಿವಾಳ, ಉಂಗುರ, ತಟ್ಟೆ ಬಟ್ಟಲು, ತೋರಿಸಿದ. ಈತ ನಮ್ಮೂರಿಗೆ ಬಂದಿದ್ದರೆ ಸುಖವಾಗಿ ಶಿಷ್ಯರನ್ನು ಸಂಪಾದಿಸಿ ಕೊಂಡು ಆರಸು ಜೀವನ ನಡೆಸಬಹುದಲ್ಲ! ಎಂದು ಅಂದುಕೊಂಡೆ.

ಜಾದೂಗಾರನ ನಿಷ್ಕ್ರಮಣ. ಆಮೇಲೆ ರಂಗಮಂಟಪವೇ ಎರಡು ಆಡಿ

ಮೇಲಕ್ಕೆದ್ದಿತು. ನೋಡಿದರೆ ಎರಡು ಅಡಿ ದಪ್ಪಗಿರುವ ಮಂಜಿನ ಗಡ್ಡೆಯ ದೊಡ್ಡ ಚಪ್ಪಡಿ ಅದು. ಇದೇನು ? ಮಂಜುಗಡ್ಡೆ ರಂಗದ ಮೇಲೆ ? ಗಿರಿಜಾ ಕಲ್ಯಾಣ ಆಡುತ್ತಾರೆಯೇ ಎನ್ನಿಸಿತು. ಮನಸ್ಸು ಹುಚ್ಚು ಹಾರುವ ಮುನ್ನ ಒಂದು ಗಂಡು ಒಂದು ಹೆಣ್ಣು ಹರಿದು ಬಂದು ನಿಂತುವು. ಪಾದಗಳಿಗೆ ಸ್ಕೇಟ್ಸ್ ಕಟ್ಟಿಕೊಂಡು ಮಂಜುಗಡ್ಡೆಯ ಮೇಲೆ ಅವರು ಜಾರಿ ಬಂದಾಗ, ನಾಲ್ಕು ಕಾಲುಗಳು ನಿಮಿರಿ ನಿಂತಿದ್ದುವು. ಆದರೂ ರಭಸದಿಂದ ಅವರು ಬಂದುದನ್ನು ನೋಡಿದರೆ ಸ್ಕೂಟರಿನಲ್ಲೂ ಈ ವೇಗ ಅಸಾಧ್ಯ ಎನ್ನುವಂತಿತ್ತು.

ಹರಿದುಬಂದು ಇಬ್ಬರೂ ಒಂದು ಕ್ಷಣ ರಂಗಸ್ಥಳದಲ್ಲಿ ನಿಂತರು. ದಂಪತಿಗಳು ಕೈ ಹಿಡಿದುಕೊಂಡು ನಿಲ್ಲುಲ್ಲವೇ ? ಅರುಂಧತಿ ನಕ್ಷತ್ರ ನೋಡುಕ್ಕೆ, ಹಾಗೆ ನಿಂತರು. ನಮ್ಮನ್ನೆಲ್ಲಾ ನೋಡಿದರು, ವಿನಿಮಯಕ್ಕಾಗಿ ನಾನೂ ಅವರನ್ನು ನೋಡಿದೆ.

ಅಳತೆ ತೆಗೆದುಕೊಳ್ಳದೆ ಷರಾಯಿ ಹೊಲಿಸಿಬಿಟ್ಟರು ಅನ್ನಿ. ಅದೇ ತರಹ ಮುಚ್ಚಂಗಿಯನ್ನೂ ಹೊಲಿಸಿದರು ಅನ್ನಿ. ಆಮೇಲೆ ಉಡುಪುಗಳನ್ನೂ ದೋಭೀಗೆ ಹಾಕಿದರು ಅನ್ನಿ. ಹೊಲಿಸಿದ ಬಟ್ಟೆ ಸಾನ್‌ಫ಼ೊರೈಸ್ಡ್ ಅಲ್ಲ ಅನ್ನಿ. ಮಡಿ ಉಡುಪು ದೋಭಿಯಿಂದ ಬಂದಮೇಲೆ ಒಂದು ಷರಾಯಿ ಒಂದು ಮುಚ್ಚಂಗಿಯಲ್ಲಿ ಒಬ್ಬನನ್ನು ಎರಕ ಹೊಯ್ದ ಹಾಗೆ ತೂರಿಸುಕ್ಕೆ ಸಾಧ್ಯವಾಯಿತು ಅನ್ನಿ. ಅದೇ ತರಹ ಇನ್ನೊಂದು ಷರಾಯಿ ಮುಚ್ಚಂಗಿಯೊಳಕ್ಕೆ ಒಂದು ಹೆಣ್ಣನ್ನು ಹುಯ್ದರು ಅನ್ನಿ. ಅಲ್ಲಿ ಇಲ್ಲಿ ಅದುಮಿ ಅಮುಕಿ ಉಡುಪಿನೊಳಕ್ಕೆ ತುಂಬಿದರು ಅನ್ನಿ. ಉಡುಪು ಧರಿಸಿದ ಗಂಡು ಹೆಣ್ಣು ಎದ್ದು ನಿಂತರೆ ಎಲ್ಲೆಲ್ಲಿ ಬಟ್ಟೆ ಹರಿದುಹೋಗಿ ಏನೇನು ಅನಾಹುತ ಆಗಿ ಬಿಡುತ್ತೋ ಅಂತ ಹೆದರಿಕೆ ಆಗುಲ್ಲವೇ ? ಆ ರೀತಿ ಸ್ಕೇಟರ್‌ಹೆಣ್ಣು ಉಡುಪು ಧರಿಸಿದ್ದಳು. ಚರ್ಮದ ಮೇಲೆ ಬಟ್ಟೆಯ ಚರ್ಮ ಇದ್ದಂತೆ ಕಂಡಿತು. ಮೇಲಹಾಲು ಹಾಕದೆ ಮೂರು ಮಕ್ಕಳನ್ನೂ ಸಾಕಿ ಬೆಳೆಸಿರಬಹುದು ಎನ್ನಿಸಿತು. ಸ್ಕೇಟರ್ ಹುಡುಗನದೋ ಮಗುವಿನ ಮುಖ, ಹಸುಗೂಸಿನ ನಿರ್ಮಲ ಮುಖ. ಸಾಕ್ಷಾತ್ ಪುಟ್ಟಗೊಮ್ಮಟನಂತೆಯೇ ಕಂಡ.

ಮಂಜುಗಡ್ಡೆಯ ಚಪ್ಪಡಿಯಮೇಲೆ ಇಬ್ಬರೂ ಅಪ್ಪಾಲೆ ತಿಪ್ಪಾಲೆ ಆಡುಕ್ಕೆ ಶುರು ಮಾಡಿದರು. ಮೊದಲು ಮಂದ್ರಸ್ಥಾಯಿಯಲ್ಲಿ ಆಟವಾಡಿದರು.

ಅ ಪ್ಪಾ ಲೇ ತಿ ಪ್ಪಾ ಲೆ

ಹೊ ರ ಮ ನೆ ಯೆ ಲ್ಲಾ ಕ ತ್ತಾ ಲೆ

ಅ ಪ್ಪಾ ಲೇ ತಿ ಪ್ಪಾ ಲೆ

ಬಿ ರಿ ಮ ನ ಸೆ ಲ್ಲಾ ಬೆ ತ್ತಾ ಲೆ

ಸುರಳಿ ಸುರಳಿ ಹರಿದಾಡಿದರು. ಎದುರು ಬದುರು ಬಳುಕಾಡಿದರು. ಜೋಡಿ ಜೋಡಿ ಹಾವುಗಳಂತೆ ಸರಿದಾಡಿದರು.

ಅಪ್ಪಾಲೆ ತಿಪ್ಪಾಲೆ
ಅಂಗೈ ಮುಂಗೈ ಚಪ್ಪಾಳೆ
ಅಪ್ಪಾಲೆ ತಿಪ್ಪಾಲೆ
ಹಿಂಗೈ ಮುಂಗೈ ಚಪ್ಪಾಳೆ

ಅಂತ ಚಪ್ಪಾಳೆ ಹಾಕುತ್ತಾ ಕುಣಿದಾಡಿದರು.

ಆಮೇಲೆ ಎರಡನೆ ಕಾಲದಲ್ಲಿ ಕುಣಿದಾಡಿದರು.

ಅಪ್ಪಾಲೇ ತಿಪ್ಪಾಲೇ ಹೊರಮನೆಯೆಲ್ಲಾ ಕತ್ತಾಲೆ
ಅಪ್ಪಾಲೇ ತಿಪ್ಪಾಲೇ ಒಳಮನಸೆಲ್ಲಾ ಬೆತ್ತಾಲೆ.

ಮೂರನೇ ಕಾಲದಲ್ಲಿ ಕುಣಿದಾಡುಕ್ಕೆ ಶುರುಮಾಡಿದಾಗ, ಆಕೆಯ ಬಲಗಾಲು ತೊಡೆ ಎಲ್ಲವೂ ನೆಲದ ಮೇಲೆ ಬಿದ್ದಂತಾದಾಗ, ಹಿಂದುಗಡೆಗೆ ಎಡಗಾಲು ತೊಡೆ ಬಿದ್ದಂತೆ ಕಾಣಿಸಿತು. ಅವ್ವಾ ! ಹರಿದು ಹೋಗುತ್ತಲ್ಲಾ ಎಂದು ಚಕಿತನಾಗುವ ಹೊತ್ತಿಗೆ, ಆಕೆ ಕತ್ತರಿ ತರಹ ಕಾಲುಗಳನ್ನು ಸೆಳೆದುಕೊಂಡು ಜಿಂಕೆಯಂತೆ ನಿಂತು ಕಣ್ಣು ಹೊಳಪಿಸುತ್ತಿದ್ದಳು. ಆಗ ನನಗೆ ಅರ್ಥವಾಯಿತು. ಇವರು ಹಾಕಿಕೊಂಡಿರುವ ಬಟ್ಟೆ ಉಡುಪೆಲ್ಲಾ ರಬ್ಬರಿನದಿರಬೇಕು ಅಂತ.

ಆತ ಏನು ಮಾಡಿದ ಅಂತ ? ಒಂದು ಸುತ್ತು ಸುರುಳಿ ಸುತ್ತಿದ, ಇವಳ ಕೈ ಹಿಡಿದುಕೊಂಡು. ಆ ಮೇಲೆ ಹಠಾತ್ತನೆ ಅವಳನ್ನು ಹಾರಿಸಿಯೇ ಬಿಟ್ಟ. ಕವಣೆಕಲ್ಲು ಹೊಡೆಯುವದಕ್ಕೆ ನಾವು ಸುತ್ತಿಸುವುದಿಲ್ಲವೇ ಹಾಗೆ ಆಕೇನ ತನ್ನ ಸುತ್ತಲೂ ಮೂರು ಬಾರಿ ಗಾಳಿಯಲ್ಲಿ ಸುತ್ತಿಸಿಯೇ ಬಿಟ್ಟ. ಆಮೇಲೆ ಹಗೂರಾಗಿ ಇಳಿಸಿದಾಗ ಆಕೆಗೆ ತಲೆ ಚಕ್ಕರ್ ಬಂದಿರುತ್ತೇನೋ ಎಂದುಕೊಂಡಿದ್ದೆ. ಇಲ್ಲ, ತಲೆಯ ಬದಲು ಸೊಂಟಕ್ಕೆ ಬಂದಿತ್ತು ಚಕ್ಕರ್. ನಿಂತಲ್ಲೆ ಆಕೆ ಮೂರು ಸುತ್ತು ಸೊಂಟವನ್ನು ಸುತ್ತಿಸಿದಳು. ನಂತರ ಹರಿದಾಡಿದಳು.

ಜನರೆಲ್ಲಾ ಚಪ್ಪಾಳೆ ತಟ್ಟಿ ತಮ್ಮ ಮೆಚ್ಚಿಗೆಯನ್ನು ಸೂಸಿದಾಗ, ಸ್ಕೇಟರ್ ಜತೆಯು ಮುಕ್ತಾಯವನ್ನು ನುಡಿಸಿತು ಎಂದು ಗೊತ್ತಾಯಿತು.

ಅದಾದ ಮೇಲೆ ರಂಗಸ್ಥಳವನ್ನು ಮುಂದಿನ ಕಾರ್ಯಕ್ರಮಕ್ಕೆ ಸಿದ್ಧಪಡಿಸುವುದಕ್ಕಾಗಿ ಹೊರ ತೆರೆಯನ್ನು ಇಳಿಸಿದರು.

ರಂಗಸ್ಥಳದ ಮುಂದೆ ಎಂಟು ಹತ್ತು ಅಡಿ ಅಗಲ, ಹತ್ತು ಹನ್ನೆರಡು ಅಡಿ ಉದ್ದ ಜಾಗ ಖಾಲಿಯಾಯಿತು. ಬ್ಯಾಂಡ್ ಬಾರಿಸುತ್ತಿತ್ತು. ಕುಣಿದವರನ್ನು ನೋಡಿದ ಮೇಲೆ ಕಂಡವರು ಸುಮ್ಮಗೆ ಕೂರುಕ್ಕಾಗುತ್ತದೆಯೇ ?

ಪ್ರೇಕ್ಷಕರು ಜತೆ ಹೊಂದಿಸಿಕೊಂಡು ಆ ಕಿಷ್ಕಿಂಧೆಯಲ್ಲೇ ಕುಣಿಯುಕ್ಕೆ ಆರಂಭಿಸಿದರು. 60ರ ಹೋತ ಹದಿನಾಗರ ಹರಿಣಿ ಜತೆ, 50 ಮುದುಕಿ 17ರ ಅಭಿಮನ್ಯು ಜತೆ, 5 ಅಡಿ ಎತ್ತರವ ಗರುಡಿಯಾಳು ಆರಡಿ ಎತ್ತರದ ಕನ್ನೆಯೊಡನೆ, 6 ಅಡಿ ಸೈಂಧವ 4 ಅಡಿಯ ಕಂಚಿಕಡಸಿನ ಜತೆ, ಹೀಗೆ 20-30 ಜತೆಗಳು ಕುಣಿಯುಕ್ಕೆ ಆರಂಭಿಸಿದುವು. ಎಂಟು ಜನ ಕೂಡ್ರುವ ರೈಲು ಗಾಡಿಯಲ್ಲಿ ಹದಿನೆಂಟು ಜನ ಸಾಮಾನು ಜತೆ ಕೂಡುವುದಿಲ್ಲವೇ ಹಾಗೆ ಎಂಟು ಜತೆ ನಿಲ್ಲಬಹುದಾದ ಸ್ಥಳದಲ್ಲಿ ಇಪ್ಪತ್ತೆಂಟು ಜತೆ ನರ್ತನಕ್ಕೆ ನಿಂತಿದ್ದುವು.

ಮುಂದೆ ಹೆಜ್ಜೆಯಿಟ್ಟರೆ ಒಂದು ಜೋಡಿ, ಹಿಂದೆ ಹೆಜ್ಜೆ ಸರಿದರೆ ಅಲ್ಲೊಂದು ಹಿಂದೆ ವಾಲಿದರೆ ಪಕ್ಕಕ್ಕೆ ಅಲ್ಲೊಂದು ಜತೆ ಸ್ಥಿತಿ ಹೀಗಿದ್ದರೂ ನಿಂತಲ್ಲೇ ಕುಲುಕುತ್ತ ಸಕ್ಕು ಸಂತೋಷಪಡುತ್ತಿದ್ದರು.

ರಂಗಮಂಟಪದ ಸಿದ್ಧತೆ ಆಯಿತು. ಹೊರ ತೆರೆಯ ಅನಾವರಣ ಆಯಿತು. ಮೂವತ್ತು ಅಡಿ ಉದ್ದ, ಹತ್ತು ಅಡಿ ಅಗಲ, 8-10 ಅಡಿ ಆಳದ ಗಾಜಿನ ಕೊಳವೊಂದನ್ನು ರಂಗ ಮಂಟಪದ ಮೇಲೆ ತಂದರು. ಅದರಲ್ಲಿ ಧಡೂತಿ ನೀರುಸಿಂಹ ಆಡುತ್ತಿತ್ತು. ಅದರ ಮಾಲೀಕ ಯಥಾಪ್ರಕಾರ ಪಾಶ್ಚಾತ್ಯ ಮದುವೆಗಂಡಿನ ಉಡುಪು ಧರಿಸಿ ನೀರುಸಿಂಹದ ಕೈಲಿ ರಾಗಮಾಲಿಕೆ ಬಾರಿಸುವುದು, ಮೂಗಿನ ಮೇಲೆ ಚೆಂಡನ್ನು ಬೀಳಿಸದಂತ ಇರಿಸಿಕೊಳ್ಳುವುದು. ಈಜಾಡುವುದರ ಹಲವು ವಿಧಾನಗಳನ್ನು ತೋರಿಸುವುದು ಇವೆಲ್ಲವನ್ನು ಮಾಡಿಸಿದ.

ನೀರಿನಲ್ಲಿ ಆಟ ತೋರಿಸಿದಮೇಲೆ ನೀರುಸಿಂಹವನ್ನು ಹೊರಕ್ಕೆ ಬರಿಸಿ, ಅದರ ಮುಖಕ್ಕೆ ಮುತ್ತಿಟ್ಟ. ಅದು ಮುಖ ಕೊಡವಿಕೊಂಡು ಜುಗುಪ್ಸೆ ತೋರಿಸಿದಾಗ, ನವ ತರುಣಿಯೊಬ್ಬಳು ಬಂದಳು. ಅದರ ಬಾಯಿಗೆ ತನ್ನ ಬಾಯಿಟ್ಟು ಮುತ್ತಿಟ್ಟಳು. ಆಗ ಈ ನೀರು ಸಿಂಹ ಉಪ್ಪಿನಕಾಯಿ ರುಚಿ ಕಂಡವರಂತೆ ಚಪ್ಪರಿಸಿತು.

ಪಕ್ಕದಲ್ಲಿ ಕೂಡ ಯಾರೋ ಚಪ್ಪರಿಸಿದಂತಾಯಿತು. ತಿರುಗಿನೋಡಿದರೆ ಮುಪ್ಪಿನ ಅಮೆರಿಕನ್ ದಂಪತಿಗಳು, ಕೃತಕ ದಂತಾವಳಿಗಳ ಸಹಾಯದಿಂದಲೇ ಮುತ್ತಿಟ್ಟುಕೊಳ್ಳುತ್ತಿದ್ದರು. ನೀರುಸಿಂಹದಿಂದ ಗ್ರಾಮಸಿಂಹದ ತನಕ ಮುತ್ತಿಡುವುದು ಸಾಂಕ್ರಾಮಿಕ ಜಾಡ್ಯ, ಒಬ್ಬರಿಂದ ಒಬ್ಬರಿಗೆ ಹರಡುತ್ತೆ ಎಂಬ ಪಾಠವನ್ನು ಕಲಿತೆ.

ಒಂದಡಿ ಉದ್ದ 4 ಅಂಗುಲ ದಪ್ಪ ಇದ್ದ ಜೀವಂತ ಮೀನನ್ನು ಮಾಲಿಕ ನೀರುಸಿಂಹಕ್ಕೆ ಬಹುಮಾನವಾಗಿ ಎಸೆದ. ಗಾಳಿಯಲ್ಲೇ ಬಾಯಲ್ಲಿ ಹಿಡಿದು ಆ ದರಿದ್ರ ಮುಂಡೇದು ಅನಾಮತ್ತು ನುಂಗೇ ಬಿಡೋದೇ.

ನರ್ತಕಿಯರು ಮೊದಲು ಬಂದು ನರ್ತನ ಮಾಡಿದಾಗ, ಹಾವ ಭಾವಗಳನ್ನು ನೋಡಲು ಮುಖವನ್ನೇ ನೋಡಿ ಪೆಚ್ಚಾದ್ದಾಗಿನಿಂದ, ಇನ್ನೊಂದು ಅವಕಾಶ ಬಂದರೆ ಸದುಪಯೋಗ ಮಾಡಿಕೊಳ್ಳಬೇಕು ಎಂದು ತೀರ್ಮಾನಿಸಿದ್ದೆ. ಆದರೆ ಜಾದೂಗಾರ

ಸ್ಕೇಟಿಂಗ್ ಜತೆಗಳು, ನೀರುಸಿಂಹದ ಮೋಜು ಇವನ್ನೇ ಕಂಡಿದ್ದೆ. ಮುಂದೇನು ಮಂಗಳ ಹಾಡಿಬಿಡುತ್ತಾರೇನೋ ಎಂದು ಹೆದರಿದೆ.

ಹೊರ ತೆರೆಯನ್ನೆತ್ತಿದಾಗ ಝುಗಿ ಝುಗಿ ಝುಗಿಯುತ್ತಾ ಒಬ್ಬಾಕೆ ನೆಟ್ಟಗೆ ಓಡಿಬಂದಳು. ಬಲು ತೆಳ್ಳಗಿದ್ದ ಹಸಿರು ಬಣ್ಣದ ಹೊಳೆಯುವ ಮೇಲ್‌ಧಾವಣಿಯನ್ನು ಹೊದ್ದುಕೊಂಡಿದ್ದಳು. ರಂಗ ಮಂಟಪದ ಮುಂದೆ ಮುಂದಕ್ಕೆ ಬಂದಳು. ಯಾರೋ ಪಾಪ ! ಬಳಲಿದ ಬಾಣಂತಿ, ತೊಟ್ಟಿಲಲ್ಲಿ ಮಗುವು ಅಳುತ್ತಿದೆ ಎಂದು ಬಚ್ಚಲುಮನೆಯಿಂದ ಮೈಯನ್ನೂ ಒರೆಸಿಕೊಳ್ಳದೆ ಓಡಿಬರುತ್ತಿದ್ದ ಹಾಗೆ ಇತ್ತು. ಬಂದವಳು ಮೇಲು ಧಾವಣಿಯನ್ನು ತೆಗೆದು ಎಸೆದಳು. ಕುಣಿದಾಡಿದಳು. ಎಳೆ ಮಗುವು ಯಾವಾಗ ಅಳುತ್ತೊ, ಅದರ ಹಸಿವನ್ನು ಪೂರೈಸಲು ಸಿದ್ಧವಾಗಿರಬೇಕು ಎಂದು ಆಕೆ ಪೂರ್ವ ಸಿದ್ಧತೆಯನ್ನು ಪೂರ್ಣವಾಗಿ ಮಾಡಿಕೊಂಡಂತಿತ್ತು. ಸತಿ ಅನುಸೂಯ ತರಹ ಹಳೇ ಸಿನಿಮಾದಲ್ಲಿ.

ಈಕೆಯ ಬಾಣಂತಿ ಕುಣಿತ ಮುಗಿಯುವ ಹೊತ್ತಿಗೆ ಹಿಂದಿನಿಂದ ಒಂದು ದಂಡೇ ರಂಗಮಂಟಪದ ಮೇಲಕ್ಕೆ ಜಿಗಿಯುತ್ತಾ ಬಂತು. ಹೆಣ್ಣುಗಳ ದಂಡು. ವಸ್ತ್ರಾಪಹರಣ ಮಾಡಿ ಮರದ ಮೇಲೆ ಹತ್ತಿ ಕೂತಿರುವ ಕೃಷ್ಣ ; ನದಿಯಿಂದ ಸ್ನಾನ ಮಾಡಿ ಬಂದ ಗೋಪಿಕಾ ಸ್ತ್ರೀಯರು. ಈ ದೃಶ್ಯ ಚಿತ್ರವನ್ನು ನೋಡಿದ್ದೀರಲ್ಲಾ. ಅದೇ ತರಹಾ ಇತ್ತು ಈ ಹೆಣ್ಣು ದಂಡು. ಲೀಡೋದವರು ಇನ್ನೂ ದ್ವಾಪರ ಯುಗದಲ್ಲೇ ಇದ್ದಾರೆ. ನಾವು ಮುಂದುವರೆದು ಕಲಿಯುಗಕ್ಕೆ ಬಂದಿದ್ದೇವೆ ಎನ್ನುವುದಕ್ಕೆ ಸಾಕಷ್ಟು ಪುರಾವೆಗಳು ದೊರಕಿದುವು. ಶ್ರೀಕೃಷ್ಣ ಪರಮಾತ್ಮ ಲೀಡೋದಲ್ಲೇ ಇರಲಿ. ನಮ್ಮೂರಿಗೆ ಬರದೇ ಇರಲಿ ಎಂದು ಹರಕೆ ಹೊತ್ತೆ. ಯಾಕೆ ಗೊತ್ತೆ ? ಅಲ್ಲಿದ್ದ ಅನುಭವಿಗಳೊಬ್ಬರು ಹೇಳಿದರು ; ಲೀಡೋದಲ್ಲಿ ಕಂಡಿದ್ದೆ ಮುಂದೆ ನಾಡಿನಲ್ಲಿ ಫ್ಯಾಶನ್ ಆಗುತ್ತೆ ಅಂತ. ಒಂದು ಗ್ರಹಣದ ದಿವಸ ಅಥವಾ ಮಳೆ ತುಂಬಾ ಬಂದ ದಿವಸ ಈ ನೋಟವನ್ನು ತಡೆದುಕೊಳ್ಳಬಹುದು. ದಿನ ಬೆಳಗಾದರೆ ಇದೇ ಕಂಡರೆ ಕಾಡಿಗೆ ಹೋಗೋದೇ ಕ್ಷೇಮ. ಅಥವಾ ಮೀಶೆ ಗಡ್ಡ ಬೆಳೆಸಿ ಋಷಿಗಳಾಗಲೇ ಬೇಕು.

ಎರಡನೆ ಝೂಮದ ಆಟ ಮುಗಿದಮೇಲೆ ಎಲ್ಲರೂ ಹೊರಬಿದ್ದರು. ಜತೆಯವರೊಡನೆ ಕೂಡಿಕೊಂಡು ಹಿಂತಿರುಗುವಾಗ ಹೇಳಿದೆ. ''ಯಾಕೋ ? ಹಸಿವಾಗ್ತಾ ಇದೆಯಲ್ಲ. ಇಲ್ಲೇನಾದರೂ ಪಾಣಿಪೂರಿ ಅಥವಾ ಬೇಲ್‌ಪೂರಿ ರಸ್ತೆ ಅಂಚಿನಲ್ಲಿ ಸಿಗಬಹುದೇ'' ಎಂದೆ. ಆ ಚುರುಕು ದೃಶ್ಯಗಳನ್ನು ನೋಡಿದ ಮೇಲೆ ಹೊಟ್ಟೆಗೆ ಬೆಂಕಿ ಹಾಕಿದ ಹಾಗಾಯ್ತು. ನನಗೂ ಹಸಿವು ಎಂದ ಒಬ್ಬ ಗೆಳೆಯ. ''ನೃತ್ಯ ನೋಡ್ತಾ ಇದ್ದಾಗ ತಾಳ ಹಾಕ್ತಾ ಇದ್ದ ಹಾಗಿತ್ತು. ಹೊರಗೆ ಬಂದ ಮೇಲೆ ಕೂಡ ತಾಳ ಹಾಕ್ತಾನೇ ಇತ್ತು. ಲೀಡೋದ ಘಂ ಘಂ ನೆನಪಿರಬಹುದು ಎಂದುಕೊಂಡಿದ್ದೆ. ನೀವು ಹೇಳಿದಮೇಲೆ ಈಗ ಅರ್ಥವಾಗ್ತಾ ಇದೆ. ತಾಳ ಹಾಕ್ತಾ ಇರೋದು ನನ್ನ ಹೊಟ್ಟೆ ಅಂತ ಇನ್ನೊಬ್ಬ ಹೇಳಿದ.

ಮಗದೊಬ್ಬ ಎಚ್ಚರಿಕೆ ಕೊಟ್ಟ. ಈ ಅವೇಳೆಯಲ್ಲಿ ಹೋಟೆಲಿಗೆ ಹೋಗೋದು ಬರೀ ಹೊಟ್ಟೆ ಹಸಿವಿಗಲ್ಲ. ದ್ವಾಪರ ಯುಗದ ಯಾದವ ನಾಟವನ್ನು ಆಡುವ ಮೊದಲು ಚಕ್ಕಂವದ ತಿನ್ನುಕ್ಕೆ. ಬೇರೆಮನೆ ತಿಂಡಿಗಳ ತರಹ. ಹೋದಗೀದರೆ ಕುಚೇಲ ಕೃಷ್ಣನನ್ನು ನೋಡುವುದಕ್ಕೆ ಹೋಗುವ ಮುಂಚೆ ಇದ್ದ ಹಾಗೆ ಆಗಿಬಿಡ್ತೀರಿ. ತೆಪ್ಪನೆ ನಮ್ಮ ಹೋಟೆಲಿಗೆ ಹೋಗೋಣ ಅಂದ. ಹ್ಞೂ ಅಂದೆವು.

ಬೆಳಗ್ಗ ಎದ್ದು ಕರಾಗ್ರ ವಸತೆ ಲಕ್ಷ್ಮಿ ಎಂದು ಕಣ್ಣುಜ್ಜಿಕೊಂಡಾಗ ಗಡಿಯಾರ ಒಂಭತ್ತು ತಾಸನ್ನು ತೋರಿಸುತ್ತಿತ್ತು.

# ಪ್ಯಾರಿಸ್ಸಿನಲ್ಲಿ ಎರಡನೆ ರಾತ್ರಿ

ಪ್ಯಾರಿಸ್ಸಿನಲ್ಲಿ ಮೊದಲ ರಾತ್ರಿ ಕಳೆದು ನಿದ್ರೆ ಸಾಲದಿದ್ದುದರಿಂದ, ಬೆಳಗಾದಾಗ ಕಣ್ಣುಗಳು ಉರಿಯುತ್ತಿದ್ದುವು. ಆಸ್ಪತ್ರೆಗಳನ್ನು ನೋಡಿಕೊಂಡು ಬರುವ ಉತ್ಸಾಹದಲ್ಲಿ ಕಣ್ಣುಗಳನ್ನು ಉಜ್ಜಿಕೊಂಡೇ, ದಿನವನ್ನು ಕಳೆದೆ. ಜೈನರ ತರಹ ರಾತ್ರಿ ಬೇಗ ಊಟ ಮಾಡಿ ಮಲಗಿಬಿಡೋಣ ಅಂತ ತೀರ್ಮಾನಿಸಿದ್ದೆ.

ಆದರೆ ಊಟ ಮುಗಿದಾಗ ತೆಲುಗು ಸೋದರನೊಬ್ಬ ನನಗೆ ಗಂಟು ಬಿದ್ದ. ಅವನಿಗೆ ಅರವತ್ತರ ಪ್ರಾಯ. ಹಿಂದಿನ ರಾತ್ರಿ ಅವನು ಹೋಟಲಿನಲ್ಲೇ ಬೇಗ ಮಲಗಿದ್ದ. ನಾವೆಲ್ಲಾ ಲೀಡೋಗೆ ಹೋಗಿ ಬಂದುದು ಅವನಿಗೆ ಗೊತ್ತಾಗಿತ್ತು. ಆ ಕಾರಣ ಅವ ನನ್ನನ್ನು ಹಿಡಿದು "ಬಾರಯ್ಯಾ ! ಇವತ್ತು 'ಫೋಲೀಸ್ ಬರ್ಜರ್'ಗೆ ಹೋಗಿ ಬರೋಣ, ಇಷ್ಟು ದೂರ ಬಂದು, ಪ್ಯಾರಿಸ್ಸಿನಲ್ಲಿ ಇದ್ದು, ಏನೂ ನೋಡದೆ ಹಿಂತಿರುಗಿದರೆ ಚಿಕೋ ಅನ್ನಿಸುತ್ತೆ. ಅಲ್ಲದೆ ಊರಿಗೆ ಹೋದಮೇಲೆ, ಹೆಂಡತಿ ಕೇಳಿದಾಗ ಏನು ನೋಡಿಕೊಂಡು ಬಂದ್ರಿ ಅಂತ. ಆಗ ಏನು ಹೇಳೋದು ?" ಎಂದು ಪುಸಲಾಯಿಸುಕ್ಕೆ ಶುರುಮಾಡಿದ. "ಪ್ರಾಚೀನ ಕರ್ಮ ! ನೋಡೋದಾದರೆ ನೋಡಬಹುದು. ನಾವು ನೋಡಿದನ್ನ ತಿಳಿದವರ್‍ಯಾರೂ ನೋಡೋದಿಲ್ಲ ವಲ್ಲ! ಅಂದಮೇಲೆ ಅವಮಾನ ಏನು ? ಆದರೆ ಊರಿಗೆ ಹೋಗಿ ಧರ್ಮಪತಿ ಎದುರಿಗೆ ಕೂತು ಇಂತಿಂತಹದನ್ನೆಲ್ಲಾ ಈ ಕಣ್ಣುಗಳಿಂದಲೇ ನೋಡಿದೆ ಅಂತ ಹೇಳಬಹುದೇ ? ಹಾಗೆ ಕೇಳಿದಾಗ ಆಕೆ ಧರ್ಮಕ್ಕೆ ಸಿಕ್ಕ ಪತ್ನಿಯಾಗಿರುವುದರಿಂದ ಕಸಪರಿಕೆ ತೆಗೆದುಕೊಂಡು ಮುಖಾನ ಗುಡಿಸುಲ್ವೇ ? ಹೀಗೆಲ್ಲಾ ನನ್ನ ಮನಸ್ಸಿಗೆ ತೋಚಿತು. ಅದರ ಜತೆಗೇ ಅನ್ನಿಸಿತು ; "ಹೆಂಡತಿ ಎದುರಿಗೆ ಇದನ್ನೆಲ್ಲಾ ನಾಚಿಕೆಯಿಲ್ಲದೆ ಹೇಳಿಕೊಳ್ಳುವ ಈ ಪೆಂಗ ಇನ್ನೇನೇನು ಪೆಚ್ಚುತನ ಮಾಡ್ತಾನೋ, ನೋಡೋಣವೇ" ಅನ್ನಿಸಿತು.

ಆದರೂ ಕಣ್ಣುರಿ. ಸ್ವಲ್ಪ ಜಾಣತನ ಉಪಯೋಗಿಸಿದೆ. "ನೋಡಯ್ಯಾ ! ಮಿತ್ರ ! ನನ್ನ ಹತ್ತಿರ ಹಣವಿಲ್ಲ, ಬಡವ ನಾನು. ನನ್ನ ಹಿಡಿದುಕೊಂಡು ಯಾಕೆ ಸತಾಯಿಸ್ತೀ" ಎಂದು

ನಮ್ಮ ಸರ್ಕಾರದ ತರಹಾನೇ ಸಬೂಬು ಹೇಳಿದೆ. ಆತನ ಆತುರ ಅಸಾಧ್ಯ ? ''ಅದಕ್ಕೆ ಯಾಕೆ ಯೋಚನೆ ? ನನ್ನ ಖರ್ಚಿನಲ್ಲೇ ಹೋಗೋಣ'' ಎಂದು ತಕ್ಷಣ ಹೇಳಿದ.

''ಪುಕಟ್ಟು ಸಿಗೋದಾದರೆ ಚಿಕ್ಕಪ್ಪನ್ನ ಕರಕೊಂಡು ಬರ್ತೀನಿ'' ಅಂತ ತೆಲುಗಿನಲ್ಲಿ ಒಂದು ಗಾದೆ ಇದೆ. ಈ ಗಾದೆಯ ಜ್ಞಾಪಕಕ್ಕೆ ಬಂತು. ''ಆಗಲಪ್ಪ ಹೋಗೋಣ'' ಎಂದು ಒಪ್ಪಿಕೊಂಡೆ.

ತೆಲುಗು ಮಿತ್ರ ಬಲು ಬೇಗ ಶೃಂಗಾರ ಮಾಡಿಕೊಂಡ. ಜೇಬಿನಿಂದ ನಾಲ್ಕು ಯಾಲಕ್ಕಿ ಕಾಳು ತೆಗೆದು, ನನಗೆ ಕೊಡುತ್ತಾ ''ಮೈಗೆ ಒಳ್ಳೇದು, ಎರಡು ಬೀಜ ಬಾಯಿಗೆ ಹಾಕಿಕೋ'' ಎಂದು ಹೇಳಿದ. ಯಾಲಕ್ಕಿ ಅಗಿಯುತ್ತಾ ಇಬ್ಬರೂ ನಿಶಾಚರರಂತೆ ''ಪೋಲೀಸ್ ಬರ್ಜರ್'' ಕಡೆಗೆ ಹೊರಟೆವು.

''ಪೋಲೀಸ್ ಬರ್ಜರ್'' ಮಂದಿರಕ್ಕೆ ಹೋದಾಗ, ತೆಲುಗು ಮಿತ್ರ ನನ್ನ ಕೈಲಿ ಹಣ ಕೊಟ್ಟು ''ನೀನೇ ಟಿಕೆಟ್ ತೆಗೆದುಕೊಪ್ಪ, ಆ ಹೆಂಗಸಿನ ಹತ್ತಿರ ಹೋಗಿ ಎರಡು ಟಿಕೆಟ್ ಕೊಡಿ ಎಂದು ಕೇಳಲು ನಾಮಾನಿಕೆ'' ಎಂದ. ಇಷ್ಟನ್ನು ಹೇಳುವಾಗಲೇ, ಅವ ಬೆವತು ನೀರಾಗಿದ್ದ. ಮುಖ ನೋಡಿಯೇ ಮೈ ಬೆವರೋ ಈ ಗಂಡು ಯಾಕಾರೋ ಬಂದ ? ಎಂದು ಶಂಕೆಯೇನೋ ಬಂತು. ಆದರೂ ಕಾಲ ಮೀರಿ ಹೋಗಿತ್ತು. ನಾನೇ ಮುಂದೆ ಹೋಗಿ ಟಿಕೆಟ್ ತೆಗೆದುಕೊಂಡೆ. ಒಬ್ಬೊಬ್ಬರಿಗೂ ಇಪ್ಪತ್ತು ಇಪ್ಪತ್ತು ರೂಪಾಯಿ ಅಂತ ಕಸಿದುಕೊಂಡರು. ಉದ್ದಾನೆ ತೋಳು ರವಿಕೆ, ಮತ್ತು ಚಡ್ಡಿ ಧರಿಸಿದ ಹುಡುಗಿಯೊಬ್ಬಳು ನಮ್ಮನ್ನು ಕರೆದುಕೊಂಡುಹೋಗಿ ನಮ್ಮ ನಮ್ಮ ಸ್ಥಳಗಳಲ್ಲಿ ಕೂರಿಸಿದಳು. ಕೂರಿಸಿ ನಮ್ಮನ್ನೇ ನೋಡುತ್ತ, ಕೈಯನ್ನು ಮುಂದೆ ಹಿಡಿದಳು. ಹತ್ತು ರೂಪಾಯಿನಷ್ಟು ಹಣವನ್ನು ಭಕ್ಷೀಷ್ ಅಂತ ಕೊಟ್ಟೆ. ನನ್ನದಲ್ಲವಲ್ಲಾ ಹಣ ! ಧಾರಾಳವಾಗಿರಬಹುದಲ್ಲ ? ಆದರೆ ತೆಲುಗು ಮಿತ್ರ ಮುಖ ಶಿಂಡರಿಸಿಕೊಂಡ. ''ಅಷ್ಟು ಹಣ ಭಕ್ಷೀಷ್ ಕೊಡೋದೇನಯ್ಯಾ ?'' ಎಂದು ಗೊಣಗುಟ್ಟಿದ. ''ಅಲ್ಲಯ್ಯಾ ಮಿತ್ರ ! ಹಾಕಿಕೊಳ್ಳುಕ್ಕೆ ಪಾಪ ! ಆಕೀಗೆ ಲಂಗ ಇಲ್ಲ, ಬರೀ ಚಡ್ಡಿ ಧರಿಸಿದ್ದಾಳೆ. ಈ ಊರಿನಲ್ಲಿ ಛಳಿ ಹೆಚ್ಚು ಅದಮೇಲೆ ಎಷ್ಟು ಕಷ್ಟ ಪಡ್ತಾ ಇರಬೇಕು, ಅವಳು. ಬಡವೆ, ಅಂತ ತೋರಿತು, ಅದಕ್ಕೇ ಸ್ವಲ್ಪ ಹಣ ಹೆಚ್ಚಾಗಿ ಕೊಟ್ಟಿರಬಹುದು.'' ಎಂದು ಸಮಾಧಾನ ಹೇಳಿದೆ. ''ಊರಿನಲ್ಲಿದ್ದಾಗ ಪತ್ರಿಕೆಗಳಲ್ಲಿ ಓದಿದ್ದೆ. ಪ್ಯಾರಿಸ್ಸಿನ ರಾತ್ರಿ ಮಂದಿರಗಳಲ್ಲಿ ಭಕ್ಷೀಷ್ ಕೊಡೋವಾಗ ಅವರನ್ನು ಹಗೂರಾಗಿ ಜಿಗುಟಲೂಬಹುದು'' ಅಂತ. ''ನೀನು ಕೊಟ್ಟ ಭಕ್ಷೀಷಿಗೆ ನಾವಿಬ್ಬರೂ ಅವಳನ್ನು ಸ್ವಲ್ಪ ಜಿಗುಟಬಹುದಾಗಿತ್ತಲ್ಲಯ್ಯಾ'' ಎಂದು ತೆಲುಗು ಮಿತ್ರ ಸಂತಾಪಪಡುಕ್ಕೆ ಶುರು ಮಾಡಿದ. ''ಅಯ್ಯಾ ! ಪೆಂಗ ! ಯಾವುದೋ ಊರಿನಲ್ಲಿ ಇದೇವೆ. ಈ ಕರೀ ಬೆರಳುಗಳಿಂದ, ಹಾಲು ಬೆಳ್ಳಗಿರುವ ಆಕೆಯನ್ನು ಜಿಗುಟಬಹುದೇನಯ್ಯಾ ! ಆಕೆ ಪಾದದಲ್ಲಿರೋದನ್ನು ಕೈಗೆ ತೆಗೆದುಕೊಂಡು ನೂರು ರೂಪಾಯಿ ಕೊಡಿ, ಇಲ್ಲದೆ ಇದ್ದರೆ

ಎರಡು ಮಡಗ್ತೀನಿ. ಎಲ್ಲರ ಎದುರಿಗೂ, ಅಂತ ರೇಗಿದರೆ, ನಮ್ಮ ಗತಿ ಏನಯ್ಯಾ ? ನಮ್ಮ ಹತ್ತಿರ ಉಳಿದಿರೋದು ಹತ್ತು ರೂಪಾಯಿ ಮಾತ್ರ,'' ಎಂದು ಎಚ್ಚರಿಸಿದೆ.

ಆ ವೇಳೆಗೆ ರಂಗಮಂಟಪದ ಹೊರತೆರೆಯು ಎತ್ತಲ್ಪಟ್ಟಿತು. ನಾವು ಕೂತಿದ್ದ ಕಡೆಯಿಂದ ರಂಗಮಂಟಪವು ಸುಮಾರು ಒಂದು ಮೈಲಿ ದೂರದಲ್ಲಿದ್ದಂತೆ ಕಾಣಿಸಿತು. ಅಲ್ಲದೆ ನಾವು ಬಾಲ್ಕೊನಿಯಲ್ಲಿ ಕೂತಿದ್ದೆವು. ಹಾಗಾಗಿ ಪಾತಾಳದಲ್ಲಿ ಎಲ್ಲೋ ದೃಶ್ಯಗಳನ್ನು ಕಂಡಂತಾಗುತ್ತಿತ್ತು.

ಮೊದಲು ಯಥಾಪ್ರಕಾರ ಹುಡುಗಿಯರ ತಂಡವೊಂದು ಕುಣಿಯುತ್ತಾ ಬಂದು ಡ್ರಿಲ್‌ಮಾಡಿ ಹೋಯಿತು.

ತೆಲುಗು ಮಿತ್ರ ನನಗೆ ತಗುಲಿಕೊಂಡು ಪಿಸುದನಿಯಲ್ಲಿ ''ಏನಯ್ಯಾ ! ಬೆತ್ತಲೆ ಇದ್ದಹಾಗೆ ಕಾಣುತ್ತಲ್ಲಾ, ಅವರೆಲ್ಲಾ! ಇಲ್ಲಿನ ಸರಕಾರ ಇದಕ್ಕೆಲ್ಲಾ ಅವಕಾಶ ಕೊಡತ್ತಲ್ಲಯ್ಯಾ ! ನಮ್ಮೂರಿನಲ್ಲಿ ಸಿನಿಮಾದಲ್ಲಿ ಕೂಡ ಇಂತಹದನ್ನು ತೋರಿಸಕೂಡದಲ್ಲಯ್ಯಾ ?'' ಎಂದು ಅಚ್ಚರಿಯಿಂದ ಕೇಳಿದ.

''ಹಾಗಲ್ಲ! ಮರಿ. ಅವರೆಲ್ಲಾ ಚರ್ಮದ ಬಣ್ಣದ ಬಿಗಿ ಉಡುಪನ್ನು ಧರಿಸಿರುತ್ತಾರೆ. ಆದುದರಿಂದ ಕಾನೂನಿಗೆ ವಿರೋಧವಲ್ಲ. ಪಿಸುಮಾತಿನಲ್ಲಿ ಕೇಳಬೇಕಾಗಿಲ್ಲ. ಧೈರ್ಯವಾಗೇ ಕೇಳಬಹುದು'' ಎಂದು ಅವನ ಮನಸ್ಸಿಗೆ ತುಂಬಾ ತ್ರಾಸು ಆಗದೇ ಇರಲಿ, ಅಂತ, ಹೇಳಿದೆ.

''ಇರಬೇಕು ! ಇಲ್ಲದೆ ಇದ್ದರೆ ಯಾವ ಮರ್ಯಾದಸ್ಥರು ಎಲ್ಲರೆದುರಿಗೂ ಹೀಗೆ ಬರೋದು'' ಎಂದು ಅವ ನುಡಿದಾಗ, ನನಗ್ಯಾಕೋ ಸ್ವಲ್ಪ ರೇಗಿತು.

ಕೈಲಾಸಂ ಒಮ್ಮೆ ಬೈಸಿಕಲ್ಲಿನ ಮೇಲೆ ಹೋಗುತ್ತಿದ್ದಾಗ, ಪಂಚೆ ತುದಿ ಸೈಕಲ್ ಚೈನಿಗೆ ಸಿಕ್ಕಿಹಾಕಿಕೊಂಡುಬಿಡ್ತು. ಬೈಸಿಕಲ್ ನಿಂತಿತು. ಬಾಗಿ, ಮೆಲ್ಲಗೆ ಕೂತು, ಚೈನಿನಿಂದ ಪಂಚೆ ತುದಿಯನ್ನು ಹಗೂರಾಗಿ ಬಿಡಿಸಲು ಶುರುಮಾಡಿದರು. ತೊಡೆಯು ಸ್ವಲ್ಪ ಕಾಣಿಸುತ್ತಿತ್ತು. ಅಲ್ಲೇ ಹೋಗುತ್ತಿದ್ದ ಸರಿಗೆ ರುಮಾಲು ಧರಿಸಿದ್ದ ಕಚ್ಚೆ ಪಂಚೆ ಉಟ್ಟಿದ್ದ, ಗಂಧಾಕ್ಷತೆಯನ್ನು ಢಿಖಾವಾಗಿ ಹಾಕಿದ್ದ ಸರ್ಕಾರಿ ಅಧಿಕಾರಿಯೊಬ್ಬರು ಕೈಲಾಸಂಇನ ತೊಡೆಯನ್ನು ನೋಡಿ, ''ನಾಚಿಕೆ ಆಗುಲ್ಲವೇನ್ರೀ ! ನಿಮಗೆ ! ಇಷ್ಟು ವಯಸ್ಸಾಗಿದೆ ! (ಕೈಲಾಸಂಇನ ತೊಡೆಯನ್ನು ಬೆರಳುಮಾಡಿ ತೋರಿಸುತ್ತಾ) ಹೀಗೆ, ಹೀಗೆ, ಪಬ್ಲಿಕ್ ರಸ್ತೆಯಲ್ಲಿ !!'' ಎಂದು ರೇಗುತ್ತಾ ಹೇಳಿದರು.

ಕೈಲಾಸಂಗೆ ರೇಗಿತು. ದುರುಗುಟ್ಟಿಕೊಂಡು ಆತನನ್ನೇ ನೋಡಿದರು. ಎದ್ದು ನಿಂತರು. ಪಂಚೆ ಬೈಸಿಕಲ್ ಜತೆಗೆ ಉಳಿದುಕೊಂಡಿತು. ಚಡ್ಡಿಧಾರಿಯಾಗಿ ಜಟ್ಟಿಯಂತೆ ಕೈಲಾಸಂ ನಿಂತರು. ಏನ್ರೀ ! ನೀವು ಹೇಳ್ತಾ ಇರೋದು. ಅಲ್ಲಾ ಬೊಗಳ್ತಾ ಇರೋದು ? ಯಾರಿಗೇರ್ರಿ ನಾಚಿಕೆ, ಯಾತಕ್ರೀ ನಾಚಿಕೆ !!

ಬೀದೀಲಿ ಹೋಗ್ತಾ ಇದ್ದವರನ್ನು ಉದ್ದೇಶಿಸಿ "ನೀವು ಬನ್ನಿ, ನ್ಯಾಯ ತೀರಿಸ್ರಿ, ಎಲ್ರೂ ಬನ್ರಿ," ಎಂದು ಕೂಗಿ ಹತ್ತು ಜನ ಗಿರಕಾಯಿಸಿಕೊಂಡಾಗ "ನೋಡ್ರಿ, ಮಹಾಜನರೇ! ಪಂಚೆ ತುದಿ ಸೈಕಲ್ ಚೈನಿಗೆ ಸಿಕ್ಕಿಕೊಂಡಿತು ಬೈಸಿಕಲ್ ನಿಲ್ಲಿಸಿ, ಮುದುಡಿಕೊಂಡು ಕೂತು ಪಂಚೆ ಬಿಡಿಸಿಕೊಳ್ಳುತ್ತಿದ್ದೆ, ಈತ, ಸರಿಗೆ ರುಮಾಲ್ ಕಟ್ಟಿಕೊಂಡ ಮರ್ಯಾದಸ್ಥ, ನನ್ನನ್ನು ನೋಡ್ತಾ ನಿಂತುಕೊಂಡ. ನನ್ನ ತೊಡೇನೇ ನೋಡ್ತಾ ನಿಂತುಕೊಂಡ. ನೀವು ಹೇಳ್ರಿ ನ್ಯಾಯಾನ! ಕಷ್ಟದಲ್ಲಿ ಸಿಕ್ಕಿಹಾಕಿಕೊಂಡ ನನಗೆ ನಾಚಿಕೆ ಇಲ್ವ! ಅಥವಾ ನನ್ನನ್ನೇ ನೋಡ್ತಾ ನಿಂತುಕೊಂಡ ಈ... ಈ... ನವರಾತ್ರಿ ಪಟ್ಟದ ಬೊಂಬೆಗೆ ನಾಚಿಕೆ ಇಲ್ಲವೇ ನೀವು ತೀರಿಸ್ರಿ ನ್ಯಾಯಾನ!" ಎಂದು ದೊಡ್ಡ ದನಿಯಲ್ಲಿ ಗರ್ಜಿಸಿದರು.

ಪಾಪ! ಆತನ ಬಣ್ಣ ಪಟ್ಟದ ಬೊಂಬೆಗಳ ಬಣ್ಣವೇ! ಅದೂ ಕರಿಮರದಲ್ಲಿ ಮಾಡಿದ ಬೊಂಬೆ. ಅಂತಹಾ ಮುಖದಲ್ಲಿಯೂ ಕೂಡ, ಕೈಲಾಸಂ ನ್ಯಾಯ ತೀರಿಸಿ ಎಂದು ಸಕಾರಣವಾಗಿ ಎಲ್ಲರೂ ಒಪ್ಪುವಂತೆ ಕೇಳಿದಾಗ, ಕೆಂಪು ಛಾಯೆ ಕಾಣಿಸಿತು. ಈ ಚರ್ಮದಲ್ಲಿ ಕೆಂಪು ಛಾಯೆ ಕಾಣಿಸುವ ಹಾಗಾಗಬೇಕಾದರೆ, ಆತನಿಗೆ ಎಷ್ಟು ಅವಮಾನ ಆಗಿರಬೇಕು? ಅವನ ತಪ್ಪು ಎಷ್ಟು ತೀಕ್ಷ್ಣವಾಗಿ ತಿಳಿದಿರಬೇಕು? ತಲೆ ತಗ್ಗಿಸಿಕೊಂಡು ಆತ ಮಾಯವಾದ.

ಈ ಘಟನೆ ಜ್ಞಾಪಕಕ್ಕೆ ಬಂತು. ತೆಲುಗು ಮಿತ್ರ ಮರ್ಯಾದಸ್ಥರು ಹೀಗೆ ಎಲ್ಲರೆದುರಿಗೂ ಕಾಣಿಸಿಕೊಳ್ಳುತ್ತಾರೆಯೇ ಎಂದಾಗ, ನಾನೂ ಉತ್ತರಿಸಿದೆ. "ಅಲ್ಲಾ! ಮಗನೆ, ಹೊಟ್ಟೆ ಪಾಡಿಗೆ ಹೊಟ್ಟೆ ತೋರಿಸಿಕೊಂಡು ಕುಣಿಯೋರಿಗೆ ಮರ್ಯಾದೆ ಇಲ್ಲವೊ? ಅಥವಾ ಅದನ್ನು ದುಡ್ಡುಕೊಟ್ಟುಕೊಂಡು ಬಂದು, ಕಣ್ಣು ರೆಪ್ಪೆ ಹಾರಿಸದೆ ನೋಡ್ತಾ ಇರುವ ನಿನಗೆ ಮರ್ಯಾದೆ ಇಲ್ಲವೋ? ಯಾರನ್ನಾದರೂ ಕೇಳೋಣವೆ" ಎಂದೆ.

"ಅಷ್ಟು ಗಟ್ಟಿಯಾಗಿ ಕೂಗಬೇಡಪ್ಪಾ! ಎಲ್ಲರೂ ನಮ್ಮನ್ನೇ ನೋಡ್ತಾ ಇದಾರೆ, ನನಗೆ ನಾಚಿಕೆಯಾಗ್ತಾ ಇದೆ" ಎಂದ ತೆಲುಗು ಮಿತ್ರ.

ಇದರಿಂದ ಒಂದು ಪ್ರಯೋಜನ ಆಯಿತು, ಆಮೇಲೆ, ಎಲ್ಲಾ ಮುಗಿದು ಹೊರಗೆ ಹೋಗೋತನಕ, ಅವ ತಿರುಗಿ ನನ್ನ ಸತಾಯಿಸಲಿಲ್ಲ. ಅತಿ ಭಯಂಕರವಾದ ಶಿಕ್ಷೆ ಯಾವುದು, ಎಂದು ಯಕ್ಷ ನನ್ನನ್ನು ಕೇಳಿದರೆ 'ಅಂದು ಧರ್ಮರಾಯನನ್ನು ಕೇಳಿದ ಹಾಗೆ' ಸಿನಿಮಾ, ನಾಟಕ ಇತ್ಯಾದಿ ಸಭೆಗಳಲ್ಲಿ ಪಕ್ಕದಲ್ಲಿ ಕೂತವನು, ಏನೂ ತಿಳಿಯದೆ ಇದ್ದವನು, ಏನಾಗ್ತಾ ಇದೆ, ಯಾಕಾಗ್ತಾ ಇದೆ ಅಂತ ಪ್ರಶ್ನೆ ಕೇಳುವುದೇ, ಅತಿ ಭಯಂಕರ ಶಿಕ್ಷೆ ಎಂದು ಹೇಳುತ್ತಿದ್ದೆ.

ಅಷ್ಟು ಹೊತ್ತಿಗೆ ರಂಗಮಂಟಪದ ಮೇಲೆ ಸುಮಾರು ನಾಲ್ವತ್ತರ ಹೆಣ್ಣೊಂದು ಬಂದು ನಿಂತಿತು. ಅಷ್ಟು ದೂರದಿಂದ ಆಕೆ ಚೆಲುವೆಯೋ ಅಲ್ಲವೋ ಹೇಳಲು ಬರುತ್ತಿದ್ದಿಲ್ಲ, ಆದರೂ ಹಾಕಿದ್ದ ಉದ್ದಾನೆ ಲಂಗ ಥಳಥಳಿಸುತ್ತಿತ್ತು. ಮೈ ಕೈ ತುಂಬಿಕೊಂಡಿತ್ತು. ಬೇಲೂರಿನ ಶಿಲಾಬಾಲಿಕೆಯರ ತರಹ ಮೈ ದುಂಡು ದುಂಡಾಗಿ ತುಂಬಿಕೊಂಡಿತ್ತು. ಪ್ರೇಕ್ಷಕರನ್ನು

ಉದ್ದೇಶಿಸಿ ಆಕೆ ಮಾತನಾಡಲು ಪ್ರಾರಂಭ ಮಾಡಿದಳು. ಫ್ರೆಂಚಿನಲ್ಲಿ ಮೊದಲು, ಅನಂತರ ಇಂಗ್ಲಿಷಿನಲ್ಲಿ.

''ನಾಲ್ಕು ಜನ ಮಹನೀಯರು ರಂಗಮಂಟಪದ ಮೇಲಕ್ಕೆ ಬರಬೇಕೆಂದು ಬಿನ್ನವಿಸಿಕೊಳ್ಳುತ್ತೇವೆ. ಮುಂದಿನ ಕಾರ್ಯಕ್ರಮಕ್ಕೆ ನನ್ನ ಭುಜಕ್ಕೆ ಭುಜ ಕೊಟ್ಟು ಸಹಾಯ ಮಾಡುವವರು ಬೇಕು. ದಯವಿಟ್ಟು ಬನ್ನಿ'' ಎಂದು ಕೋಕಿಲ ಕಂಠದಳ್ಳಿ ಕೇಳಿಕೊಂಡಳು. ಧ್ವನಿವರ್ಧಕ ಯಂತ್ರವು ಬಲು ಅಚ್ಚುಕಟ್ಟಾಗಿ ಕೆಲಸ ಮಾಡುತ್ತಿತ್ತು ಮೇಲುಸಿರನ್ನು ಆಕೆ ಬಿಟ್ಟರೂ ಕೇಳಿಸುತ್ತಿತ್ತು.

ಪ್ರೇಕ್ಷಕರಲ್ಲಿ, ನಾಲ್ಕು ಜನ ಮುಂದುಗಡೆ ಕೂತಿದ್ದವರು, ಎದ್ದು ರಂಗ ಮಂಟಪವನ್ನು ಹತ್ತಿ ಹೋದರು. ತನ್ನ ಸುತ್ತಲೂ ನಾಲ್ಕು ದಿಕ್ಕುಗಳಲ್ಲಿ ನಾಲ್ವರನ್ನು ನಿಲ್ಲಿಸಿಕೊಂಡು, ''ಪ್ರಿಯರೆ, ಮಿತ್ರರೇ ! ನಿಮ್ಮಲ್ಲಿ ಒಬ್ಬರು ಜರ್ಮನ್ ದೇಶದವರು ಇದ್ದ ಹಾಗೆ ಇದ್ದೀರಿ. ಅದೇ ದೃಢ ಮೈಕಟ್ಟು, ತಲೆಯೋಡು ; ಇನ್ನೊಬ್ಬರು ಇಟಾಲಿಯನ್ ಇದ್ದ ಹಾಗೆ ಇದ್ದೀರಿ. ಮತ್ತೊಬ್ಬರು ಅಮೆರಿಕನ್ ತರಹ ಇದ್ದೀರಿ. ನಾಲ್ಕನೆಯವರು ಅರಬ್ಬೀ ದೇಶದವರ ಹಾಗೆ ಕಾಣಿಸುತ್ತೀರಿ. ಹೌದೇ'' ಎಂದಳು. ನಾಲ್ವರೂ ತಲೆಯಲ್ಲಾಡಿಸಿದರು.

''ಮೂಗಿನ ನೇರ ನೋಡಿದರೆ ಮೈಯ್ಯಿನ ಮಾಟ ತಿಳಿಯೋ ಹಾಗೆ, ಮುಖ ನೋಡಿದರೆ ದೇಶ ಇಂತಹುದು ಅಂತ ಹೇಳಬಹುದು; ಲಾಗಾಯ್ತಿನಿಂದ ಮಾನವರಲ್ಲಿ ಪ್ರೀತಿಯನ್ನು ಪ್ರದರ್ಶಿಸಲು 'ಚುಂಬನ'ವನ್ನು ಅಸ್ತ್ರವನ್ನಾಗಿ ಬಳಸುತ್ತಾರೆ. ಒಂದೊಂದು ದೇಶದಲ್ಲಿ ಒಂದೊಂದು ಜನಾಂಗದಲ್ಲಿ ಒಂದೊಂದು ತರಹ ಚುಂಬನ ರೂಢಿಯಲ್ಲಿರುತ್ತದೆ. ಪ್ರೇಕ್ಷಕರ ಪ್ರಬುದ್ಧತೆಗೆ ಸಹಾಯವಾಗಲಿ ಎಂದು ನೀವು ಒಬ್ಬೊಬ್ಬರಾಗಿ ನಿಮ್ಮ ದೇಶದ ಚುಂಬನ ರೀತಿಯನ್ನು ಪ್ರದರ್ಶಿಸುತ್ತೀರಾ ದಯವಿಟ್ಟು;'' ಎಂದು ಕೇಳಿಕೊಂಡಳು.

ಒಬ್ಬರ ಮುಖ ಒಬ್ಬರು ನೋಡಿಕೊಂಡರು. ನಾಲ್ವರೂ ಮೀಸೆ ಹೊತ್ತವರು. ಕಡೆಗೆ ನಾಲ್ವರೂ ಆಕೆಯ ಕಡೆಗೆ ತಿರುಗಿ 'ಯಾರ ಜತೆ ಪ್ರದರ್ಶಿಸೋದು' ಎನ್ನುವಂತೆ ಆಕೆಯ ಮುಖವನ್ನೇ ನೋಡಿದರು. ತುಸು ನಕ್ಕು, 'ಸಿದ್ಧವಾಗಿದ್ದೇನೆ, ನಿಮ್ಮ ಸೇವಕಿ' ಎನ್ನುವಂತೆ, ಬಿಲ್ಲಿನಂತಿದ್ದ ತುಟಿಗಳನ್ನು, ಸೊನ್ನೆಯಂತೆ ಮುಂಡು ಮಾಡಿ ನಿಂತಳು.

ಮೊದಲು ನುಗ್ಗಿದವ ಇಟಾಲಿಯನ್, ಹೋದವನೇ ಬಲಗೈಯನ್ನು ಆಕೆಯ ಸೊಂಟಕ್ಕೆ ಆನಿಸಿ, ಭರತನಾಟ್ಯದವರ ತರಹ ಮೈ ಬಾಗಿಸಿ, ಚುಂಬನವನ್ನು ಒಂದು ನಿಮಿಷ ಪ್ರದರ್ಶಿಸಿದ. ಅನಂತರ ಆಕೆ ಸೆಟೆದು ನಿಂತು ಇಟಾಲಿಯನ್ ಚುಂಬಿಸಿದರೆ ಸೊಂಟಕ್ಕೆ ಊನ ಅಂತ ಈಗ ತಿಳಿಯಿತು, ಎಂದು ಸೊಂಟವನ್ನು ನೀವಿಕೊಂಡಳು.

ಎರಡನೆಯ ಜರ್ಮನ. ಎದುರು ನಿಂತು, ಕಾಲ್ಜೋಡಿಸಿ ಸೆಲ್ಯೂಟ್ ಹಾಕಿದ. ಆಮೇಲೆ ನೇರನೆ ಆಕೆಯ ಕಣ್ಣುಗಳನ್ನೇ ದಿಟ್ಟಿಸುತ್ತಾ, ಮೆಲ್ಲ ಮೆಲ್ಲಗೆ ಹತ್ತಿರ ಹೋಗಿ

ಮುಖವನ್ನು ತನ್ನ ಕೈಗಳಿಂದ ಹಗೂರಾಗಿ ಹಿಡಿದು, ಪುಸ್ತಕದಲ್ಲಿ ಹೇಳಿದಂತೆ, ಚುಂಬಿಸಿದ. "ಮುತ್ತು ಬೇಕೇ ಮುತ್ತು ? ಕೆಂದುಟಿಯ ಸವಿತುತ್ತು" ಎಂದು ಕುವೆಂಪು ಹಾಡಲಿಲ್ಲವೇ ಅದನ್ನು ಕೇಳಿಸಿಕೊಂಡಿದ್ದ ಅಂತ ಕಾಣುತ್ತೆ, ಆ ಜರ್ಮನ್ ಜಂಟಲ್‌ಮೆನ್. ತುತ್ತು ಉಣ್ಣುವರ ತರಹಾನೇ ತುಟಿಯನ್ನುಂಡ. ಸುಮಾರು ಮೂವತ್ತು ಸೆಕೆಂಡುಗಳಲ್ಲಿ ಆತನ ಹೊಟ್ಟೆ ತುಂಬಿರಬೇಕು. ಬೇರೆಯಾಗಿ ನಿಂತ.

ಮೂರನೆಯ ಪ್ರದರ್ಶನಕಾರ ಅಮೆರಿಕನ್ನ ಮಧ್ಯ ವಯಸ್ಸಿನವ. "ನನ್ನ ಹೆಂಡತಿ ಬಂದಿದ್ದಾಳೆ, ಎಲ್ಲವನ್ನು ನೋಡುತ್ತ ಮಂದಿರದಲ್ಲಿ ಕುಳಿತಿದ್ದಾಳೆ." ಎಂದು ಪೀಠಿಕೆ ಹಾಕಿ, ನಿಂತಲ್ಲೇ ನಿಂತು, ಅಂಗಿ ಗುಂಡಿಯನ್ನು ಅಂಗೈಲಿ ಹೊಸಯುಕ್ಕೆ ಶುರುಮಾಡಿದ. ಆಕೆಯೇ ಮುಂದು ಬಂದು "ನಿಮ್ಮ ಹೆಂಡತಿ ಏನೂ ಅನ್ನಲ್ಲ, ಏನು ತಿಳಿದುಕೊಳ್ಳಲ್ಲ. ಹೆಂಗಸರ ಹೃದಯ ಹೇಗೆ ಅನ್ನುವುದು ನನಗೂ ಗೊತ್ತು ! ನಿಮ್ಮ ದೇಶದವರು ಹೇಗೆ ಚುಂಬಿಸುತ್ತಾರೋ ಅದನ್ನು ಪ್ರದರ್ಶಿಸಬಹುದಲ್ಲ !" ಎನ್ನುತ್ತಾ ಹತ್ತಿರ ಹತ್ತಿರಕ್ಕೆ ಅಲೆಗಳಂತೆ ಸಾಗಿ ಬಂದಳು. ಮುಖದ ಬೆವರನ್ನು ಆತ ಒರೆಸಿಕೊಂಡು ಗುಬ್ಬಚ್ಚಿ ತರಹ ಹತ್ತು ಸೆಕೆಂಡುಗಳಲ್ಲಿ ಇಪ್ಪತ್ತು ಸಲ ಪ್ಪು ಪ್ಪು ಪ್ಪು ಮಾಡಿದ. ಆಮೇಲೆ ಕರವಸ್ತ್ರದಿಂದ ತನ್ನ ತುಟಿ ಒರೆಸಿಕೊಂಡ. ಅವನ ಮುಖ ಅವನಿಗೆ ಕಾಣಲೊಲ್ಲದು. ಅವನು ಒರೆಸಿಕೊಳ್ಳಬೇಕಾಗಿದ್ದುದು ತನ್ನ ಕೆನ್ನೆಯನ್ನು. ಅಲ್ಲೇ ಕಾಮನ ಬಿಲ್ಲಿನಂತೆ ಈಕೆ ತುಟಿ ರಂಗು ಮುದ್ರೆಗಳು ಬಿದ್ದಿತ್ತು !

ಉಳಿದವನು ಅರಬ್ಬೀಯ. ಬಾಬಾಬುಡನ್‌ಗಿರಿಗೆ ಮೊದಲು ಬಂದವನು ಇವನ ಗೋತ್ರದವನೇ ಇರಬೇಕು. ಅವರುಗಳೆಲ್ಲಾ ಕುದುರೆ ಪರೀಕ್ಷೆ ಮಾಡಬೇಕಾದರೆ ಮುಖ ನೋಡಿ ಮಣೆ ಹಾಕುಲ್ಲ. ಬೆನ್ನಿನ ಮೇಲೆ ಕೈ ಆಡಿಸಿ ಭಾರ ತಡೆಯುತ್ತೇ ಅಂತ ನೋಡುತ್ತಾರೆ. ಗೊರಸನ್ನ ಬಿಡಿಸಿ ನೋಡಿ ಓಡೋ ಶಕ್ತಿಯಿದೆಯೇ ಅಂತ ಪರೀಕ್ಷಿಸುತ್ತಾರೆ. ಅಶ್ವ ಪರೀಕ್ಷೆ ಮಾಡಿಯೇ ಸವಾರಿ ಆಮೇಲೆ ಮಾಡುವ ಜಾಣ್ಮೆ. ಅಂತಹವರು ಯಾರೋ ಬಂದು ಎದುರು ನಿಂತು ತುಟಿ ತೆರೆದು ಮುತ್ತಿಡು ಅಂದರೆ, ಹಲ್ಲು ಪರೀಕ್ಷೆ ಮಾಡದೆ ಮೂತಿ ಇಡ್ತಾರೆಯೇ ಅಂತ ಅನುಮಾನ ನನಗೆ.

ಈಕಿಯೇನೋ ಕುದುರೆಯಂತೆ ಟಕಟಕ ಶಬ್ದ ಮಾಡುತ್ತಾ ಆತನೆದುರಿಗೆ ಹೋಗಿ ಸೊಂಟದ ಮೇಲೆ ಕೈ ಇಟ್ಟುಕೊಂಡು ವಾಲಿ ನಿಂತು, ಕಣ್ಣು ರೆಪ್ಪೆಗಳನ್ನು ಪಟಪಟ ಹಾರಿಸಿದಳು. ಇಬ್ಬರು ಸುಮಾರು ಸಮಾನ ಎತ್ತರ. ಈಕೆ ಸ್ವಲ್ಪ ಬೂಸಕ್ಕ ಆತ ಕೃಶಾಂಗ. ಒಂದು ನಿಮಿಷ ಆತ ಈಕೆಯನ್ನು ನೋಡಿದ. ನಂತರ ಬಾಯಿಬಿಟ್ಟ. ಮುತ್ತು ಕೊಡುಕ್ಕಲ್ಲ. ಮಾತನಾಡುಕ್ಕೆ !

"ನಮ್ಮ ದೇಶದಲ್ಲಿ ಚುಂಬಿಸುವುದು ಪವಿತ್ರವಾದ ವಿಷಯ. ಎಲ್ಲರೆದುರಿಗೂ ಪ್ರದರ್ಶಿಸುವ ಅಲ್ಪ ವಿಷಯವಲ್ಲ. ಹೇರಂನಲ್ಲಿ ಕೂಡ, ಬಚ್ಚಿಟ್ಟ ಹೆಂಡತಿಯನ್ನು ಗುಟ್ಟಿನಲ್ಲಿ

ಗಂಡ ಚುಂಬಿಸುವ ನಿಯಮ. ವಿಷಯ ತಿಳಿದುಕೋಬೇಕು ಅಂತ ಆಸೆ ನಿನಗಿದೆ. ತಿಳಿಸ್ತೀನಿ. ತಡಿ'' ಎಂದ.

ಜಟಕ್ಕಂತ ಆಸಾಮತ್ತು ಅವಳನ್ನೆತ್ತಿ ತನ್ನ ತೋಳ ಮೇಲೆ ಚೀಲದ ತರಹ ಹಾಕಿಕೊಂಡ. ಕುಂಯ್ಯ ಪಂಯ್ಯ ಅಂತ ಆಕೆ ಕೂಗ್ತಾನೆ ಇದ್ದಳು. ಮಂಟಪದ ಹಿಂದುಗಡೆಗೆ ಆ ಧಡಿ ಭಾರವನ್ನು ಹೊತ್ತು ಓಡಿ, ಪಕ್ಕದಲ್ಲಿದ್ದ ಓಣಿಯೊಳಕ್ಕೆ ನುಗ್ಗಿ ಕಣ್ಮರೆಯಾದ.

ಎರಡು ಮೂರು ನಿಮಿಷ ಆದ ಮೇಲೆ ಆಕೆ ಒಬ್ಬಳೇ ರಂಗಮಂಟಪದಲ್ಲಿ ಕಾಣಿಸಿಕೊಂಡಿದ್ದು. ಕುಂಟು ಕುದುರೆ ತರಹ ನಡೆದುಕೊಂಡು ಬಂದಳು. ಕಳಕೊಂಡ ಸಾಮಾನು ಜೇಬಿನಲ್ಲಿದೆಯೇ ಅಂತ ಹುಡುಕುವುದಿಲ್ಲವೇ, ಹಾಗೆ ಆಕೆ ಮೈ ಕೈಗಳನ್ನು ತಡವರಿಸಿ ಹುಡುಕುತ್ತಾ ಬಂದು ನಿಂತಳು. ಬೊಚ್ಚು ಬಾಯಾಗಿದ್ದಳು.

''ಆತ ಅರೇಬಿಯಾಕ್ಕೆ ನನ್ನ ಎತ್ತಿಕೊಂಡು ಹೋಗಿಬಿಡ್ತಾನೇನೋ ಎಂತಿದ್ದೆ ಪ್ರಥಮ ಚುಂಬನ ಅವನದು. ನನ್ನ ಹಲ್ಲುಗಳೆಲ್ಲಾ ಹೊರಕ್ಕೆ ಬಂದುವು'' ಎಂದು ತತಾತ್ತಾತ್ತಾ ಮಾತಾಡಿದಳು.

ಆಮೇಲೆ ಯಥಾಪ್ರಕಾರ ಅಭ್ಯಂಗನಕ್ಕಿಳಿಯುತ್ತಿದ್ದ ಹೆಣ್ಣು ಮಕ್ಕಳ ಡ್ರಿಲ್. ಸಂಗೀತ ಇತ್ಯಾದಿ.

ಪಕ್ಕದಲ್ಲಿದ್ದ ಮಿತ್ರ ಮಾತೇ ಆಡಿರಲಿಲ್ಲ. ಹೋಗೆಬಿಟ್ಟನೋ ಎಂದು ತಿರುಗಿ ನೋಡಿದೆ. ಎಳೆ ಮಕ್ಕಳು ಕಣ್ಣ ಮುಂದೆ ಬೆರಳುಗಳನ್ನು ಚಾಚಿ, ಸಂದುಗಳಲ್ಲಿ ದೊಡ್ಡವರನ್ನು ನೋಡುತ್ತಾ, ಪಾಪ ಎಲ್ಲಿ ಎಂದು ಆಟ ಆಡುಲ್ಲವೇ, ಹಾಗೆ ಈತ ಬೆರಳುಗಳನ್ನು ಕಣ್ಣು ಮುಂದೆ ಬಿಡಿಸಿ ಹಿಡಿದು, ಬೆರಳು ಕಂಡಿಗಳಲ್ಲಿ ರಂಗಮಂಟಪವನ್ನು ನೋಡುತ್ತಿದ್ದ.

ಮಿತ್ರ ಮಗುವನ್ನು ಕರೆದುಕೊಂಡು ಹಿಂತಿರುಗಿ ಹೋಟಲಿಗೆ ಬಂದು, ಸಿಗರೇಟ್ ಒಂದನ್ನು ಅವನ ಬಾಯಿಗೆ ಚೀಪುಕ್ಕೆ ಕೊಟ್ಟು, ಮಲಗು ಮಲಗೆಲೆ ಮಂಕ ! ಅಂತ ಬೆಳಗಾಗುತನಕ ಹಾಡಿ, ಆಮೇಲ್ ನನ್ನ ಕೊಠಡಿಗೆ ಬಂದೆ.

ರಾಮಸ್ಕಂದಂ ಅನ್ನು ಮರೆಯದೆ ಹೇಳಿ ಮಲಗಿದೆ. ದುಸ್ವಪ್ನಗಳೇನೋ ತಪ್ಪಿದುವು, ಆದರೆ ಸ್ವಪ್ನಗಳಲ್ಲ.

# ಫ್ರಾಂಕ್ ಫೋರ್ಟ್ ಆನ್ ಮೈನ್

ಫ್ರಾಂಕ್ ಫೋರ್ಟಿನ ವಿಮಾನ ನಿಲ್ದಾಣದಲ್ಲಿ ಇಳಿದಾಗ ಬೆಳಿಗ್ಗೆ ಸುಮಾರು 11. ಹಿತವಾದ ಬಿಸಿಲು. ನಿಲ್ದಾಣದ ಸುಂಕದ ಕಟ್ಟೆಯವರು, ನಮ್ಮ ತಂಡದ ಆ ಊರಿನ ಮಾರ್ಗದರ್ಶಕರೊಂದಿಗೆ ಏನೇನನ್ನೋ ಜರ್ಮನ್ ಭಾಷೆಯಲ್ಲಿ ಮಾತನಾಡಿದರು. "ಒಬ್ಬೊಬ್ಬರನ್ನೂ ತನಿಖೆ ಮಾಡುವುದು ಪ್ರಯಾಸ, ಇವರೆಲ್ಲಾ ಬಡ ದೇಶದಿಂದ ಬಂದವರು, ಹತ್ತಿರ ಹಣವಿದ್ದ ಹಾಗೆ ಕಾಣುವುದಿಲ್ಲ, ಅಂದಾಜು ಮೇಲೆ ಎಲ್ಲರನ್ನೂ ಸಾಗಹಾಕಿ" ಎಂದು ನಮ್ಮ ಮಾರ್ಗದರ್ಶಕ ಹೇಳಿದ್ದಿರಬಹುದು. ಸುಂಕದವನು ಒಪ್ಪಿರಬಹುದೇನೋ ? ಆದರೂ ಕಾಫಿ ಕಾಫಿ ಎಂದು ಕೇಳಿದ. "ಹೂ ನನಗೂ ಬೇಕು" ಎಂದು ಮುಂದೆ ನಿಂತಿದ್ದ ನಾನಂದು, ಕೈಯೆತ್ತಿದೆ. "ಹಾಗಾದರೆ ಹನ್ನೆರಡು ಮಾರ್ಕ್ ಕೊಡಿ" ಎಂದ ನಮ್ಮ ಮಾರ್ಗದರ್ಶಕ. ಅಂದರೆ 12 ರೂಪಾಯಿನಷ್ಟು ! "ಹಾಗಾದರೆ ಕಾಫಿ ಬೇಡ" ಅಂದೆ. "ಸುಂಕದವರು ಕೇಳಿದ್ದು ; ನೀವು ಇಂಡಿಯಾದಿಂದ ಕಾಫಿ ಪುಡಿ ತಂದಿದ್ದೀರಾ ? ಹಾಗಿದ್ದರೆ ಸುಂಕ ಕೊಡಬೇಕು ಅಂತ, ಸುಂಕ 12 ಮಾರ್ಕ್. ಕುಡಿಯುಕ್ಕೆ ಕಾಫಿ ಬೇಕೆ ಅಂತ ಕೇಳಲಿಲ್ಲ" ಎಂದ. "ಅರ್ಥವಾಗಲಿಲ್ಲ ನನಗೆ, ಕುಡಿಯುಕ್ಕೆ ಕೊಡ್ತಾರೇನೋ ಅಂತ ಬೇಕು ಎಂದೆ, ನನ್ನ ಹತ್ತಿರ ಕಾಫಿ ಪುಡಿ ಇಲ್ಲ" ಎಂದು ತಲೆ ತಗ್ಗಿಸಿಕೊಂಡು ಹೇಳಿದೆ. ಅವರಿಬ್ಬರೂ ಮಾತನಾಡಿಕೊಂಡು ನಕ್ಕರು.

ಮುಂದೆ ಊರೊಳಕ್ಕೆ, ಎರಡು ತಾಸು ತಂಗಲು ಹೋದೆವು. ಫ್ರಾಂಕ್ ಫ್ರೋರ್ಟಿನ ಅಂಗಡಿ ಬೀದಿ ಬಲು ಜೋರು. ಯಾವ ಅಂಗಡಿಗೆ ಹೋದರೂ ನಮ್ಮ ತಂಡದವರಾದರೂ ಕ್ಯಾಮರಾ ವ್ಯಾಪಾರದಲ್ಲಿ ಮಗ್ನರಾಗಿರುತ್ತಿದ್ದರು. ಎಷ್ಟೇ ಕ್ಯಾಮರಾ ಮನೆಯಲ್ಲಿರಲಿ, ಜರ್ಮನಿಗೆ ಹೋದಾಗ ಹೊಸ ಕ್ಯಾಮರಾ ಕೊಳ್ಳದಿದ್ದರೆ, ಸಕೇಶಿ ವಿದುರಾಶ್ವತ್ಥಕ್ಕೆ ಹೋದ ಹಾಗೆ ಆಗುತ್ತೇನೋ ? ಎಲ್ಲರೂ ಅಷ್ಟರದೋ ಇಷ್ಟರದೋ ಕ್ಯಾಮರಾ ಕೊಂಡರು.

ನಂತರ ಅಲ್ಲಿಂದ ಹೈಡಲ್‌ಬರ್ಗ್‌ಗೆ ಬಸ್ಸಿನಲ್ಲಿ ಹೊರಟೆವು. ನಮ್ಮೂರ ಮಲೆನಾಡಿನಲ್ಲಿ ಬೆಟ್ಟದ ಅಡಿಯಲ್ಲಿ ಸುತ್ತು ಹಾಕಿಕೊಂಡು ಹೋಗುವ ದಾರಿಗಳಿಲ್ಲವೇ ? ಅದೇ ತರಹ ಆ ದಾರಿಯೂ ಕೂಡ. ಎಡಗಡೆಗೆ ಬೆಟ್ಟ, ಸಣ್ಣ ಪುಟ್ಟ ಮರಗಳು ಗಿಡಗಳು ಶಿಸ್ತಾಗಿ ಬೆಳೆದಿವೆ. ಬಲಗಡೆಗೆ ಚೆಂದ ಕಾಣುವ ಕಣಿವೆ. ನದಿಯೊಂದು ಶಿಸ್ತಾಗಿ, ಅಲ್ಲಿನ ಜನರು ಹೇಳಿದಂತೆ ಕೇಳಿಕೊಂಡು ಹರಿಯುತ್ತಿದೆ. ನಮ್ಮೂರಿನ ನದಿಗಳ ತರಹ ಇವತ್ತು ಸೌಮ್ಯ, ನಾಳೆ ಎಲ್ಲೋ ಮಳೆ ಬಿದ್ದರೆ, ಇಲ್ಲಿ ಪ್ರಳಯ, ಹಾಗಲ್ಲ ಆ ಊರ ನದಿಗಳು. ಊರ ಸೋಲ್ಜರ್ ತರಹ ಸಾಗುತ್ತದೆ. ''ಹಾಲ್ಟ್'' ಅಂತ ಯಾರಾದರೂ ಗಟ್ಟಿಯಾಗಿ ಕೂಗಿದರೆ, ನದಿಯು ಹೆದರಿ ನಿಂತೇಬಿಡುತ್ತೇನೋ ಎನ್ನಿಸುತ್ತದೆ. ಹಾಗೆ ಅಲ್ಲಿನ ಇಂಜಿನಿಯರುಗಳು ನದಿಯನ್ನು ಹತೋಟಿಯಲ್ಲಿಟ್ಟಿದ್ದಾರೆ. ಬೆಟ್ಟದ ಕಿಬ್ಬಿಯ ದಾರಿಯು ಮುಗಿದಮೇಲೆ ಷಹರಿನಿಂದ ಷಹರಿಗೆ ಹೋಗುವ-''ಆಟೋಬ್ಹಾನ್''- ಹೆದ್ದಾರಿ ಸಿಕ್ಕಿತು. ದಿವನಾದ ಈ ರಸ್ತೆಗಳಲ್ಲಿ ಮೂರು ಮೂರು ಕಾರುಗಳು ಸಾಲಾಗಿ ಇತ್ತ, ಸಾಲಾಗಿ ಅತ್ತ ಹೋಗಬಹುದು. ದಾರಿಯಲ್ಲಿ ನಮ್ಮೂರಿನಂತೆ ದನಗಳು ಅಡ್ಡ ಬರುವುದಿಲ್ಲ ; ಹಂದಿಗಳು ಬಂದು ತೊಂದರೆ ಕೊಡುಲ್ಲ. ನಾಯಿಗಳು ಗುಂಪುಗಟ್ಟಿಕೊಂಡು ಕಾಮನ ಹಬ್ಬ ಆಚರಿಸುವುದಿಲ್ಲ. ಜನರಂತೂ ಮಧ್ಯ ರಸ್ತೆಯಲ್ಲಿ ನಡೆಯುವುದೇ ಇಲ್ಲ. ಅಂದಮೇಲೆ ಕಾರಿನ ವೇಗ ಕೇಳಬೇಕೆ ? ಬಸ್ಸು ಕೂಡ ಅದೇ ವೇಗದಲ್ಲಿ ಓಡಿದರೂ, ಒಳಗಿದ್ದ ನಮಗೆ ಸ್ವಲ್ಪವಾದರೂ ಕುಲುಕಾಟ ಆಗಿರಬೇಕಲ್ಲ! ಅಷ್ಟು ಹಸನಾಗಿತ್ತು ಆ ರಸ್ತೆಗಳು ! ನಮ್ಮೂರನ್ನು ಜ್ಞಾಪಿಸಿಕೊಂಡೆ. ನಿಟ್ಟುಸಿರು ಬಿಟ್ಟೆ, ಆದರೆ:— ಆದರೆ :—

ಜರ್ಮನಿಯ ಈ ಹೆದ್ದಾರಿಗಳೆಲ್ಲ ಸೈನ್ಯದವರ ತುರ್ತು ಸಾಗಾಣಿಕೆಗೆ ಅನುವಾಗಲಿ ಎಂದು ಅಣಿಯಾದುವು. ಇದೇ ಜರ್ಮನ್ ಸೈನ್ಯ, ಮಸಲ, ನಮ್ಮೂರಿಗೆ ಬಂದು ಕಾಳಗ ಮಾಡಲೆತ್ನಿಸಿದರೆ, ಆಗ ಅವರ ವಾಹನಗಳೆಲ್ಲ ನಮ್ಮ ರಸ್ತೆಯನ್ನು ನೋಡಿಯೇ ಕರುಳು ಹರಿದುಕೊಂಡು, ಕಾಲು ಮೂಳೆ ಮುರಿದುಕೊಂಡು ನಿರ್ನಾಮವಾಗುತ್ತದೆ. ಶತ್ರು ಸೈನ್ಯ ಬಂದರೆ ಒದ್ದಾಡಲಿ ಎಂದೇ ನಮ್ಮೂರಿನ ರಸ್ತೆಗಳನ್ನು ನಾವು ಹೀಗೆ ಮಡಗಿದ್ದೇವೆ. ನಮಗೆಲ್ಲಾ ತುಂಬಾ ಮುಂದಾಲೋಚನೆ, ನಾಳೆ ನಾಡಿದ್ದರದಲ್ಲ, ಎಂದಾದರೂ ಎಲ್ಲಿಂದಾದರೂ ಯಾರಾದರೂ ಬಂದರೆ ; ಒಂದು ರೀತಿ ಪರಲೋಕದ ಸೌಖ್ಯವನ್ನು ನೆನೆಸಿಕೊಳ್ಳುತ್ತ ಇಹಲೋಕದಲ್ಲಿ ಗಾಣದ ಎತ್ತುಗಳ ಹಾಗೆ ಆಸೆ ಆಕಾಂಕ್ಷೆಗಳಿಲ್ಲದೆ ಜೀವನವನ್ನು ಸಾಗಿಸುವುದು ನಮ್ಮ ರೀತಿ !

ಹೆದ್ದಾರಿಗಳ ಪಕ್ಕದಲ್ಲೇ ಅಲ್ಲಲ್ಲಿ ನದಿ ಹರಿಯುತ್ತಿದೆ ನಾವು ಅಲ್ಲಿ ಹೋಗುತ್ತಿದ್ದ ದಿನ, ಭಾನುವಾರ, ಷಹರುಗಳಿಂದ ಸಂಸಾರ, ಸಂಸಾರಗಳೇ ರಜೆಗಾಗಿ ನದಿ ತೀರಕ್ಕೆ ಬಂದು ಸಂಜೆಯ ತನಕ ವಿಹರಿಸಿ ಹೋಗುತ್ತಿದ್ದರು. ಆ ಆಟೋಬ್ಹಾನಿನಲ್ಲಿ ದಿನಾಲು ಸುಮಾರು 20,000 ವಾಹನಗಳು ಓಡಿಯಾಡುತ್ತವೆಂದೂ, ಭಾನುವಾರದ ದಿನ 45,000 ವಾಹನಗಳಷ್ಟು ಓಡಾಡುತ್ತವೆಂದೂ ಮಾರ್ಗದರ್ಶಕ ತಿಳಿಸಿದ. ವಿಜಯದಶಮೀ ದಿನ ಬಸ್ಸ

ಮಂಟಪಕ್ಕೆ ನಮ್ಮ ದೇವರುಗಳು ಸಾಲು ಸಾಲಾಗಿ ಬಿಜಯ ಮಾಡುಲ್ಲವೇ, ಅದೇ ತರಹ ಅಲ್ಲಿನ ವಾಹನಗಳು ಒಂದರ ಬಾಲ ಒಂದು ಕಚ್ಚಿಕೊಂಡು ಸಾಗುತ್ತಿದ್ದುವು. ನದಿ ದಂಡೆಯ ಮೇಲೆ ಖಾಲಿ ಜಾಗ ಅಂತ ಕಾಣಿಸುತ್ತಿರಲಿಲ್ಲ. ಅಷ್ಟು ಜನ !

ದಿನವೆಲ್ಲ ಪಯಣ ಮಾಡುವವರ ಸೌಕರ್ಯಕ್ಕಾಗಿ ಅಲ್ಲಲ್ಲಿ ಹೋಟಲುಗಳಿವೆ. ನಮ್ಮ ಮಧ್ಯಾಹ್ನದ ಊಟ, ರಾತ್ರಿ ಊಟ ಎಲ್ಲ ಇಂತಹ ಹೋಟಲುಗಳಲ್ಲಿ ನಡೆಯಿತು. ಸುಮಾರು ಜನ ಪ್ರವಾಸಿಗರು ಈ ಹೋಟಲುಗಳಲ್ಲಿ ಕಂಡು ಬಂದರು. ಜೋಡಿಗಳೇ ಹೆಚ್ಚು. ಅಂದಿನ ಜೋಡಿಯೋ, ಎಂದೆಂದಿನ ಜತೆಯೋ ಗೊತ್ತಾಗುತ್ತಿರಲಿಲ್ಲ.

ಮಾರನೆಯ ದಿನ ಹೈಡಲ್‌ಬರ್ಗ್‌ಗೆ ಹೋದೆವು. ಅಲ್ಲಿನ ಆಸ್ಪತ್ರೆ ; ವಿಶ್ವವಿದ್ಯಾಲಯ, ಎಲ್ಲವನ್ನೂ ನೋಡಿದೆವು. ಜಗತ್ ಪ್ರಸಿದ್ಧವಾದ ವಿಶ್ವವಿದ್ಯಾನಿಲಯ, ಹೈಡಲ್ ಬರ್ಗ್, ಯೂರೋಪ್ ಮತ್ತು ಇಂಗ್ಲೆಂಡಿನ, ವಿದ್ಯಾರ್ಥಿಗಳು, ಸ್ನಾತಕೋತ್ತರ ಶಿಕ್ಷಣಕ್ಕೆ ಹೈಡಲ್‌ಬರ್ಗಿಗೆ ಹೋಗುತ್ತಿದ್ದರು. ಅಷ್ಟು ಹೆಸರುವಾಸಿ.

ವಿಶ್ವವಿದ್ಯಾನಿಲಯದಲ್ಲಿ ತುಂಟುತನ ಮಾಡಿದ ವಿದ್ಯಾರ್ಥಿಗಳನ್ನು ಸೆರೆಮನೆಯಲ್ಲಿ ಶಿಕ್ಷೆಗೆಂದು ಕೂಡುತ್ತಿದ್ದರಂತೆ. ಆ ಕೊಠಡಿಗಳನ್ನು ಪ್ರವಾಸಿಗರಿಗೆಲ್ಲಾ ತೋರಿಸುತ್ತಾರೆ. ನಮ್ಮೂರಿನ ಚಿಕ್ಕಪೇಟೆಯ ಹಳೇ ಮನೆಗಳ ತರಹವೇ ಆ ಮನೆಯಲ್ಲೂ ಮಹಡಿಗೆ ಹೋಗಬೇಕಾದರೆ ಓಣಿಯಂತಿರುವ ಕಿರುಕೋಣೆಯಲ್ಲಿನ ಮೆಟ್ಟಿಲುಗಳನ್ನು ಹತ್ತಿ ಹೋಗಬೇಕು. ಮಹಡಿಯ ಮೇಲೆ ಸೆರೆ ಕೊಠಡಿ. 200-300 ವರ್ಷಗಳಿಂದ ಸೆರೆ ಇದ್ದ ವಿದ್ಯಾರ್ಥಿಗಳೆಲ್ಲ ತಮ್ಮ ಹಸ್ತಾಕ್ಷರವನ್ನು ಗೋಡೆಗಳ ಮೇಲೆ, ಸೂಕ್ತ ಟೀಕೆಗಳ ಸಹಿತ, ಕೆಲವು ವೇಳೆ ಚಿತ್ರಗಳನ್ನೂ ಕೂಡ, ಬರೆದಿಟ್ಟಿದ್ದಾರೆ. ಶಾಲಾ ಗೋಡೆಗಳನ್ನೂ ಶೌಚದ ಗೋಡೆಗಳನ್ನೂ, ತಮ್ಮ ಆಶು ಲಿಖಿತಗಳಿಗೆ ಉಪಯೋಗಿಸಿಕೊಳ್ಳುವ ನಮ್ಮ ದೇಶದ ಹುಡುಗರು, ಹೈಡಲ್ ಬರ್ಗಿನ ಅಂದಿನ ವಿದ್ಯಾರ್ಥಿಗಳಿಗಿಂತ ಏನೂ ಕಳಪೆ ಅಲ್ಲ ಎಂದು ಧೈರ್ಯವಾಗಿ ಹೇಳಬಹುದು. ಜರ್ಮನಿಯ, ಇಂಗ್ಲೆಂಡಿನ ಹೆಸರಾಂತ ನಾಯಕರುಗಳ ಹೆಸರುಗಳು, ಆ ಸೆರೆ ಕೊಠಡಿಯಲ್ಲಿ ಚಿರಂಜೀವಿಗಳಾಗಿವೆ. ಅಂದಮೇಲೆ ನಮ್ಮ ಹುಡುಗರಲ್ಲಿ ಕೆಲವರ ಭವಿಷ್ಯವಾದರೂ ಉಜ್ವಲವಾಗುತ್ತದೆ ಎಂದು ನಂಬಬೇಕು.

ಗಾಯ್ಟೆ ಗೃಹಕ್ಕೆ ಯಾತ್ರೆ ಹೋದೆವು. ಇಂಗ್ಲಿಷ್ ಲೇಖಕರ ಮೇಲೆ ತೀವ್ರ ಪರಿಣಾಮವನ್ನೆಸಗಿದ "ಫಾಸ್ಟ್" ಕೃತಿಕಾರ, ಗಾಯ್ಟೆ ಎಂದರೆ ಶಾಲಾ ಬಾಲ್ಯದಿಂದಲೂ ನಮಗೆಲ್ಲಾ ಒಂದು ತೆರನಾದ ಗೌರವ. ಆಗಿನ ಕಾಲಕ್ಕೆ ಅಚ್ಚುಕಟ್ಟಾದ ಹಿತವಾಗಿ ಜಿಸಿಯಾಗಿರುವ ಮನೆ. ಅಂತಸ್ತಿನ ಮನೆ. ಶ್ರೀಮಂತನಾಗಿದ್ದನಂತೆ ಆತ, ಬಲು ಸ್ತ್ರೀಮಂತನೂ ಆಗಿದ್ದನಂತೆ ಆತ. ಆತನ ಕವನಗಳನ್ನು ಕೇಳಿ ಬುಟ್ಟಿಗೆ ಎಷ್ಟೋ ಜನ ಬಿದ್ದಿದ್ದರಂತೆ. ದೇಹದ ಪಾಡಿಗೆ ದೇಹ, ಮನಸ್ಸಿನ ಪಾಡಿಗೆ ಮನಸ್ಸು. ಎರಡನ್ನೂ ಮೀರಿದುದೊಂದು, ಅನಾದಿ

ಅನಂತದ ನೀತಿಯ ಮೇಲೆ ದೇಹ ಮನಸ್ಸು ಎರಡನ್ನೂ ನಡೆಸುತ್ತದೆ ಎಂಬುದನ್ನು, ಗಾಯ್ಟೆ ಗೃಹಕ್ಕೆ ಹೋಗಿ, ಮಾರ್ಗದರ್ಶಕರು ಹೇಳಿದ ಸಂಗತಿಗಳನ್ನು ಕೇಳಿದರೆ, ಮಂದಟ್ಟು ಮಾಡಿಕೊಳ್ಳಬಹುದು.

ಕವಿ ರೀಮರನ ಗೃಹಕ್ಕೂ ಕರೆದುಕೊಂಡು ಹೋದರು. ಗಾಯ್ಟೆಯ ಗೃಹಕ್ಕೆ ತೋರಿಸುವ ಮರ್ಯಾದೆಯನ್ನೇ ರೀಮರಿನ ಗೃಹಕ್ಕೂ ಅಲ್ಲಿನ ಜನ ತೋರಿಸುತ್ತಾರೆ. ಅಷ್ಟೇ ಭಕ್ತಿಯನ್ನೂ ಪ್ರದರ್ಶಿಸುತ್ತಾರೆ. ನಾನನಕ, ಅವತ್ತಿನ ತನಕ ಆ ಪುಣ್ಯಾತ್ಮನ ಹೆಸರನ್ನೇ ಕೇಳಿತ್ತಿಲ್ಲ. ನಮ್ಮ ಕುವೆಂಪು, ಬೇಂದ್ರೆ ಇವರುಗಳ ಹೆಸರು ಜರ್ಮನಿಯವರಿಗೆ ಬಹುಶಃ ತಿಳಿದಿರಲಿಕ್ಕೆ ಇಲ್ಲ. ಲೋಕ ಬಹಳ ವಿಶಾಲವಾದುದು ಎಂದನ್ನಿಸಿತು ಆಗ. ಆದರೆ ಅಲ್ಲಿಗೆ ಹೋಗಿದ್ದೆನಲ್ಲ. ಲೋಕ ಚಿಕ್ಕದೆ ಇರಬೇಕು, ಮನಸ್ಸು ವಿಶಾಲವಾಗಿಲ್ಲ ಇನ್ನೂ ಎಂದೆನಿಸಿತು.

ಈತನಕ ಜರ್ಮನಿಯಲ್ಲಿ ಊಟ ಉಪಚಾರ ವೈನವಾಗಿದ್ದರೂ ನಾಲಿಗೆ ಲೊಟ್ಟೆ ಹೊಡೆಯುವ ಹಾಗಾಗಲಿಲ್ಲ. ಆದರೆ ಕೈಸರ್ ಕೆಲ್ಲರ್ ರೆಸ್ಟೋರಾಂಟ್ ಎಂಬ ತೋಟದ ಹೋಟಲಿಗೆ ಅಂದು ಊಟಕ್ಕೆ ಹೋದೆವು. ಉಪ್ಪಿಟ್ಟು, ಬಿಸಿ ಬೇಳೆ ಭಾತ್ ಇವುಗಳ ಇಬ್ಬಂದಿ ತಿಂಡಿಯೊಂದನ್ನು ಅಲ್ಲಿ ನಮಗಾಗಿ ಮಾಡಿ ಬಡಿಸಿದರು. ಅವತ್ತೇ ಉಂಡು ಲೊಟ್ಟೆ ಹೊಡೆದಿದ್ದು. ಥೇಟ್ ನಮ್ಮೂರಿನ ಕೈಸುರಿತ ಹೆಂಗಸೊಬ್ಬಳು ಅಲ್ಲಿ ಅಡಿಗೆಗೆ ಇರಬೇಕು ಎಂದು ತೀರ್ಮಾನಿಸಿಕೊಂಡೆ.

ಔಷಧ ತಯಾರಿಕರಿಬ್ಬರ ಸಾಮ್ರಾಜ್ಯಗಳಿಗೂ ಭೇಟಿ ಕೊಟ್ಟೆವು. ಮರ್ಕ್ ಮತ್ತು ಹೀಕ್ಸ್ಟ್, ಜಗತ್ಪ್ರಸಿದ್ಧ ಸಂಸ್ಥೆಗಳು ಎರಡೂನು. ಪರೀಕ್ಷಾರ್ಥ ಪ್ರಯೋಗಗಳಿಗೆ ಹೆಸರು ಸಂಪಾದಿಸಿದ ಸಂಸ್ಥೆಗಳು. ಭೂಲೋಕದಲ್ಲಿ ಎಲ್ಲೆಲ್ಲೂ ಇವುಗಳ ಬೆರಳ ತುದಿಯನ್ನು ಕಾಣಬಹುದು. ನವ್ಯವೋನವ್ಯ ಅಲ್ಲಿ ಉಪಯೋಗಿಸುವ ಯಂತ್ರ ತಂತ್ರ ಸಲಕರಣೆಗಳು. ಅವರುಗಳಿಂದ ಶತಮಾನದಷ್ಟು ಹಿಂದೆ ಇದ್ದೇವೆ ನಾವು, ಎಂದರೆ ಉತ್ಪ್ರೇಕ್ಷೆಯಾಗಲಾರದು.

ಆ ಸಂಸ್ಥೆಗಳೊಂದರಲ್ಲಿ ಮಾತ್ರೆಗಳನ್ನು ಎಣಿಸಿ, ಶೀಷೆಗೆ ಹಾಕುವುದಕ್ಕೆ ಹೆಣ್ಣು ಮಕ್ಕಳು ನಿಯಮಿತರಾಗಿದ್ದಾರೆ. ಕೇವಲ ತಾಂತ್ರಿಕವಾಗಿ ಆಕೆ ಮುಂದೆ ಬಿದ್ದ ಮಾತ್ರೆಗಳನ್ನು ಬೇಗ ಬೇಗ ಎಣಿಸಿ ಶೀಷೆಗೆ ತುಂಬಿ ಮುಂದಕ್ಕೆ ಪಟ್ಟಿಯ ಮೇಲಿಟ್ಟು ಸಾಗಿಸುತ್ತಿದ್ದಳು. ಇದೊಂದೇ ಕೆಲಸ. ಹೆಚ್ಚು ಹೊತ್ತು ದುಡಿದರೆ ಹೆಚ್ಚು ಸಂಪಾದನೆ. ಅವಳ ಕೆಲಸವನ್ನು ಎರಡು ನಿಮಿಷ ನೋಡಿದೆ. ನನ್ನ ತಲೆ ಗಿರ್ರೆಂದಿತು. ''ನಿನಗೆ ಹೀಗೆ ಆಗುಲ್ಲವೇ'' ಅಂತ ಕೇಳಿದೆ. ಹೊಟ್ಟೆ ತೋರಿಸಿದಳು. ನಂತರ ಹಣೆ ಮುಟ್ಟಿ ತೋರಿಸಿದಳು. ಅಯ್ಯೋ ! ಪಾಪ ! ಎನಿಸಿತು. ಹೊಟ್ಟೆ ಪಾಡಿಗೆ ಈ ಹಣೆಯ ಬರಹ ! ಆದರೂ ಹೆಣ್ಣು ಲಕ್ಷಣವಾಗಿತ್ತು. ಲಕ್ಷಣವಾದ ಉಡುಪು ಧರಿಸಿತ್ತು. ನಮ್ಮೂರಿನಲ್ಲಿದ್ದಿದ್ದರೆ ಸುಖವಾಗಿ ಬಾಳುತ್ತಿದ್ದಳೇನೋ, ಮುತ್ತೈದೆ ಸಾವಿತ್ರಿಯಾಗಿ, ಮಕ್ಕಳ ತಾಯಾಗಿ, ಎನ್ನಿಸಿತು. ದೇಶ ಮುಂದುವರಿದಿದೆ, ಆದರೆ ಆ ದೇಶಸ್ಥರು ಹಾಯಾಗಿದ್ದಾರೆಯೋ? ಯಾಕೋ ಅನುಮಾನ ಬಂತು.

ಹೈಡಲ್ ಬರ್ಗಿನಿಂದ ಔಷಧಿ ಸಂಸ್ಥೆಗಳಿಗೆ ಹೋಗುವ ಎರಡೂ ಕಾಲು ಬದಿಯ ಸಾಲು ಮರಗಳು ಯಾವುವು ಅಂತೀರಿ. ಸೇಬಿನ ಹಣ್ಣಿನ ಗಿಡಗಳು. ಬಸ್ಸಿನ ಚಾಲಕ ಕಾಲು ಚಾಚಿ ಅಡ್ಡಾಡಲು ಗಾಡಿಯನ್ನು ರಸ್ತೆಯ ಬಳಿಯಲ್ಲಿ ನಿಲ್ಲಿಸಿದ. ಇಳಿದ, ಎರಡು ನಿಮಿಷ ಓಡಾಡಿ ಕಾಲಿನ ಝೋಮನ್ನು ಸರಿಪಡಿಸಿಕೊಳ್ಳಲು.

ಸಾಲು ಮರದ ರೆಂಬೆಯ ತುದಿ ಬಸ್ಸಿನೊಳಕ್ಕೆ ಕಿಟಕಿಯ ಮೂಲಕ ಚಾಚಿಕೊಂಡಿತು. ಮೂರು ದೋರೆ ಸೇಬಿನ ಹಣ್ಣುಗಳಿದ್ದುವು. ಎಳೆ ಮಕ್ಕಳ ತರಹ ಬಸ್ಸಿನಲ್ಲಿದ್ದ ನಾವು ಜಗಳ ಕಾದೆವು. ನಮ್ಮ ಗಲಾಟೆ ನೋಡಿ ಬಸ್ ಚಾಲಕ ಸಾಲು ಮರಗಳಿಂದ ಕೆಲವು ಸೇಬಿನ ಹಣ್ಣುಗಳನ್ನು ಕಿತ್ತುಕೊಟ್ಟ. ಬಸ್ಸಿನ ಮೇಲೆ ನಿಂತರೆ ಸುಲಭವಾಗಿ ಎಟುಕುತ್ತಿತ್ತು, ಸೇಬಿನ ಹಣ್ಣುಗಳು.

ಗಿಡದ ಮೇಲಿಂದ ದೋರೆ ಸೇಬಿನ ಹಣ್ಣನ್ನು ಜರ್ಮನಿಯಲ್ಲಿ ಕಿತ್ತು ತಿಂದರೆ, ಅದೊಂದು ಸ್ವರ್ಗ ಸುಖ. ಗಿಡದಿಂದ ಇಳಿಸಿದಾಗ ಸೇಬಿನ ಹಣ್ಣಿಗೆ ಒಂದು ತೆರನಾದ ಘಮ ಇರುತ್ತೆ. ಕೆಲವೇ ಹೊತ್ತಿನಲ್ಲಿ ಆ ವಾಸನೆ  ಹೋಗಿಬಿಡುತ್ತೆ. ಹದನಾಗಿ ಮರಳು ಮರಳಾಗಿ ಹಣ್ಣು ಹಲ್ಲಿಗೆ ಮುತ್ತು ಕೊಡುತ್ತೆ. ಎಲ್ಲಕ್ಕೂ ಮಿಗಿಲಾಗಿ ಪುಕಟ್ಟು ಸಿಕ್ಕಿದ ಹಣ್ಣು. ಮಾಲೀಕನಿಗೆ ತಿಳಿಯದ ಹಾಗೆ ಹೊಡೆದಿದ್ದೆವು. ಅಂದಮೇಲೆ ರುಚಿ ಕೇಳಬೇಕೇ ?

"ಆ ಹಣ್ಣನ್ನು ನನಗೆ ಕೊಡ್ರಿ, ಅದರ ಕೆನ್ನೆ ಬಲು ಕೆಂಪಾಗಿದೆ," ಎಂದು ಕೆಂಪು ಕೆನ್ನೆಯಾಕೆ ಕೇಳಿದ್ದಳು. ಕೆನ್ನೆಯನ್ನು ಕಚ್ಚುವುದರಲ್ಲಿದ್ದೆ. ಆಕೆ ಹೇಳಿದ ಕೂಡಲೇ ಕೇಳಿಸದವನಂತೆ ಹಣ್ಣಿನ ಕೆನ್ನೆಯನ್ನು ಕಚ್ಚೇಬಿಟ್ಟೆ. "ಏನಂದಿರಿ ?" ಎಂದು ತುಂಬಿದ ಬಾಯಿಂದ ಛೊಳೆ ಮಾಡಿದೆ.

"ಏನೂ ಅನ್ನಲಿಲ್ಲ" ಅಂದಿತು, ಆ ಕೆಂಪು ಕೆನ್ನೆಯಾಕೆ.

ಇನ್ನೊಬ್ಬರು ಬಯಸಿದ್ದು ನಮಗೆ ಸಿಕ್ಕಿದರೆ ಹಣ್ಣು ಬಲು ರುಚಿಯಾಗಿರುತ್ತೆ ಎಂದು ಅನುಭವವಾಯ್ತು.

ಕೈಸರ್‌ಕೆಲ್ಲರಿನ ನಮ್ಮನೆ ತರಹ ಉಪ್ಪಿಟ್ಟು. ಆಮೇಲೆ ಈ ಸೇಬಿನ ಹಣ್ಣು. ದಿಟವಾಗಲೂ ಅವತ್ತೇ ಹೊಟ್ಟೆ ತಂಪಾಯಿತು. ಬಸ್ಸಿನಲ್ಲಿ ಒರಗಿ ಕೂತು, ಬ್ರೌನಿಂಗಿನ ಜತೆಗೂ ಹಾಡಿದೆ.

God is in His Heaven

And all is right with the World.

# "ಬರ್ಲಿನ್"

ರಾತ್ರಿ 11-20 ಗಂಟೆಯ ವೇಳೆಗೆ ಬರ್ಲಿನ್ನಿನ ಟೆಂಪಲ್ ಹಾಫ್ ವಿಮಾನ ನಿಲ್ದಾಣದಲ್ಲಿ ಇಳಿದೆವು. ನಿಶಿ ರಾತ್ರಿ 12ರ ಹೊತ್ತಿಗೆ ನಮ್ಮ ಹೋಟಲನ್ನು ತಲುಪಿದೆವು. ಆದರೆ ಆ ನಿಶಿ ರಾತ್ರಿಯಲ್ಲೂ ಬೀದಿ ದೀಪಗಳು, ಅಂಗಡಿ ದೀಪಗಳು. ಜಾಹಿರಾತಿನ ಧಗಧಗ ಬೆಳಕುಗಳು, ಎಲ್ಲವೂ, ರಸ್ತೆಯಲ್ಲಿ ಪುಸ್ತಕ ಓದುವಷ್ಟು ಬೆಳಕು ಚೆಲ್ಲುತ್ತಿದ್ದುವು. ಹೋಟಲಿನಲ್ಲಿ ನನಗೆಂದು ಗೊತ್ತು ಮಾಡಿದ್ದ ಕೊಠಡಿಗೆ ಹೋದೆ. ಎರಡನೆ ಅಂತಸ್ತಿನಲ್ಲಿತ್ತು. ರಸ್ತೆಯೆಲ್ಲಾ ಕಿಟಕಿಯಲ್ಲಿ ಕಾಣುವಂತಿತ್ತು. ಹೊಸ ಜಾಗ, ಬೇಗ ನಿದ್ರೆ ಬರಲಿಲ್ಲ. ಕಿಟಕಿಯಲ್ಲಿ ಹತ್ತಿರ ಹೋಗಿ ದೃಷ್ಟಿ ಹಾಯಿಸಿದೆ ಆ ನಿಶಿ ರಾತ್ರಿಯಲ್ಲೂ ಅಂಗಡಿಗಳ ದೀಪ ಉರಿಯುತ್ತಿತ್ತು. ಜನರು ಆಡ್ಡಾಡುತ್ತಲೇ ಇದ್ದರು. ಮೋಟಾರುಗಳು ಓಡಾಡುತ್ತಿದ್ದುವು. ಪೋಲೀಸಿನವರು ಅಲ್ಲಲ್ಲಿ ಕಾಣಿಸುತ್ತಿದ್ದರು. ಈ ಜನ ಯಾವಾಗ ನಿದ್ರೆ ಮಾಡ್ತಾರೆ, ಬೆಳಿಗ್ಗೆ ಎಷ್ಟು ಹೊತ್ತಿಗೆ ಏಳುತ್ತಾರೆ ? ಎಂದು ಅನ್ನಿಸಿತು. ಸ್ವಲ್ಪ ಛಳಿಯಾಯ್ತು. ಕಿಟಕಿ ಮುಚ್ಚಿ, ಹಾಸಿಗೆಯ ಮೇಲೆ ಬಿದ್ದು ಕೊಂಡೆ. ಜಾಹೀರಾತಿನ ಬೆಳಕು ಕಣ್ಣು ಚುಚ್ಚುತ್ತಿತ್ತು, ಗಾಜಿನ ಕಿಟಕಿ, ಹೇಗಪ್ಪಾ ನಿದ್ರೆ ಬರುತ್ತೆ ? ಎಂದು ನೋಡಿದೆ. ದಪ್ಪ ಕಪ್ಪು ಬಟ್ಟೆಯ ಪರದೆ ಕಿಟಕಿಯ ಪಕ್ಕದಲ್ಲಿ ಸುರುಳಿ ಸುರುಳಿಯಾಗಿ ಕಾಣಿಸಿತು. ಅದನ್ನು ಕಿಟಕಿಯ ಮುಂದೆ ಸೆಳೆದಾಗ, ಮಲಗಲು ಅನುಕೂಲವಾಯ್ತು.

ಬೆಳಿಗ್ಗೆ ಎದ್ದು ಬರ್ಲಿನ್ನಿನ ಎರಡು ಆಸ್ಪತ್ರೆಗಳನ್ನು ನೋಡಿಕೊಂಡು ಬಂದೆವು. 150 ಹಾಸಿಗೆಗಳಿದ್ದ, ಪಾಠ ಕಲಿಸುವ, ಹೆಂಗಸರ ಆಸ್ಪತ್ರೆಯೊಂದು. ಇನ್ನೊಂದು ಜನರಲ್ ಆಸ್ಪತ್ರೆ. ಎರಡೂ ಆಸ್ಪತ್ರೆಗಳ ಸೂಪರಿಂಟೆಂಡರುಗಳು "ಯುದ್ಧ ಆದಾಗ ನಮ್ಮ ಆಸ್ಪತ್ರೆಗಳು ನೆಲಸಮ ವಾಗಿದ್ದುವು. ಎರಡನೆ ಮಹಾಯುದ್ಧಾನಂತರ ಇವನ್ನು ತಿರುಗಿ ಈ ರೀತಿ ನೂತನ ಮಾದರಿಯಲ್ಲಿ ಕಟ್ಟಿದೆವು" ಎಂದು ಒಂದು ರೀತಿಯ ಜಂಭ ಕೊಚ್ಚಿಕೊಂಡರು. ಚಿಕ್ಕದಾದರೂ ಚೊಕ್ಕವಾಗಿದ್ದ ಆಸ್ಪತ್ರೆಗಳು. ಆಧುನಿಕ ಸಲಕರಣೆಗಳಿಂದ ಸಮೃದ್ಧಿಯಾಗಿ ಅಣಿಯಾಗಿದ್ದುವು. ಡಾಕ್ಟರುಗಳೂ ಸುಖಮುಖಿಗಳಾಗಿದ್ದರು. ದಾದಿಯರೂ ಪುಷ್ಟಪುಷ್ಟಾಗಿದ್ದರು. ರೋಗಿಗಳೂ ನಗುನಗುತ್ತಿದ್ದರು.

ಇದರ ಮರ್ಮ ಏನಿರಬಹುದು ? ಎಲ್ಲರೂ ಹೇಗೆ ಖುಷಿಯಾಗಿದ್ದಾರೆ ? ಆಮೇಲೆ ರಹಸ್ಯ ಬಯಲಾಯಿತು. ಆರೋಗ್ಯ ವಿಮಾ ಮಾಡಿಕೊಂಡಿರುತ್ತಾರೆ ಎಲ್ಲರೂ ಕಡ್ಡಾಯವಾಗಿ. ರೋಗ ಬಂದಾಗ, ಆಸ್ಪತ್ರೆಗಳಲ್ಲಿ ಅವಕಾಶ ಇದ್ದಷ್ಟು ಮಾತ್ರ, ದಾಖಲು ಮಾಡಿಕೊಳ್ಳುತ್ತಾರೆ. ಹೆಚ್ಚು ರೋಗಿಗಳು ಬಂದರೆ ಬೇರೆ ಬೇರೆ ಆಸ್ಪತ್ರೆಗಳಿಗೆ ಕಳುಹಿಸಿಕೊಡುತ್ತಾರೆ. ಎಲ್ಲ ಖರ್ಚು ವಿಮಾ ಕಂಪನಿಯದು. ರಾಜ್ಯ ಸರ್ಕಾರವು ಬೆಂಬಲ ನೀಡುತ್ತದೆ. ಅಂದಮೇಲೆ ನಗು ಮುಖ ಇಲ್ಲದೆ ಏನು ? ನಮ್ಮೂರಿನ ಹಾಗೆ 20 ರೋಗಿಗಳು ಮಲಗುವ ವಾರ್ಡಿನಲ್ಲಿ 40 ರೋಗಿಗಳನ್ನು ಮಲಗಿಸಬೇಕು. ಮಂಚದ ಮೇಲೊಬ್ಬ, ಮಂಚದ ಪಕ್ಕದ ನೆಲದಲ್ಲೊಬ್ಬ, ರೋಗಿಗಳನ್ನು ದಾಟಿಕೊಂಡೇ ದಾದಿಯರು ಡಾಕ್ಟರುಗಳು, ವಾರ್ಡ್‌ಬಾಯಿಗಳು ಓಡಾಡಬೇಕು. ಅಡಿತಪ್ಪಿ ರೋಗಿಯ ಚಾಚಿದ್ದ ಕೈ ಮೇಲೋ ಕಾಲ ಮೇಲೋ ಬೀಳಲೂ ಬಹುದು. ಈ ಗಲಾಟೆಯಲ್ಲಿ ಶುಶ್ರೂಷೆ ಮಾಡುವ ವಾರ್ಡ್‌ಬಾಯಿಗೆ, ಬಾಯಿಯೇ ಹಿರಿಯ ಸಾಧನೆ. ಇಲ್ಲ ಬೈಯ್ಯಕ್ಕೆ, ಅಥವಾ ರೋಗಿಗಳಿಗೆ ಕೊಟ್ಟ ಆಹಾರವನ್ನು ಹಾಕಿಕೊಳ್ಳುವುದಕ್ಕೆ. ಬಡತನ, ಅವಿದ್ಯೆ, ವಾತಾವರಣ, ಎಲ್ಲವೂ ಬಾಯಿಯೊಂದನ್ನೇ ಬೆಳೆಸುತ್ತವೆ. ಅದಕ್ಕೆ ಏನೋ ವಾರ್ಡ್ ಬಾಯಿ ಅಂತ ಕರೆಯುವುದು. ಇಂಗ್ಲೀಷ್ ಕನ್ನಡದ ಮಧುರ ಸಮ್ಮಿಳನ.

ಮಧ್ಯಾಹ್ನ ಊಟವಾದಮೇಲೆ ಊರ ಪ್ರದಕ್ಷಿಣೆಗೆ ಹೋದೆವು. ಪಶ್ಚಿಮ ಬರ್ಲಿನ್ನಿನ ಮುಖ್ಯ ಕಟ್ಟಡ, ಸಂಸ್ಥೆಗಳನ್ನು ನೋಡಿದ್ದಾಯಿತು.

ಪೂರ್ವಬರ್ಲಿನ್ನಿಗೆ ಹೋದೆವು. ಹೆದ್ದಾರಿಯಲ್ಲೇ ಬ್ರಾಂಡನ್‌ಬರ್ಗ್ ಗೇಟಿನ ಬಳಿ ಪಹರೆ ಇದ್ದರೆ ರಷ್ಯನ್ ಸೈನಿಕರು ಬಸ್ಸನ್ನು ನಿಲ್ಲಿಸಿ, ತನಿಖೆ ಮಾಡಲಾರಂಭಿಸಿದರು. ನಾವೆಲ್ಲರೂ ಇಂಡಿಯನ್ನರು ಎಂದು ತಿಳಿದಾಗ, ಬಲು ಬೇಗ ನಗು ಮುಖದಿಂದ ಸ್ವಾಗತಿಸಿದರು. ಪೂರ್ವ ಬರ್ಲಿನ್ನಿನ ಸುತ್ತಾಟವಾಯಿತು. ಪಶ್ಚಿಮ ಬರ್ಲಿನ್ನಿನ, ಬಲ ತಂಗಿ ಇದ್ದಂತಿತ್ತು. ಆದರೂ ಅಲ್ಲಿ ಇಲ್ಲಿ ಭವ್ಯ ಕಟ್ಟಡಗಳು ಕಟ್ಟಲ್ಪಟ್ಟಿವೆ. ಮಾದರಿಗೋಸ್ಕರವೋ ಏನೋ ಅನ್ನುವಂತೆ. ಭಾಷೆ ಅರ್ಥವಾಗದು ; ನಮ್ಮದೋ ಎರಡು ತಾಸಿನ ಭೇಟಿ. ಅಲ್ಲಿನ ಜನರ ಹತ್ತಿರ ಮಾತನಾಡಿ ವಿಷಯ ತಿಳಿದುಕೊಳ್ಳುವಂತಿಲ್ಲ. ಅವರ ದುಃಖ ಏನೋ ? ಅವರ ದುಗುಡ ಯಾವುದೋ ? ಬ್ರಹ್ಮ ಬಲ್ಲ. ಆದರೆ ನಾವು ಕಂಡವರೆಲ್ಲ ಆರೋಗ್ಯಶಾಲಿಗಳೇ ! ಯಾರೂ ನಮ್ಮೂರಿನ ಶಾಲಾ ಮಾಸ್ತರುಗಳ ತರಹ ಅರೆ ಹೊಟ್ಟೆ ತಿಂದಂತೆ ಕಾಣಿಸಲಿಲ್ಲ. ಎಲ್ಲರೂ ಮೈ ತುಂಬ ಬಟ್ಟೆ ಬರೆ ಧರಿಸಿದ್ದರು. ಜರ್ಮನ್ ಮುಖಗಳು, ಬಲು ಬೇಗ ಮನಸ್ಸಿನ ಹಾವಭಾವಗಳನ್ನು ಪ್ರದರ್ಶಿಸುತ್ತಿರಲಿಲ್ಲ.

ಹಿಂತಿರುಗಿ ಸಂಜೆಯ ವೇಳೆಗೆ ಹೋಟಲಿಗೆ ಬಂದೆವು. ಉಂಡೆವು ಮಲಗಿದೆವು.

ರಾತ್ರಿಯೆಲ್ಲ ಕೆಟ್ಟ ಕೆಟ್ಟ ಕನಸುಗಳು. ಹಿಟ್ಲರ್, ಈವ, ದಂಪತಿಗಳು ಬಂದು, ಮಸಾಲ್ ದೋಸೆ ಕೊಡಿಸು ಅಂದಹಾಗೆ :- ಗೋಬೆಲ್ಸ್ ಬಂದು ಕಟ್ಟು ಕತೆ ಹೇಳಿ

ಕೊರವಂಜೀನ ನನಗೆ ಕೊಡು ಎಂದಹಾಗೆ :— ಗಾಯ್ಪೆ ಎದುರಾಗಿ, ಎಲ್ಲಿ ಶಕುಂತಳಾ ಹೇಳಿದ್ದು ಹೇಳು ಅಂದಹಾಗೆ :— ಕೊಕ್ಕರೆ ಹೆಜ್ಜೆ ಹಾಕಿಕೊಂಡು ಜರ್ಮನ್ ಸೋಲ್ಜರುಗಳು ಎದೆ ಮೇಲೆ ನಡೆದಹಾಗೆ :— ಹಿಟ್ಲರನ ಸೈನ್ಯ ವಿಮಾನಗಳು ಕಿವಿಯಲ್ಲೇ ಹಾರಿ ಹೋದ ಹಾಗೆ :— ಅಂತರ್ಜಲಗಾಮಿ ಎಂಡನ್ ತರಹ ನೌಕೆಗಳು ಕರುಳಿನಲ್ಲೇ ನುಸುಳಿದ ಹಾಗೆ :-

ಎರಡು ಮೂರು ಬಾರಿ ಆ ರಾತ್ರಿ ಎದ್ದೆ. ಬೆಚ್ಚತ್ತು ಎದ್ದೆ. ಬರ್ಲಿನ್ನಿನಲ್ಲಿ ಬಡಿಸಿದ ತರಕಾರಿ ಬಲು ಪೈತ್ಯಕಾರಿಯಾಗಿದ್ದಿರಬೇಕು !

ವಿಶ್ವ ಮೆಡಿಕಲ್ ಸಮ್ಮೇಳನವು ಈ ವರ್ಷ ಬರ್ಲಿನ್ನಿನಲ್ಲಿ ನಡೆಯುವುದಿತ್ತು. ಪ್ರೇಕ್ಷಕರಾಗಿ ನಮ್ಮನ್ನು ಆಹ್ವಾನಿಸಿದ್ದರು. ಈ ಆಹ್ವಾನಕ್ಕೆ ಕೇವಲ 50 ರೂಪಾಯಿ ಶುಲ್ಕ. ಸಮ್ಮೇಳನವು ಬರ್ಲಿನ್ನಿನಲ್ಲಿನ ಕಾಂಗ್ರೇಸ್ ಮಂದಿರದಲ್ಲಿ ಸೇರುತ್ತಿತ್ತು. ಈ ವಿಚಿತ್ರ ಭವನವು ದೂರದಿಂದ ಮಕ್ಕಳನ್ನು ತೂಕ ಮಾಡುವ ತಕ್ಕಡಿಯಂತಿದೆ. ಯುದ್ಧಾನಂತರ ಅಮೇರಿಕಾ ದವರು ಪಶ್ಚಿಮ ಬರ್ಲಿನ್ನಿಗಿತ್ತ ಬಳುವಳಿ, ಈ ಮಂದಿರ. ಸಹಸ್ರಾರು ಮಂದಿ ಸುಖವಾಗಿ ಕುಳಿತುಕೊಳ್ಳಬಹುದು. ಪ್ರತಿಯೊಂದು ಪೀಠಕ್ಕೂ "Ear Phones" ಸೌಕರ್ಯ. ಭಾಷಣಕಾರರು ಜರ್ಮನ್ ಭಾಷೆಯಲ್ಲಿ ಮಾತನಾಡಿದಾಗ, ಭಾಷಾಂತರವನ್ನು ಇಂಗ್ಲೀಷ್, ಫ್ರೆಂಚ್ ಮತ್ತು ಇಟಾಲಿಯನ್ ಭಾಷೆಯಲ್ಲಿ ಜತೆ ಜತೆಯಲ್ಲೇ ಪ್ರಸಾರ ಮಾಡುತ್ತಾರೆ. ಮಂದಿರದಲ್ಲಿ ಉಪಹಾರದ ಮಂದಿರಗಳು, ವಿಶ್ರಮಿಸಿಕೊಳ್ಳಲು ಬೈಠಕ್‌ಖಾನೆಗಳೂ, ಎಲ್ಲವೂ ಬಲು ಅನುಕೂಲವಾಗಿ ಸಜ್ಜಾಗಿದ್ದುವು.

ಅಮೆರಿಕನ್ ಆ ವರ್ಷ ಅಧ್ಯಕ್ಷನಾಗಿದ್ದ ಜರ್ಮನಿಯವನಾದ ಅಧ್ಯಕ್ಷನಾಗಿ ಹೊಸ ವರ್ಷಕ್ಕೆ ಆಯ್ಕೆಯಾದವನಿಗೆ ಆತ ಅಧಿಕಾರ ವಹಿಸಿಕೊಡಬೇಕಾಗಿತ್ತು. ಅಧಿಕಾರ ವಹಿಸಿಕೊಳ್ಳುವ ಮುನ್ನ ಹೊಸ ಅಧ್ಯಕ್ಷರು ಪ್ರತಿಜ್ಞಾ ವಚನವನ್ನು ನುಡಿಯಬೇಕು. ಜರ್ಮನಿಯ ವೈದ್ಯ ಹೊಸ ಅಧ್ಯಕ್ಷ, ತನ್ನ ಮಾತೃಭಾಷೆ ಜರ್ಮನ್‌ನಲ್ಲಿ ಆತ ಪ್ರತಿಜ್ಞೆಯನ್ನು ಬಹಿರಂಗವಾಗಿ ಘೋಷಿಸಿದ. ನಮಗೊಂದು ಮಾತೂ ಅರ್ಥವಾಗಲಿಲ್ಲ. ಹಳೆಯ ಅಧ್ಯಕ್ಷ, ಅಮೆರಿಕನ್, ಅವನಿಗೂ ಅರ್ಥವಾಗಲಿಲ್ಲ. ಘಂಟಾಘೋಷವಾಗಿ ಆತ "ನಾನು ಇಂಗ್ಲೀಷಿನಲ್ಲಿ ಹೇಳಿದ್ದನ್ನೇ ಈತನೂ ಜರ್ಮನ್ ಭಾಷೆಯಲ್ಲಿ ಹೇಳಿದ ಅಂತ ನಂಬುತ್ತೇನೆ. ಆ ನಂಬುಗೆಯ ಮೇಲೆ ಈಗ ಈ ಅಧಿಕಾರವನ್ನು ಆತನಿಗೆ ವಹಿಸಿಕೊಡುತ್ತೇನೆ" ಎಂದು ಹೇಳಿದ. ಅಧಿಕಾರ ವಹಿಸಿಕೊಂಡ ಅಧ್ಯಕ್ಷ ಸುಮಾರು ಹೊತ್ತು ಭೈರಿಗೆ ಕೊರೆದ. ಅತ್ತ ಇತ್ತ, ಅಕ್ಕ ಪಕ್ಕ, ಮೇಲೆ ಕೆಳಗೆ ಹಿಂದೆ ಮುಂದೆ ನೋಡುತ್ತಾ ಕಾಲ ಕಳೆದೆ. ಆತನೂ ಭಾಷಣ ಮುಗಿಸಿದ. ಮಳೆ ನಿಂತಮೇಲೆ ಮರ ಹನಿ ಹಾಕಿದಂತೆ, ಭಾಷಾಂತರ ತುಸು ಕಾಲ ಮುಂದುವರೆಯಿತು. ಮುಂದಿನ ಕಾರ್ಯ ಕಲಾಪಗಳು ಆರಂಭವಾಗುವ ಮೊದಲೇ ಮೆಲ್ಲಗೆ ನುಸುಳಿಕೊಂಡು ಕಾಫಿ ಬಾರಿನ ಬಳಿ ಹೋದೆ. ಸಭಾಮಂದಿರದಲ್ಲಿದ್ದವರಲ್ಲಿ ಅರ್ಧ ಜನ ನನ್ನ ಹಿಂದೆಯೇ ಬಂದಿದ್ದರು.

ಅಂದಮೇಲೆ ಆಮೇಲೆ ಕಾರ್ಯಕಲಾಪಗಳು ಸುಗಮವಾಗಿ ಆಗಿದ್ದಿರಬೇಕು !

ವಿಶ್ವ ವೈದ್ಯ ಸಮ್ಮೇಳನಕ್ಕೆಂದು ಬಂದಿದ್ದವರ ಗೌರವಾರ್ಥ, ಜರ್ಮನಿಯ ಔಷಧ ತಯಾರಕರ ಬೆಂಬಲದಿಂದ, ಔತಣ ಕೂಟವೊಂದನ್ನು ಏರ್ಪಡಿಸಿದ್ದರು. ಭವ್ಯವಾದ ಹೋಟಲಿನ ಊಟದ ಮಹಲಿನಲ್ಲಿ 4000 ಜನರು ಆರಾಮ ಕೂರಬಹುದಿತ್ತು. ಆ ಮಹಲಿನಲ್ಲಿ 5000 ಜನರೋ ಇನ್ನೂ ಹೆಚ್ಚೋ ಜನರು ರಾತ್ರಿ ಗಿರ್ಕಾಯಿಸಿದ್ದರು. ಒಂದು ತೋಳನ್ನೋ ತೊಡೆಯನ್ನೋ ತಟ್ಟದೆ ಮುಂದೆ ಹೆಜ್ಜೆ ಇಡುವಂತಿರಲಿಲ್ಲ. ಹೆಜ್ಜೆ ಇಟ್ಟು ಮುಂದೆ ನುಗ್ಗದೆ ಇದ್ದರೆ ''ಬಫೆ'' ಊಟ ಸಿಗುವಂತಿರಲಿಲ್ಲ. ಜತೆಗೆ ಪಾನೀಯಗಳ ಮಾಣಿಗಳ ಸಂಭ್ರಮ. ನಮ್ಮೂರಿನಲ್ಲಿ ಭೂರಿ ದಕ್ಷಿಣೆ ಅಂತ ಹಿಂದಿನ ಕಾಲದಲ್ಲಿ, ರಾಜ, ಮಹಾ ರಾಜರುಗಳು ಸತ್ತಾಗ, ಹಂಚುತ್ತಿದ್ದರು. ಆಗಿನ ಗಲಾಟೆ ಕೂಡ, ಈ ಔತಣದ ಗಲಭೆ ಮುಂದೆ ಲೆಕ್ಕಕ್ಕೆ ಬರುತ್ತಿರಲಿಲ್ಲ. ದಂಡಿನಲ್ಲಿ ನುಗ್ಗಿದವನೇ ಉಂಡವ. ಊಟದ ಶಾಸ್ತ್ರ ಆದಮೇಲೆ ಭಾಷಣಗಳ ಜಿಗಿತ ಇರಬಹುದು ಅಂತ ಹೆದರಿ, ಅಲ್ಲಿಂದ ಹೊರಬಿದ್ದೆವು. ಯಾವ ಊರ ದಾಸಯ್ಯ, ಯಾಕೆ ಹೋಗ್ತಾ ಇದಿ ? ಎಂದು ಯಾರೂ ಕೇಳಲಿಲ್ಲ. ಕೇಳಿದ್ದರೆ ಅಚ್ಚ ಕನ್ನಡವಲ್ಲಿ ಉತ್ತರ ಹೇಳೋಣ ಎಂದುಕೊಂಡಿದ್ದೆ. ಅವಕಾಶ ಸಿಗಲಿಲ್ಲ. ಕನ್ನಡಾಂಬೆಯ ಪ್ರಭಾವವನ್ನು ಬಿತ್ತರಿಸಲು ಪುಣ್ಯವಿತ್ತಿಲ್ಲ.

ಬರ್ಲಿನ್ನಿನ ಪ್ರಾಣಿಸಂಗ್ರಹಾಲಯ ಪ್ರಸಿದ್ಧವಾದುದು, ಒಂದು ಕಾಲದಲ್ಲಿ. ಭಾನುವಾರ ಅಲ್ಲಿಗೆ ಹೋದವು. ವಿಶಾಲವಾದ ಸ್ಥಳ. ಹುಡುಗರ ಆಟಪಾಟಗಳಿಗೆ ಸಾಕಷ್ಟು ಸೌಕರ್ಯ, ಮಕ್ಕಳು ಮರಿಗಳನ್ನೆಲ್ಲಾ ತಂದೆ ತಾಯಂದಿರು 'ರಜಾ' ಅನುಭವಿಸಲು 'ಝೂ'ಗೆ ಕರೆದುಕೊಂಡು ಬಂದಿದ್ದರು. ಮಕ್ಕಳ ತುಂಟಾಟ ; ಅವನ್ನು ಹದ್ದಿನಲ್ಲಿಡಲು ತಂದೆತಾಯಂದಿರು ಪಡುತ್ತಿದ್ದ ಕಷ್ಟ ; ಇವೆಲ್ಲವನ್ನೂ ನೋಡುವುದರಲ್ಲೆ ಊಟದ ಹೊತ್ತಾಯಿತು. ಪ್ರಾಣಿಗಳನ್ನು ಬೋನಿನೊಳಗೆ ನೋಡುವುದಕ್ಕಿಂತ, ಕಂಡವರ ಮಕ್ಕಳು ಹೊರಗೆ ಆಡುವುದನ್ನು ನೋಡಿದರೇ ಚೆನ್ನು ಎನಿಸಿತು. ಹುಲಿಯ ಹಾಗೆ ಆರ್ಭಟಿಸುವ ಹುಡುಗ, ಹಂಸದಂತೆ ನಡೆಯುವ ವೈಯ್ಯಾರಿ ಹುಡುಗಿ. ಹಾವಿನಂತೆ ಬುಸುಗುಡುವ ಬಾಲಕ, ನವಿಲಿನಂತೆ ಕುಣಿಯುವ ಚಿನಾಲಿ, ಹಲ್ಲಿಯಂತೆ ಲೊಚಗುಟ್ಟುವ ಯುವಕ, ನಳ್ಳಿಯಂತೆ ಬೆರಳಾಡಿಸುವ ಯುವತಿ. ರಜಾದಿನ ಮಕ್ಕಳು, ದೋರೆಗಾಯಿ ಮಕ್ಕಳು, ಆಡುವ ಆಟ, ನೋಡಲು ಚೆನ್ನು. ನಮ್ಮ ಮೈಸೂರಿನ ಪ್ರಾಣಿಸಂಗ್ರಹಾಲಯವನ್ನು ವಿಶಾಲಗೊಳಿಸಿದರೆ, ಬರ್ಲಿನ್ನಿನದನ್ನೂ ಸುಲಭವಾಗಿ ಮೀರಿಸಬಹುದು.

ಮುದ್ರಣ ಕುಶಲತೆಗೆ ಜರ್ಮನಿಯು ಪ್ರಸಿದ್ಧ. ಬಣ್ಣದ ಮುದ್ರಣಕ್ಕೆ ಹೆಸರುವಾಸಿ. ಅಂದಮೇಲೆ ಯೂರೋಪಿನ ಹೆಸರಾಂತ ವರ್ಣಚಿತ್ರಕಾರರ ಅಮರ ಕೃತಿಗಳ ಸುಂದರ ನಕಲುಗಳು ಬರ್ಲಿನ್ನಿನಲ್ಲಿ ಸಿಗಬಹುದು ಎಂದು ವಿಚಾರಿಸಿದೆ. ಹಲವಾರು ಅಂಗಡಿಗಳಿದ್ದುವು. ಒಂದಂಗಡಿಗೆ ಹೋದೆ. ಲೆನಾರ್ಡೊಡವಿಂಚಿ ; ರೂಬೆನ್, ಗೆಯ್ನ್ಸ್ ಬರೋ, ಪಿಕಾಸೊ, ಮ್ಯಾಟಿಸ್ಸೆ, ಮೈಕೆಲಂಜಿಲೊ, ವಾನ್‌ಗಾಗ್, ಇತ್ಯಾದಿ ಇತ್ಯಾದಿ ಚಿರಂಜೀವಿ

ಗಳ ಅಮರ ಕೃತಿಗಳ ನಕಲುಗಳಿದ್ದುವು. ಈ ಜನ್ಮದಲ್ಲಿ ಮೂಲ ಕೃತಿಗಳನ್ನು ಕೊಳ್ಳುವಂತಿಲ್ಲ. ಒಂದೊಂದಕ್ಕೂ 10-20 ಲಕ್ಷ ರೂಪಾಯಿಗಳ ಮೌಲ್ಯ. ಬದಲು ಇದ್ದುದರಲ್ಲಿ ಚೆನ್ನಾಗಿದ್ದ ನಕಲು ಸಿಕ್ಕರೆ ಸಾಕು ಎಂದು ನೋಡಿದೆ. 15-50 ರೂಪಾಯಿಗಳ ಮೌಲ್ಯಕ್ಕೆ ಮುದ್ರಿತ ಪ್ರತಿಗಳು ಸಿಗುತ್ತಿತ್ತು. 100 ಪ್ರತಿಗಳನ್ನು ಮುದ್ರಿಸಿದರೆ ಹತ್ತೋ ಹದಿನೈದೋ ಲಕ್ಷಣವಾಗಿ ಬರುತ್ತಿದ್ದುವಂತೆ ಅವುಗಳಿಗೆ ಈ ಮೌಲ್ಯ. ಮಿಕ್ಕ ತುಸು ರಂಗು ಮೇರೆ ಮೀರಿದ ಪ್ರತಿಗಳಿಗೆ 2-3 ರೂಪಾಯಿಗಳ ಬೆಲೆ.

ಇದ್ದಬದ್ದ ದುಡ್ಡನ್ನೆಲ್ಲಾ ಹಾಕಿ, ಐದಾರು ಪ್ರತಿಗಳನ್ನು ಕೊಂಡೆ. ಅವನ್ನೂ ಕೆಡಿಸದೆ ನಮ್ಮೂರಿಗೆ ಟ್ರಂಕಿನಲ್ಲಿ ತರುವುದು ಹೇಗೆ ? ಅಂಗಡಿಯವಳಿಗೆ ನನ್ನ ಸಮಸ್ಯೆ ಹೇಳಿದೆ. "ಇವನ್ನೆಲ್ಲಾ ಸುರಕ್ಷಿತವಾಗಿ ನಿಮ್ಮೂರಿಗೆ ಅಂಚೆ ಮೂಲಕ ಕಳಿಸುತ್ತೇನೆ. ಭದ್ರವಾಗಿ ಪ್ಯಾಕ್‌ಮಾಡಿ ರವಾನಿಸುತ್ತೇನೆ. ಈ ಚಿತ್ರಗಳ ಮೇಲೆ ನಿಮಗೆಷ್ಟು ಮಮತೆ ಎನ್ನುವುದು ಗೊತ್ತು. ಅಷ್ಟೇ ಮಮತೆಯಿಂದ ಕಳಿಸುತ್ತೇನೆ" ಎಂದು ಆಕೆ ಸಮಸ್ಯೆಗೆ ಪರಿಹಾರ ನೀಡಿದಳು.

ನಮ್ಮ ಊರಿಗೆ ಹಿಂತಿರುಗಿದ ಎರಡು ತಿಂಗಳ ಮೇಲೆ ಬೆಂಗಳೂರಿನ ಅಂಚೆಯವನು ಅಡ್ಡಗಲದ ಪ್ಯಾಕೆಟ್ ಒಂದನ್ನು ತಂದುಕೊಟ್ಟ. "ಬಹುಮಾನ" ಅಂತ ಪ್ಯಾಕೆಟ್ ಮೇಲೆ ಬರೆದಿತ್ತು. ಬರ್ಲಿನ್ನಿನ ಅಂಚೆ ಚೀಟಿಗಳಿದ್ದುವು. ಆತುರದಿಂದ ಇಸುಕೊಂಡರೂ, ಸಾವಧಾನವಾಗಿ ನೋವಾಗದಂತೆ ಪ್ಯಾಕೆಟ್ ಒಡೆದೆ. ಕೊಂಡಿದ್ದ ಚಿತ್ರದ ಪ್ರತಿಗಳೆಲ್ಲವೂ ಇದ್ದುವು. ಬಲು ಜೋಪಾನವಾಗಿ ಪ್ಯಾಕ್ ಮಾಡಲ್ಪಟ್ಟಿದ್ದುವು. ಬರ್ಲಿನ್ ಅಂಗಡಿಯವಳಿಗೆ ಮನಸ್ಸಿನಲ್ಲೇ ಧನ್ಯವಾದಗಳನ್ನು ಅರ್ಪಿಸಿ. ದೀರ್ಘಸುಮಂಗಲೀ ಭವ ಎಂದು ಆಶೀರ್ವಾದ ಮಾಡಿದೆ. ಈ ಆಶೀರ್ವಾದ ಫಲವೀಯುತ್ತೆ ಎಂಬ ಧೈರ್ಯ. ಆಕೆ ಲಕ್ಷಣವಾಗಿದ್ದಳು. ಅಂದಮೇಲೆ ಹೆಚ್ಚು ದಿನಗಳು ವಿಧವೆಯಾಗಿರಲು ಜನ ಬಿಡುವುದಿಲ್ಲ, ಎನ್ನುವ ಭರವಸೆ ಇತ್ತು.

## ''ಮನ್‌ಷನ್''

ಕಾಳಿಫೂಟಿಗೆ ಬ್ರಿಟಿಷರು ಬಂದು ನೆಲೆಸಿ, ಸೂರೆ ಹೊಡೆಯುಕ್ಕೆ ಶುರು ಮಾಡಿದರಲ್ಲ; ಅವರ ಬಾಯಿಗೆ ''ಕಾಳಿಫೂಟ್'' ಉಚ್ಚರಿಸಲು ಬಲು ಕಷ್ಟವಾಯಿತು. ಧ್ವನಿಯ ಸೆರಗನ್ನೇ ಹಿಡಿದು ''ಕ್ಯಾಲ್ಕಟ'' ಮಾಡಿಟ್ಟರು. ಅವರದೇ ದರ್ಬಾರು 150 ವರ್ಷ, ಆ ಹೆಸರೇ ಪ್ರಸಿದ್ಧಿಗೆ ಬಂತು. ಅದೇ ತರಹಾ, ಮ್ಯೂನಿಕ್, ಮನ್‌ಷನ್.

ಮ್ಯೂನಿಕ್ಕಿನ ಬಿಯರ್ ಹಾಲ್‌ನಲ್ಲಿ ಹಿಟ್ಲರ್ ಮಹಾಶಯ ಮೊದಲು ಕ್ರಾಂತಿಯನ್ನು ಹೂಡಿದ್ದು, ಎಂದು ಓದಿದ್ದೆವು. ಆ ಮ್ಯೂನಿಕ್ಕಿನಲ್ಲಿ ಮಟ ಮಟ ಮಧ್ಯಾಹ್ನ 12 ಗಂಟೆಗೆ ಇಳಿದಾಗ, ವಿಮಾನ ನಿಲ್ದಾಣದ ಬೋರ್ಡು ''ಮನ್‌ಷನ್'' ಎಂದು ಹೇಳಿತು. ನಮಗಾಗಿ ಬಂದಿದ್ದ ಬಸ್ಸಿನ ಮೇಲೆ ಕೂಡ ಮನ್‌ಷನ್ ಇತ್ಯಾದಿ ಬರೆದಿತ್ತು. ಊರಿನವರಿಗೆ ಮನ್‌ಷನ್, ಪರಕೀಯರಿಗೆ ಮ್ಯೂನಿಕ್ ಆಗಿತ್ತು.

ಹೋಟಲಿಗೆ ಹೋಗಿ, ಬಟ್ಟೆಬದಲಾಯಿಸಿ, ಉಂಡು, ಊರ ಪ್ರದಕ್ಷಿಣೆಗೆ ಹೊರಟೆವು. ಸುಮಾರು ಒಂದು ಮೈಲಿ ಉದ್ದ, ಒಂದು ಮೈಲಿ ಅಗಲದ ಮೈದಾನದಲ್ಲಿ ಜಾತ್ರೆಗೆ ಸಿದ್ಧತೆಗಳನ್ನು ಮಾಡುತ್ತಿದ್ದರು. ಆಳೆತ್ತರದ ಬೋರ್ಡುಗಳು, ಇಂತಹ ''ಬಿಯರ್'' ಅನ್ನೇ ಕುಡಿಯಿರಿ, ಎನ್ನುವ ಅದ್ಭುತ ಜಾಹಿರಾತುಗಳು. ಜತೆಯಲ್ಲಿದ್ದ ಮಾರ್ಗದರ್ಶಕ ಹೇಳಿದ ''ಇನ್ನೊಂದು ಎಂಟು ಹತ್ತು ದಿನಗಳಲ್ಲಿ ಅಕ್ಟೋಬರ್ ಫೆಸ್ಟ್ ಶುರುವಾಗುತ್ತದೆ. ಅದಕ್ಕೇ ಈ ಸಿದ್ಧತೆಗಳೆಲ್ಲ'' ಎಂದು. ಊರಿನಲ್ಲಿ ಕೂಡ ಎಲ್ಲ ಅಂಗಡಿಗಳ ಹೊರ ಭಾಗವನ್ನು ಶೃಂಗರಿಸುತ್ತಿದ್ದರು.

ಹದಿನಾರು ದಿನಗಳು ಹಾಗೂ ರಾತ್ರಿಗಳು ಆಚರಿಸಲ್ಪಡುವ 'ಅಕ್ಟೋಬರ್ ಫೆಸ್ಟ್'ಗೆ ಉತ್ತರ ಬವೇರಿಯದಿಂದಲೂ, ಯೂರೋಪಿನ ಪ್ರವಾಸಿಗರೂ, ಬರುತ್ತಾರಂತೆ. ಕುಣಿಯುವುದು, ಕುಡಿಯುವುದು, ಕಾರ್ನಿವಲ್ಲಿನ ಮನರಂಜನ ಕಾರ್ಯಗಳು. ಇವೆಲ್ಲವೂ ಸಾಂಗೋಪಾಂಗವಾಗಿ ನಡೆಯುತ್ತವಂತೆ. ಈ ಜಾನಪದ ಹಬ್ಬಕ್ಕೆ ಹಳ್ಳಿಯವರು ತಂತಮ್ಮ ಅಧಿಕೃತ ಉಡುಪುಗಳನ್ನು ಧರಿಸಿಕೊಂಡು ಬಂದು, ಉತ್ಸವದಲ್ಲಿ ಪಾತ್ರವಹಿಸುತ್ತಾರಂತೆ. ಬಯಲುನಾಟಕ, ಸಾಮೂಹಿಕ ನೃತ್ಯ,

ಚೆಲ್ಲಾಟ, ಆ ನಂತರ ಸ್ವಾಭಾವಿಕವಾಗಿ ಬಡಿದಾಟ. ಎಲ್ಲವೂ ನಡೆಯುತ್ತಂತೆ. ಹಗಲು ರಾತ್ರಿ ಎನ್ನದೆ ಆಚರಿಸಲ್ಪಡುತ್ತದಂತೆ. ಮನೆಯು ಗಂಡಹೆಂಡತಿ ಮಕ್ಕಳುಮರಿ, ಇಲಿ ಬೆಕ್ಕು, ನಾಯಿಹಸುಗಳು ಕೂಡ ಈ ಸಮಾರಂಭದಲ್ಲಿ ಪಾತ್ರ ವಹಿಸುತ್ತಾರಂತೆ.

ಈ ಹದಿನಾರು ದಿನಗಳಲ್ಲಿ ಯಾವ ಅಪರಾಧಕ್ಕೂ ಶಿಕ್ಷೆ ಇಲ್ಲ.

ಹಬ್ಬದ ಮೊದಲ ದಿನ ಹೆಂಡತಿ, ತನ್ನ ಮದುವೆ ಉಂಗುರವನ್ನು ಗಂಡನಿಗೆ ಹಿಂತಿರುಗಿ ಕೊಡುತ್ತಾಳಂತೆ. ಅಂದರೆ ನಮ್ಮಲ್ಲಿ ಮಾಂಗಲ್ಯ ಬಿಚ್ಚಿ ಕೊಟ್ಟ ಹಾಗೆ. ಗಂಡನೂ ಅದೇ ರೀತಿ. ಹಬ್ಬದ ದಿನಗಳಲ್ಲಿ ಒಬ್ಬೊಬ್ಬರೂ ಸರ್ವತಂತ್ರ ಸ್ವತಂತ್ರರು. ಆಡಿದ್ದೇ ಆಟ, ನೋಡಿದ್ದೇ ನೋಟ, ಮಾಡಿದ್ದೇ ಮಾಟ ಹಬ್ಬದ ದಿವಸವೂ ಹಳೆಯ ಗಂಡನೇ ಅನ್ನುವ ಗಾದೆ ಅಲ್ಲಿ ಪ್ರಚಾರಕ್ಕೆ ಬರಲು ಸಾಧ್ಯವೇ ಇಲ್ಲವಂತೆ.

ಅಂದಹಾಗೆ ಈ ಗಾದೆ ನಮ್ಮಲ್ಲಿ ಬಳಕೆಯಲ್ಲಿರಬೇಕಾದರೆ, ಹಿಂದೆಂದೋ ಹಬ್ಬದ ದಿನಗಳಲ್ಲಿ ಪತಿವ್ರತೆಯರು ಗಂಡನನ್ನೇ ನಂಬಿಕೊಂಡಿರಬೇಕಾಗಿರಲಿಲ್ಲವೇನೋ ? ''ರವಿಕೋತ್ಸವ'' ಎಂದು ಹಿರಿಯರು ಹೇಳುತ್ತಿದ್ದರು. ಒಂದು ಕಾಲದಲ್ಲಿ ನಮ್ಮ ದೇಶದಲ್ಲೂ ''ಅಕ್ಟೋಬರ್ ಫೆಸ್ಟ್'' ಸಾಂಗವಾಗಿ ನೆರವೇರುತ್ತಿತ್ತೇನೋ ? ನಾಗರಿಕತೆಯು ಮುಂದುವರೆದಿದ್ದರಿಂದಲೋ, ಅಥವಾ ಕಾಲ ಕೆಟ್ಟುಹೋದುದರಿಂದಲೋ ಹಬ್ಬದ ಆಚರಣೆಗೆ ತುಂಡು ಬಿದ್ದಿರಬಹುದೇನೋ ?

ಅಂತೂ ಅಕ್ಟೋಬರ್ ಫೆಸ್ಟ್‌ನಲ್ಲಿ ಬಳಸಲ್ಪಡುವ ಬಿಯರ್ ಅನ್ನೆಲ್ಲಾ ಒಟ್ಟುಗೂಡಿಸಿದರೆ, ಕೃಷ್ಣರಾಜ ಸಾಗರವನ್ನು ಸುಮಾರು ತುಂಬಬಹುದು, ಎಂದು ಅಂದಾಜು ಹಾಕಿದೆ ; ಆ ಮಾರ್ಗದರ್ಶಕ ಕೊಟ್ಟ ವಿವರಣೆಗಳಿಂದ.

ಹಬ್ಬ ಹದಿನಾರು ದಿನಗಳಾದ ಮೇಲೆ ಕ್ರಿಶ್ಚಿಯನ್ನರ ''ಲೆಂಟ್'' ಶುರುವಾಗುತ್ತೆ. ಅರ್ಧ ಉಪವಾಸದ ದಿನಗಳು. ನ್ಯಾಯವೇ ! ಆ ರೀತಿ ಹಬ್ಬ ಆಚರಿಸಿದಮೇಲೆ ಎಷ್ಟು ದಿವಸ ಪೂರ್ತಿ ಉಪವಾಸ ಮಾಡು ಅಂದರೂ ಸಾಧ್ಯ ! ಏನಾದರೂ ತಿನ್ನುಕ್ಕೆ ಆದರೆ ಅಲ್ಲವೇ ? ಹೊಟ್ಟೆ ರಟ್ಟಾದ ಮೇಲೆ ಹಸಿವು ಎಲ್ಲಿಂದ ಬರಬೇಕು ?

ಮ್ಯೂನಿಕ್, ಬವೇರಿಯಾ ರಾಜ್ಯದ , ಮುಖ್ಯ ಕೇಂದ್ರ, ಗುಡ್ಡ ಗಾಡಿನ ಜನರಂತೆ ಆ ರಾಜ್ಯದ ಜನರು, ಅದೇ ನಿಸ್ಪೃಹತೆ, ಅದೇ ರೀತಿಯ ಸರಳ ಜೀವನ. ಷಹರಿನಲ್ಲಿ ಮೋಸ ತಟವಟಗಳಿಲ್ಲ, ಬೆಳ್ಳಗಿರುವುದೆಲ್ಲಾ ಹಾಲು ಎಂದು ನಂಬುವ ಸ್ವಭಾವ. ಹಾಗಾಗಿಯೇ ಹಿಟ್ಲರನಿಗೆ ದುಂಬಾಲು ಬಿದ್ದಿದ್ದು.

ಚುರುಕು ಬುದ್ಧಿಯೂ ಉಂಟು, ಓದಿ ಮುಂದುವರಿದವರಿಗೆ. ಆದುದರಿಂದಲೇ ಜನಜೀವನದ ಷಹರಿನ ಪ್ರಗತಿಯು, ಯೂರೋಪಿನ ಮಿಕ್ಕ ಊರುಗಳಂತೆಯೇ ತೀವ್ರ ಗಮನದಲ್ಲಿ ಮುಂದುವರಿದಿದೆ.

ಮ್ಯೂನಿಕ್ಕಿನ ವೈದ್ಯ ಸಂಸ್ಥೆಗಳು ಹೆಸರು ಪಡೆದವು. ಆ ಊರಿನ ಆಸ್ಪತ್ರೆಗಳನ್ನು ಯುದ್ಧಾನಂತರ, ಪುನಃ ಸೃಷ್ಟಿಸುತ್ತಿದ್ದಾರೆ, ಅಮೋಘವಾಗಿ ಹೊಸದು ಹಳೆಯದು ಪಕ್ಕ ಪಕ್ಕದಲ್ಲೇ ಇದ್ದು, ಕಣ್ಣಿಗೆ ಬಡಿಯುತ್ತವೆ.

ಮ್ಯೂನಿಕ್ಕಿನ ವೈದ್ಯರು ನಮ್ಮ ತಂಡದವರೊಡನೆ ರಾತ್ರಿ ಸಹ ಭೋಜನಕ್ಕೆ ಬರುವರೆಂದು ಗೊತ್ತಾಗಿತ್ತು. ಊಟದ ಹೊತ್ತಿಗೆ, ನಾಲ್ಕು ಜನ ವೈದ್ಯರು ಪೆಚ್ಚು ಪೆಚ್ಚಾಗಿ ಬಂದರು. ನಾವು ಅರವತ್ತ ಮೂರು ಜನ. ಪಾಪ! ದಾರಿ ತಪ್ಪಿಯೋ, ಅಥವಾ ಮ್ಯೂನಿಕ್ ವೈದ್ಯ ಸಂಘದ ಕಾರ್ಯಕಾರಿ ಸಮಿತಿಯವರಾದ್ದರಿಂದ ತಪ್ಪಿಸಿಕೊಳ್ಳಲಾರದೆಯೋ ಬಂದಿದ್ದರು. ತೋಣಚಿ ಹೊಕ್ಕ ನಾಯಿನ ಹಾಗೆ, ಊಟ ಮುಗಿಸುವ ತನಕ ಒದ್ದಾಡುತ್ತಿದ್ದರು. ಇಂಗ್ಲೀಷ್ ಬಾರದ ಜನ. ಊಟದ ಶಾಸ್ತ್ರ ಮುಗಿದ ಕೂಡಲೆ ಹತ್ತಿರ ಸಿಕ್ಕಿದವರ ಕೈ ಕುಲುಕಿ, ದಡದಡ ಅಂತ ಮೆಟ್ಟಿಲುಗಳ ಕಡೆ ಓಡಿದರು. ಅವರು ಇಳಿಯಲು ಹೊರಟ ರಭಸದಲ್ಲಿ, ಎಲ್ಲಿ ಪಾತಾಳಕ್ಕೆ ಹೋಗಿಬಿಡುವರೋ ಎನ್ನಿಸಿತು.

ಅವರು ಹೋದಮೇಲೆ ನಾವೂ ನಿರಾತಂಕವಾಗಿ ಹರಟೆಗೆ ಶುರು ಮಾಡಿದೆವು. ಅವರೆದುರಿಗೆ ಮರ್ಯಾದಸ್ಥರಂತೆ ನಡೆದುಕೊಳ್ಳಬೇಡವೇ ?

ರಾತ್ರಿ ಊಟವಾದಮೇಲೆ ಊರಿನ ಅಂಗಡಿ ಬೀದಿಯಲ್ಲಿ ಹಾಗೆಯೇ ಅಡ್ಡಾಡಿ ಬರಲು ಹೋದೆ. ಗುಜರಾತ್ ದಂಪತಿಗಳು ಸಿಕ್ಕಿದರು. ವ್ಯಾಪಾರಕ್ಕಾಗಿ ಆತ ಬಂದಿರುವುದಾಗಿ ಹೇಳಿದ. ನಮಸ್ತೆ ನಮಸ್ತೆ ಮಾಡಿ ಮುಂದೆ ಹೋದರೆ, ಸಿಂಧಿ ಯುವಕರಿಬ್ಬರು ಸಿಕ್ಕಿದರು. ಅವರ ಹತ್ತಿರ ಯೋಗಕ್ಷೇಮ ವಿಚಾರಿಸಿ, ಅವರೂ ವ್ಯಾಪಾರಕ್ಕೆ ಬಂದವರೆಂದು ಅರಿತು, ಮುಂದೆ ಹೋದೆ. ಸಿಖ್ ಸರದಾರ್‌ಜಿ ಎದುರಿಗೆ ಸಿಕ್ಕ. ಅವನೂ ವ್ಯಾಪಾರಕ್ಕೆ ಬಂದಿದ್ದವನಂತೆ. ಎಲ್ಲರೂ ನನ್ನ ಮುಖ ನೋಡಿ ಇವ ದಕ್ಷಿಣಭಾರತದವ ಎಂದು ಗುರ್ತಿಸಿ ಮಾತನಾಡಿದವರು. ನಾನು ವೈದ್ಯ ಪ್ರವಾಸಕ್ಕೆ ಬಂದವನಾದ್ದರಿಂದ ಅವರಿಗೆ ಪೈಪೋಟಿಯ ಭಯವಿಲ್ಲದೆ, ನನ್ನ ಮೇಲೆ ಅಪಾರ ಮಮತೆ. ನಮ್ಮ ಕನ್ನಡದವರ್‍ಯಾರೂ ಯಾಕೆ ವ್ಯಾಪಾರಕ್ಕೆ ಬರುಲ್ಲ ? ಎಂದು ಅನ್ನಿಸಿತು. ಸರಿ ! ನಮ್ಮೂರಿನಲ್ಲೇ ಇತರ ಪ್ರಾಂತ್ಯದವರಿಗೆ ವ್ಯಾಪಾರದ ಸೂತ್ರಗಳನ್ನು ವಹಿಸಿಕೊಟ್ಟವರು, ನಮ್ಮವರು. ಈ ಧೀರರು ಇನ್ನು ಹೊರದೇಶಗಳಲ್ಲಿ ವ್ಯಾಪಾರಕ್ಕೆ ಹೇಗಾರೂ ಹೋದಾರು ? ನಾವೆಲ್ಲಾ ಬಾಯಿ ಧೀರರಲ್ಲವೇ ! ಗಂಟಲ ನರ ಕಿತ್ತು ಹೋಗುವಂತೆ ಕೂಗಬಲ್ಲೆವು ! ಆದರೆ ಸೊಂಟ ಬಗ್ಗಿಸಿ, ಇಷ್ಟಪಟ್ಟು ದುಡಿಯಲು, ಅಷ್ಟಾಗಿ ಒಪ್ಪುಲ್ಲ, ಹೀಗೆಲ್ಲ ಮನಸ್ಸು ಹರಿದಾಗ ಓಡಾಡಿದ್ದು ಸಾಕು ಎನಿಸಿ, ಹೋಟಲಿಗೆ ಹಿಂತಿರುಗಿ ಬೆಚ್ಚಗೆ ಮಲಗಿದೆ. ''ಮಲಗು ಮಲಗೆಲೆ ಕಂದ'' ಅಂತ ಕನ್ನಡಾಂಬೆ ಜೋಗುಳ ಹಾಡಿದಂತೆ ಕೇಳಿಸಿತು. ಎಮ್ಮೆ ಹಾಲು ಕುಡಿದ ಹಾಗೆ ನಿದ್ರೆ ಮಾಡಿದೆ ; ಎಲ್ಲ ಕನ್ನಡ ಮಕ್ಕಳಂತೆ.

# ವಿಯನ್ನಾ

ಗುರುವಾರ ರಾತ್ರಿ ವಿಯನ್ನಾದಲ್ಲಿ ಬಂದಿಳಿದಾಗ ಒಂದೇ ಯೋಚನೆ ನನಗೆ ಹೊಳೆದಿದ್ದು. ಬೆಂಗಳೂರಿನಲ್ಲಿದ್ದಿದ್ದರೆ ಈ ವೇಳೆಗೆ ರಾಯರ ಗುಡಿಗೆ ಹೋಗಿ ಪೂಜೆ ಮುಗಿಸಿಕೊಂಡು ಬರುತ್ತಿದ್ದೆ ಎನ್ನುವ ಯೋಚನೆ. ಯಾಕೆ ಹಾಗೆ ಯೋಚನೆ ಬಂತೋ ಹೇಳಲಾರೆ. ನಮ್ಮೂರಿನಲ್ಲಿದ್ದಾಗ ಒಂದು ಗುರುವಾರವಾದರೂ ರಾಯರ ಗುಡಿಗೆ ಹೋದವನಲ್ಲ. ಪ್ರಾಯಶಃ ಆಸ್ತಿಕ ಸ್ನೇಹಿತರು ''ರಾಯರ ಗುಡಿಗೆ ಹೋಗಬೇಕು, ಇವತ್ತು ಕ್ಲಬ್ಬಿಗೆ ಬರುವುದಿಲ್ಲ, ಇವತ್ತಿನ ಕ್ಲಬ್ಬಿನ ಮಾಮೂಲನ್ನು ಶುಕ್ರವಾರ ತೀರಿಸಿಕೊಳ್ಳುತ್ತೇನೆ,'' ಎಂದು ಹೇಳುತ್ತಿದ್ದುದು, ಈ ರೀತಿ ಯೋಚನೆಯನ್ನು ನನ್ನ ಮನಸ್ಸಿನಲ್ಲಿ ಹೂಡಿರಬಹುದು.

ವಿಮಾನ ನಿಲ್ದಾಣದಿಂದ ನಮಗೆ ಗೊತ್ತುಪಡಿಸಿದ್ದ ವೆಸ್ಟ್‌ಮಿನಿಸ್ಟರ್ ಹೋಟಲಿಗೆ ಹೋಗುವ ಹೊತ್ತಿಗೆ ಹತ್ತು ಗಂಟೆಯಾಗಿತ್ತು. ಹೊಸದಾಗಿ ಕಟ್ಟಿದ್ದ ಹೋಟಲು. ಆ ಊರುಗಳಿಗೆ ಚಿಕ್ಕದೇ ಹೋಟಲು, ಆದರೂ ನೂರು ಕೊಠಡಿಗಳಿದ್ದುವು. ಹಾಕಿದ್ದನ್ನುಂಡು ಹೇಳಿದ ಕೊಠಡಿಗೆ ಹೋಗಿ ಮಲಗಿದೆ. ಸುಸ್ತಾಗಿತ್ತು. ಆದರೂ ಕೊಠಡಿಯ ಗೋಡೆಯ ಮೇಲೆಲ್ಲಾ ಶೃಂಗಾರ ಮಾಡಿದ್ದುದು ಕಾಣಿಸಿತು. ಮಂಚದ ಪಕ್ಕದ ಮೇಲೆ ಕೊಳದ ಚಿತ್ರವನ್ನು ಬರೆದಿದ್ದರು. ನಾನೇನೋ ಬೆಚ್ಚಗೆ ಮಲಗಿದ್ದೆ. ಆದರೆ ಚಿತ್ರದ ಆ ಕೊಳದಲ್ಲಿ ಒಬ್ಬ ಹೆಂಗಸು ಈಜಾಡುತ್ತಿದ್ದಳು. ಪಾಪ ! ಆಕೆಗೆ ಎಷ್ಟು ಚಳಿಯಾಗುತ್ತಿದೆಯೋ ಎನ್ನಿಸಿತು. ಸೂರಿನ ಕಡೆ ಕಣ್ಣು ಹಾಯಿಸಿದೆ. ಅಲ್ಲಲ್ಲ ವಿಧವಾದ ಹೂವುಗಳ ಚಿತ್ರಗಳು. ಸುಸ್ತಾಗಿದ್ದರೂ ನಿದ್ರೆ ಬರಲಿಲ್ಲ. ಎದ್ದುಹೋಗಿ ಕಿಟಕಿಯ ಬಳಿ ತಲೆಹಾಕಿದೆ. ಇಳಿದುಕೊಂಡಿದ್ದ ಕೊಠಡಿ ನಾಲ್ಕನೆ ಮಹಡಿಯಲ್ಲಿ. ಆ ಎತ್ತರದಲ್ಲೂ ನನ್ನ ಕಣ್ಣಿಗೆ ಕಾಣಿಸಿದ್ದು ಎತ್ತರವಾದ ಕಪ್ಪು ಕಪ್ಪು ಗೋಡೆಗಳು. ಕಿಟಕಿಯಿಲ್ಲದ ಗೋಡೆಗಳು. ಜೈಲು ಗೋಡೆಯ ತರಹ ಕಾಣಿಸಿದುವು. ಕಿಟಕಿಯ ಹೊರಗೆ ಈ ಅವಲಕ್ಷಣ ಕಾಣಿಸುತ್ತಿಲ್ಲ ಎಂದೋ ಏನೋ ಕೊಠಡಿಯ ಒಳಗೋಡೆಗಳ ಮೇಲೆಲ್ಲಾ ಪ್ರಕೃತಿಯ ದೃಶ್ಯಗಳನ್ನು ಚಿತ್ರಿಸಿದ್ದಿರಬೇಕು.

ಮಲಗಿದೆ. ಯಾವುದೋ ಮಾಯದಲ್ಲಿ ನಿದ್ರೆ ಬಂತು, ಬೆಳಿಗ್ಗೆ ಎದ್ದು ಹೊರಹೊರಡಲು ಸಿದ್ಧವಾದಾಗ ಎಂಟು ಬಡಿದಿತ್ತು. ಎತ್ತೇಣಿಯಲ್ಲಿ ಇಳಿದು "ನಾಷ್ಟಾ" ಗೃಹಕ್ಕೆ ಹೋದೆ. ಆ ಗೃಹದ ಒಂದು ಕಡೆ ಗೋಡೆಗೆಲ್ಲಾ ಕನ್ನಡಿ ಬಡಾಯಿಸಿದ್ದರು. ಹಾಗಾಗಿ 30 ಜನ ಕೂಡುವ ಕೊಠಡಿಯು, ಅರವತ್ತು ಜನ ಕೂತಿದ್ದ ಕೊಠಡಿಯಂತೆ ಭಾಸವಾಗುತ್ತಿತ್ತು. ನಮ್ಮೂರಿನ ಭಾಷಣ ಮಂದಿರಗಳಿಗೂ ಕನ್ನಡಿಗೋಡೆ ಹಾಕಿಸಿದರೆ, ಮೂರೇ ಮಂದಿ ಸಭೆ ಸೇರಿದ್ದರೂ, ಭಾಷಣಕಾರನ ಮನಸ್ಸು ಚಿಕ್ಕದಾಗುಲ್ಲ ಎನ್ನಿಸಿತು. ಕಾಂಟಿನೆಂಟ್ ಬ್ರೆಕ್‌ಫಾಸ್ಟ್ ಕೊಟ್ಟರು. ಬ್ರೆಡ್ಡು ತುಣುಕು ಬೆಣ್ಣೆ ಕಾಫಿ ; ಹೆಸರೇನೋ ಬ್ರೆಕ್‌ಪಾಸ್ಟ್ ದಿಟವಾಗಲೂ ಫಾಸ್ಟ್ ಅಷ್ಟೆ.

ಆಲ್ಗಿಮೈನ್ ಕ್ರಾಂಕನ್ ಹೌಸ್, ಅಂದರೆ ಸಾರ್ವಜನಿಕ ಆಸ್ಪತ್ರೆ. ಅಲ್ಲಿಗೆ ಭೇಟಿ ಏರ್ಪಡಿಸಲಾಗಿತ್ತು. ಆಸ್ಪತ್ರೆಯ ಹಿರಿಯಧಿಕಾರಿ ಪ್ರೊಫೆಸರ್ ಷೌನ್ ಬೋರ್ ಅವರು ಸ್ವಾಗತಿಸಿದರು. ಆದರದ ಸ್ವಾಗತ ಆದರೂ ಒಂದೇ ನಿಮಿಷದಲ್ಲಿ ಮುಗಿಯಿತು. ಕೂಡಲೆ ಅವರು ಸರ್ಜರಿಯಲ್ಲಿ ಯಾರಿಗೆ ಕುತೂಹಲ ! ಕಿವಿ, ಮೂಗು, ಗಂಟಲಿನ ಕಾಯಿಲೆಗಳಲ್ಲಿ ಯಾರಿಗೆ ಆಸಕ್ತಿ ಕಣ್ಣಿನ ಕಾಯಿಲೆಗಳನ್ನು ಯಾರು ನೋಡಬಯಸುತ್ತಾರೆ ? ಎಂದು ಎಂಟು ಹತ್ತು ವೈದ್ಯದ ಹಿರಿಯ ಭಾಗಗಳ ಹೆಸರು ಹೇಳಿದರು. 4-5 ಜನ ಒಂದೊಂದು ವಿಭಾಗದಲ್ಲಿ ನಮಗೆ ಹೆಚ್ಚು ಅಭಿರುಚಿ ಎಂದೆವು. ಆತನ ಸಂಗಡ ಇದ್ದ ಆಯಾ ಭಾಗಗಳ ಹಿರಿಯರು ಈ ಸಣ್ಣ ತಂಡಗಳನ್ನು ತಮ್ಮ ತಮ್ಮ ವಿಭಾಗಕ್ಕೆ ಕರೆದುಕೊಂಡು ಹೋದರು.

ಆಸ್ಪತ್ರೆಯನ್ನು ಸೇರಿದ ಐದು ನಿಮಿಷಗಳ ನಮ್ಮ ತಂಡದಲ್ಲಿದ್ದ ಅರವತ್ತಕ್ಕೂ ಮಿಕ್ಕ ಮಂದಿ ; ಸಣ್ಣಪುಟ್ಟ ಗುಂಪುಗಳಾಗಿ, ಆಸ್ಪತ್ರೆಯ ವಿವಿಧ ಭಾಗಗಳಿಗೆ ಹೋಗಿದ್ದೆವು.

ಕಿವಿಮೂಗು ಗಂಟಲಿನ ಗುಂಪಿನಲ್ಲಿ ನಾನು ಹೋಗಿದ್ದೆ. ತನ್ನ ಕೊಠಡಿಯಲ್ಲಿ ನಮ್ಮನ್ನೆಲ್ಲ ಕೂರಿಸಿದ ಮೇಲೆ, ಆ ವಿಭಾಗದ ಪ್ರೊಫೆಸರು "ಪ್ರಶ್ನೆಗಳನ್ನೇನಾದರೂ ಕೇಳುವುದಿದ್ದರೆ ಕೇಳಿ, ನಮ್ಮ ಅನುಭವಗಳನ್ನು ಹೇಳುತ್ತೇನೆ. ನಾವು ಇತ್ತೀಂದೀಚೆಗೆ ನಡೆಸಿರುವ ಕೆಲಸವನ್ನು ವಿವರಿಸುತ್ತೇನೆ" ಎಂದರು. ನಮ್ಮೂರಿನಲ್ಲಿ ಯಾವ ಕಾಯಿಲೆಗಳು ಚಿಕಿತ್ಸೆಗೆ ಸುಲಭವಾಗಿ ಬಗ್ಗುಲ್ಲವೋ ಅವುಗಳನ್ನು ವಿವರಿಸಿ, ಇವಕ್ಕೆಲ್ಲ "ನೀವು ಏನೇನು ಪ್ರಯೋಗ ನಡೆಸುತ್ತಿದ್ದೀರಿ" ಎಂದು ಕೇಳಿದೆ. "ನಿಮಗೆ ಆದ ಬೇಸರದ ಅನುಭವವೇ ನಮ್ಮದೂ ಕೂಡ, ಆದರೂ ಈ ಮಾರ್ಗದಲ್ಲಿ, ಇಂತಹ ಆಸೆ ಇಟ್ಟುಕೊಂಡು ಇಂತಿಂಥ ಪ್ರಯೋಗ ನಡೆಸುತ್ತಿದ್ದೇವೆ" ಎಂದು ಆತ, ಕಡ್ಡಿ ತುಂಡು ಮುರಿದ ಹಾಗೆ ಉತ್ತರ ಹೇಳಿದ. ನಂತರ ರೋಗಿಗಳಿದ್ದ ವಾರ್ಡಿಗೆ ಕರೆದುಕೊಂಡು ಹೋದ. 10-12 ಸ್ಪೆಷಲ್ ವಾರ್ಡುಗಳನ್ನು ಆತ ತೋರಿಸಿ, ತಾನು ನಡೆಸಿದ ಶಸ್ತ್ರ ಚಿಕಿತ್ಸೆಯ ವಿವರಗಳನ್ನಿತ್ತ. 8-9 ಅಂತಹ ವಾರ್ಡುಗಳಲ್ಲಿ ಯೂರೋಪಿನ ಇತರ ದೇಶಗಳಿಂದ ಚಿಕಿತ್ಸೆಗೆಂದು ವಿಯನ್ನಾಕ್ಕೆ ಬಂದಿದ್ದ ಶ್ರೀಮಂತರೇ ಇದ್ದರು. ಡಾಕ್ಟರಿಗೆ ಆಸ್ಪತ್ರೆಯ ಸಂಬಳ ಎಷ್ಟೇ ಇದ್ದರೂ ಆಯಿತು. ಇಂತಹ ಶ್ರೀಮಂತರು ಆತನನ್ನು

ಸಿರಿವಂತಿಗೆಯಲ್ಲಿರಿಸಬಹುದು ಎನ್ನಿಸಿತು. ಅಲ್ಲಿನ ಪ್ರೊಫೆಸರುಗಳ ಸಂಬಳ ಹೇಳಿಕೊಳ್ಳುವಂತಿಲ್ಲ.

ಒಂದು ಬೆಳಿಗ್ಗೆ ಆ ಆಸ್ಪತ್ರೆಯಲ್ಲಿ ನಾವು ಕಲಿತಿದ್ದು, ಮಿಕ್ಕೆಲ್ಲ ದೇಶಗಳಲ್ಲಿನ ಹತ್ತಾರು ಆಸ್ಪತ್ರೆಗಳಲ್ಲಿ ಒಟ್ಟು ಕಲಿತಿದ್ದಕ್ಕಿಂತ ಹೆಚ್ಚಾಗಿತ್ತು. ಉಪಯುಕ್ತವಾಗಿತ್ತು.

20-30 ವರ್ಷಗಳ ಹಿಂದೆ, ಕಲಿಯ ಬಯಸುವ ವೈದ್ಯರಿಗೆಲ್ಲ ವಿಯನ್ನ ಯಾತ್ರಾಸ್ಥಳವಾಗಿತ್ತು. ವೈದ್ಯ ವಿಜ್ಞಾನದ ಶ್ರೀಮಂತಿಕೆಗೆ ವಿಯನ್ನ ಪ್ರಸಿದ್ಧವಾಗಿತ್ತು. ಈಗ ಇಂಗ್ಲೆಂಡ್ ಅಮೆರಿಕ, ರಷ್ಯಾ, ಫ್ರಾನ್ಸ್, ಜಪಾನ್ ಇತ್ಯಾದಿ ದೇಶಗಳಲ್ಲಿ ವೈದ್ಯಕೀಯ ವಿಜ್ಞಾನ ಪ್ರಗತಿ ಬಲು ಮುಂದುವರಿದಿದೆ. ಆದರೂ ಶಿಸ್ತು, ಸಂಪ್ರದಾಯ, ಕಲಿಸುವ ಮಾದರಿ, ಮುಚ್ಚುಮರೆಯಿಲ್ಲದೆ, ಅಹಂಕಾರ ತೋರಿಸದೆ ಕಲಿಸುವ ಶ್ರದ್ಧೆ ಇವೆಲ್ಲವೂ ವಿಯನ್ನದಲ್ಲಿ ಹಸಿರಾಗಿಯೇ ಇದ.

ಸ್ನಾತಕೋತ್ತರ ಶಿಕ್ಷಣಕ್ಕೆ ತೋರು ಡಿಗ್ರಿಗಳನ್ನು ಪಡೆಯುವುದಕ್ಕೆ, ನಮ್ಮ ವೈದ್ಯ ತರುಣರು ಅಮೆರಿಕಾ ಇಂಗ್ಲೆಂಡಿಗೆ ಹೋಗಬೇಕು. ದಿಟ, ಆ ಹೆಸರುಗಳಿಲ್ಲದಿದ್ದರೆ, ಅಲ್ಲಿನ ಖಿಲ್ಲತ್ತುಗಳನ್ನು ಪಡೆಯದಿದ್ದರೆ ನಮ್ಮೂರಿನಲ್ಲಿ ದೊರಕುವ ಮರ್ಯಾದೆ ತುಸು ಕಡಿಮೆ. ಆದರೂ ಓದು ಮುಗಿದಮೇಲೆ, ಖಿಲ್ಲತ್ತುಗಳನ್ನು ಪಡೆದಮೇಲೆ, ನಮ್ಮೂರಿಗೆ ಹಿಂತಿರುಗುವ ಮುನ್ನ ಒಂದು ಮೂರು ಅಥವಾ ಆರು ತಿಂಗಳು ವಿಯನ್ನಾದಲ್ಲಿ ಕೆಲಸ ಮಾಡಿ ಬಂದರೆ, ಅವರುಗಳ ವಿದ್ಯಾಭ್ಯಾಸ ಚೆನ್ನಾಗಿ ಹದಗೊಳ್ಳುತ್ತದೆ ಎಂದು ನನಗನ್ನಿಸಿತು.

ಈ ಮಧ್ಯಾಹ್ನ ವಿಯನ್ನದಿಂದ 8-10 ಮೈಲಿ ಹೊರ ಅಂಚಿನಲ್ಲಿದ್ದ ವೈದ್ಯಾಲಯಕ್ಕೆ ಕರೆದುಕೊಂಡು ಹೋದರು. ಜಗತ್ಪ್ರಸಿದ್ಧ ಡಾ॥ ಬಾಹ್ಲರ್ ಅವರ ಆಶ್ರಮ ಅದು. ಆತನ ಕಾಲಕ್ಕೆ ಮೊದಲು ಮೂಳೆ ಮುರಿದರೆ, ಕಟ್ಟು ಕಟ್ಟಿ 8-10 ವಾರಗಳು ಮಲಗಿಸಿರುತ್ತಿದ್ದರು. ಈ ತೆರನಾದ ವಿಶ್ರಾಂತಿ ಅಗತ್ಯವೇ ಅಥವಾ ಕೆಟ್ಟದೇ ಎಂದು ಡಾ॥ ಬಾಹ್ಲರ್ ಯೋಚಿಸಿದ. ಕೆಟ್ಟದು ಎಂದೇ ಫಿಸಿಯಾಲಜಿಯ ಮೂಲ ಸಿದ್ಧಾಂತಗಳು ಅವನಿಗೆ ಸಾಕ್ಷಿಸಿದುವು. ಸರಿಯಾಗಿ ಕಟ್ಟುಹಾಕಿ, ಆದಷ್ಟು ಬೇಗ ಓಡಾಡಿಸಬೇಕು. ಓಡಾಡಿದರೆ ಮೂಳೆಗಳು ಬೇಗ ಕೂಡಿಕೊಳ್ಳುತ್ತವೆ ಎಂದು ಆತ ಪ್ರಯೋಗ ನಡೆಸಿ ಸಿದ್ಧಾಂತ ಮಾಡಿದ. ಆತನ ಉಪದೇಶಗಳು ಲೋಕದಲ್ಲಿ ಎಲ್ಲ ಕಡೆಯೂ ಪ್ರಭಾವ ಬೀರಿವೆ.

70ರ ಪ್ರಾಯ ಎಂದೋ ಮೀರಿದ ಡಾ॥ ಬಾಹ್ಲರ್ ನಮ್ಮನ್ನೆಲ್ಲ ಆಶ್ರಮದ ಮೂಲೆ ಮೂಲೆಗೂ ಕರೆದೊಯ್ದು ತಾನು ಕಲಿತಿದ್ದನ್ನು ವಿವರಿಸಿ ಹೇಳಿದ. ಅಲ್ಲಿದ್ದ ರೋಗಿಗಳನ್ನು ತೋರಿಸಿ, ಪ್ರತ್ಯಕ್ಷ ಪ್ರಮಾಣ ನೀಡಿದ. ಕಡೆಗೆ ತಾನು ವಾಸಿಸುತ್ತಿರುವ ಅಟ್ಟದ ಮೇಲಿನ ಕೋಣೆಗೆ ಕರೆದೊಯ್ದ. ಕೊಠಡಿಯ ಒಂದು ಅಂಚಿನಲ್ಲಿ ಪುಸ್ತಕಗಳ ಬೀರುಗಳು. ಆತನು ಬರೆದ ಜರ್ಮನ್ ಭಾಷೆಯ ಪುಸ್ತಕಗಳ, ಇಪ್ಪತ್ತಕ್ಕೂ ಮೀರಿದ ವಿವಿಧ ಭಾಷೆಗಳ

ಭಾಷಾಂತರಗಳನ್ನು ತುಸು ಹೆಮ್ಮೆಯಿಂದ, ತುಸು ಸಂತಸದಿಂದ, ತೋರಿಸಿದ. ತನಗೆ ಹೊಳೆದ 'ಸತ್ಯ'ದ ಅಂಶವೊಂದು, ಲೋಕದಲ್ಲಿ ಸಾಕಷ್ಟು ಪ್ರಚಾರಕ್ಕೆ ಬಂದಿದೆ ಎಂದೆನ್ನುವ ಸಂತಸ.

ಹೊಸದಾಗಿ ಕಟ್ಟಿಸುತ್ತಿದ್ದ ಮೂರು ಮಹಡಿಯ ಕಟ್ಟಡವೊಂದನ್ನು ತೋರಿಸಿದ. ಹೀಗೆ ಹೀಗೆ ಯೋಜನೆ ಹಾಕಿದ್ದೇನೆ ಎಂದು ತರುಣರ ಉತ್ಸಾಹಕ್ಕಿಂತ ಹೆಚ್ಚಾಗಿ ಸಂಭ್ರಮಪಡುತ್ತಿದ್ದ. ಎಪ್ಪತ್ತು ಮೀರಿದ ಈ ಮುದುಕನ ವಯಸ್ಸಿನಲ್ಲಿ ನಮ್ಮ ದೇಶದಲ್ಲಿ ಜಪಮಾಲೆ ಹಿಡಿದು, ಚಕ್ಕುಲಿ ತಿನ್ನುಕಾಗುಲ್ಲವಲ್ಲ, ಕುಟ್ಟಿಸಿಯಾದರೂ ಚಕ್ಕುಲಿ ತಿನ್ನೋಣ, ಇನ್ನೆಷ್ಟು ದಿನ ಬದುಕಿರಲು ಸಾಧ್ಯ ಎಂದು ಯೋಚಿಸುತ್ತೇವೆ. ಆತ ಇನ್ನೂ ಸಂಸ್ಥೆಗಳನ್ನು ಕಟ್ಟುವ ಹುಡುಗ ದುಗುಡದಲ್ಲೇ ಬಾಳುತ್ತಿದ್ದಾನೆ. ದಿಟವಾದ ಋಷಿ. ಆತನದು ಕಾಂಕ್ರನ್ ಹೌಸ್ ಅಲ್ಲ. ಆಸ್ಪತ್ರೆ ಅಲ್ಲ. ಆಶ್ರಮ.

ಮಾರನೆಯ ದಿನ ಪ್ರೊಫೆಸರ್ ಟ್ರೋಯನ್‌ರವರ ವಿಭಾಗಕ್ಕೆ ಹೋದೆ. ಮಾತುಗಳನ್ನಾಡುವಾಗ, ತೊದಲುವುದು, ಮಕ್ಕಳ ತರಹ ತ್ತೆ ತ್ತೆ ತ್ತೆ ಎನ್ನುವುದು, ಮೂಗಿನಲ್ಲಿ ಮಾತನಾಡಿದ ಹಾಗೆ ಮಾತಾಡುವುದು, ಇವೆಲ್ಲಕ್ಕೂ ಚಿಕಿತ್ಸಾ ಕ್ರಮಗಳನ್ನು ಪಾಶ್ಚಾತ್ಯ ದೇಶಗಳಲ್ಲಿ ನಡಸುತ್ತಾರೆ. ವಿಯನ್ನ ವಿಶ್ವವಿದ್ಯಾಲಯದಲ್ಲಿ ಈ ಶಾಸ್ತ್ರದ ಪ್ರೊಫೆಸರ್, ಟ್ರೋಯನ್ ಡಾಕ್ಟರು.

ಈತ ಹಲವಾರು ಪ್ರಯೋಗಗಳನ್ನು ನಡೆಸಿ ಯಶಸ್ವಿಯಾಗಿದ್ದಾನೆ. ನಮ್ಮ ದೇಶದಲ್ಲಿ ದೊಡ್ಡ ದೊಡ್ಡ ಕಾಯಿಲೆಗಳಿಗೇ ಸಾಕಷ್ಟು ವೈದ್ಯಕೀಯ ನೆರವಿಲ್ಲ, ಅಂದಮೇಲೆ ಇಂತಹ ಜುಜುಬಿ ಅನಾನುಕೂಲಗಳಿಗೆ ವೈದ್ಯರು ಗಮನ ಕೊಟ್ಟಿಲ್ಲ. ಹನುಮಂತ ಹಗ್ಗ ತಿನ್ನೋವಾಗ, ಪೂಜಾರಿ ಶ್ಯಾವಿಗೆ ಬೇಡಿದ ಹಾಗೆ ಆದರೆ ಇಂತಹ ತೊಂದರೆಗಳಿದ್ದ ಹುಡುಗ ಹುಡುಗಿಯರಿಗೆ ಆತ್ಮವಿಶ್ವಾಸನೇ ಕುಂದಾಗುತ್ತದೆ. ಮುನ್ನುಗ್ಗುವ ಕೆಚ್ಚು ಹೋಗಿ ಹಿಂದೆ ಮರೆಯಲ್ಲಿ ಇರೋಣ ಎನ್ನಿಸುತ್ತದೆ. ಇಂತಹ ವಿದ್ಯಾರ್ಥಿಗಳನ್ನು ಕಂಡಾಗಲೆಲ್ಲ ಅಯ್ಯೋ ಎನ್ನಿಸುತ್ತಿತ್ತು. ಇವರಿಗೆ ಏನಾದರೂ ನೆರವು ನೀಡಲು ಸಾಧ್ಯವಿಲ್ಲವೇ ಎನ್ನಿಸುತ್ತಿತ್ತು. ಆದುದರಿಂದಲೇ ಈ ಪ್ರವಾಸದಲ್ಲಿ ಈ ವಿಷಯವನ್ನು ಎಲ್ಲಿ ಎಷ್ಟು ಕಲಿಯಬಹುದೋ ಅಷ್ಟನ್ನೂ ಆಸೆಯಿಂದ ಕಲಿಯೋಣ ಅಂತ ಚಪಲ. ಈ ಕಾರಣದಿಂದಲೇ ಪ್ರೊಫೆಸರ್ ಟ್ರೋಯನ್ ಅವರ ಭೇಟಿಗೆ ಹೋದೆ.

ಆತ ಇಂಗ್ಲೀಷನ್ನು ಮಾತನಾಡಿದರೂ, ಸುಲಭವಾಗಿ ಮಾತನಾಡಲಾರ. ಆದರೂ ಆಸೆಯಿಂದ ಕಲಿಯಬೇಕೆಂದು ಬಂದ ನನ್ನನ್ನು ಅತಿ ವಿಶ್ವಾಸದಿಂದ ಸ್ವಾಗತಿಸಿ, ತನಗೆ ತಿಳಿದಿದ್ದೆಲ್ಲವುಗಳ ಮುಖ್ಯಾಂಶಗಳನ್ನೂ ಹೇಳಿದ. ನಾಲ್ಕು ವರ್ಷ ಅಥವಾ ಎರಡು ವರ್ಷ ಬಂದು ಕಲಿತರೆ ನೀನೂ ಪ್ರವೀಣನಾಗಬಹುದು ಎಂದು ಸಲಹೆ ಮಾಡಿದ. "ಅಯ್ಯೋ ! ಮೂವತ್ತು ವರ್ಷಗಳ ಹಿಂದೆ ಅವಕಾಶ ಸಿಕ್ಕಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು" ಎಂದು ಯಥಾಪ್ರಕಾರದ ಪಶ್ಚಾತ್ತಾಪಪಟ್ಟೆ.

ಆತನು ಹೇಳಿದ ಕೆಲ ಪುಸ್ತಕಗಳನ್ನು ಕೊಂಡು ತಂದೆ. ಜರ್ಮನ್ ಭಾಷೆಯ ಆ ಪುಸ್ತಕಗಳನ್ನು ಇಂಗ್ಲೀಷಿಗೆ ನಮ್ಮೂರಿನಲ್ಲಿ ಭಾಷಾಂತರ ಮಾಡಿಸಲು ಸುಮಾರು 3 ವರ್ಷಗಳಾದುವು. ಆರಂಭ ಶೂರತ್ವದ ಬೆಂಕಿ ತುಸು ಬೂದಿಯಾಗಹತ್ತಿತ್ತು. ಎಷ್ಟೋ ಮಾಡಬೇಕಾದ, ಮಾಡಬಹುದಾದ, ಕೆಲಸಗಳನ್ನು ಆರಂಭಿಸಿ, ಬಂದ ಅಡಚಣೆಗಳಿಗೆ ತಲೆ ಬಾಗಿ, ಅವುಗಳನ್ನೆಲ್ಲ ಹಾಗೆಯೇ ಬಿಟ್ಟಿದ್ದೆ. ಅವುಗಳ ಜತೆಗೆ ಇದೂ ಒಂದು ಎಂದು ಸಮಾಧಾನಪಟ್ಟುಕೊಂಡೆ.

ವೈದ್ಯಕೀಯದ ಸಣ್ಣಪುಟ್ಟ ವಿಭಾಗಗಳಲ್ಲೂ ಪಾಂಡಿತ್ಯ ಪಡೆದವರು ಅದನ್ನೇ ಜೀವನದ ಗುರಿಯಾಗಿರಿಸಿಕೊಂಡು ಅಧ್ಯಯನ ಮಾಡುವ ವಿಶ್ವವಿದ್ಯಾನಿಲಯಗಳಲ್ಲಿ ಪ್ರಾಯಶಃ ವಿಯನ್ನಾ ಮೊದಲ ಶ್ರೇಣಿಯದು.

★ ★ ★ ★

ಆ ದಿನ ಮಧ್ಯಾಹ್ನ ಊರ ಪ್ರದಕ್ಷಿಣೆಗೆ ಕರೆದುಕೊಂಡು ಹೋದರು. ಚಕ್ರವರ್ತಿಯ ಅರಮನೆಯನ್ನು ಭೇಟಿ ಮಾಡಿಸಿದರು. ಆತ ಶೇಖರಿಸಿಟ್ಟಿದ್ದ ವಸ್ತುಗಳನ್ನೆಲ್ಲ ತೋರಿಸಿದರು. ಕಾಲ ಚಕ್ರ ಉರುಳಿದಂತೆ ಮುಂದೆ ನಮ್ಮ ದೇಶದ ಅರಮನೆಗಳ ಪಾಡೂ ಹೀಗೇ ಆಗುತ್ತೆ ಎನ್ನುವುದು ಸ್ಪಷ್ಟವಾಗಿ ಗೊತ್ತಾಯಿತು. ಅಯ್ಯೋ ಅನ್ನಿಸಲಿಲ್ಲ.

# ವಿಯನ್ನಾ ಬೈ ನೈಟ್

ರಾತ್ರಿ 8 ಗಂಟೆಗೆ ಊಟದ ಶಾಸ್ತ್ರವನ್ನು ಮುಗಿಸಿ ವಿಯನ್ನಾದ ವೆಸ್ಟ್ ಮಿನಿಸ್ಟರ್ ಹೊಟೇಲಿನ ಅಂಗಳದಲ್ಲಿ ಕಾದಿದ್ದೆ, ಸುಮಾರು ಒಂಭತ್ತರ ಹೊತ್ತಿಗೆ ವಿಯನ್ನಾ ಬೈ ನೈಟ್ ತೋರಿಸುವ ಬಸ್ ಬಂತು. ಅಂದು ಬೆಳಿಗ್ಗೆಯೇ ನಮ್ಮ ಹೊಟೇಲಿನಲ್ಲಿ ನಾಲ್ಕು ಜನ ಈ ಬಸ್ಸಿನಲ್ಲಿ ರಾತ್ರಿ ಪ್ರವಾಸಕ್ಕೆ, ಪ್ರದರ್ಶನಗಳಿಗೆ ಟಿಕೆಟ್ ಕೊಂಡಿದ್ದೆವು. ನಾಲ್ವರೂ ಹೋಗಿ ಬಸ್ಸಿನಲ್ಲಿ ಕೂತೆವು. ಧಗಧಗ ದೀಪಗಳುರಿಯುತ್ತಿದ್ದ ದೊಡ್ಡ ದೊಡ್ಡ ರಸ್ತೆಗಳಲ್ಲಿ ಬಸ್ ಹೋಗಿ ಕಡೆಗೊಂದು ಅಡ್ಡರಸ್ತೆಯಲ್ಲಿ ತಿರುಗಿ ಒಂದು ಕಡೆ ನಿಂತಿತು. ಬಸ್ಸಿನಲ್ಲಿದ್ದ ನಾಲ್ವರು ಅಮೆರಿಕನ್ನರು. ನಾಲ್ವರು ನಾವು ಭಾರತೀಯರು, ಎಂಟು ಜನ ಇಂಗ್ಲೀಷಿನವರು, ಮಿಕ್ಕವರೆಲ್ಲ ಯೂರೋಪಿಯನ್ನರು, ಬುಡಕಟ್ಟು ಸುಲಭವಾಗಿ ಗೊತ್ತಾಗಲಿಲ್ಲ, ಎಲ್ಲರೂ ಇಳಿದೆವು ಮಾರ್ಗದರ್ಶಿಯನ್ನು ಹಿಂಬಾಲಿಸಿದೆವು.

ಸಂದಿಯಲ್ಲಿದ್ದ ಒಂದು ಬಾಗಿಲು ತಟ್ಟಿದ, ಬಾಗಿಲು ತೆರೆಯಿತು. ಓಣಿಯಂತಿದ್ದ ವರಾಂಡಾ ಕಾಣಿಸಿತು. ಅದರಲ್ಲಿ ನಡೆದು ಸುಮಾರು ದೂರ ಹೋದಾಗ ದೊಡ್ಡ ಅಂಗಳ ಕಾಣಿಸಿತು. ನಾಲ್ವರೂ ನಾವು ಅಲ್ಲಿದ್ದ ಮೇಜೊಂದರ ಬಳಿ ಕುಳಿತೆವು.

ಇಬ್ಬರು ಹುಡುಗಿಯರು ಮತ್ತೊಬ್ಬ ಬಂದರು. ನಮ್ಮೂರಿನಲ್ಲಿ ರಸ್ತೆ ಪಕ್ಕದ ಮೈದಾನದಲ್ಲಿ ದೊಂಬರಾಟ ಕಟ್ಟುಲ್ಲವೇ ? ಅದೇ ತರಹ ಆ ಮೂವರೂ ದೊಂಬರಾಟ ಆಡಿದರು. ಹಿಂದು ಹಿಂದಕ್ಕೆ ವರ್ತುಳಾಕಾರದಲ್ಲಿ ಇದ್ದಲ್ಲೇ ಪಲ್ಟಿ ಹೊಡೆಯುವುದು ಮುಂದು ಮುಂದಕ್ಕೆ ಅದೇ ತರಹ ಪಲ್ಟಿ ಹೊಡೆಯುವುದು. ಯುವಕನ ಎರಡು ತೋಳುಗಳ ಮೇಲೆ ಹುಡುಗಿಯರು ನಿಂತುಕೊಂಡು, ಆ ಹುಡುಗ ಎದ್ದು ನಿಂತಮೇಲೆ ಅಲ್ಲಿಂದ ಕೆಳಕ್ಕೆ ಧುಮುಕುವುದು. ದೇಶಾವರದ ನಗೆ ಪ್ರದರ್ಶಿಸುವುದು. ಇತ್ಯಾದಿ ಐದು ನಿಮಿಷ ಆಡಿದರು. ಪ್ರಾಯಶಃ ವಿಯನ್ನಾದಲ್ಲಿ ಬಹಿರಂಗ ಸ್ಥಳದಲ್ಲಿ ಬೆಳಿಗ್ಗೆ ಆಡಲು ಅವಕಾಶವಿಲ್ಲವೇನೋ ? ಆದುದರಿಂದ ರಾತ್ರಿ ಹೀಗೆ ಆಟಕಟ್ಟಿ ಪರದೇಶದಿಂದ ಬಂದವರಿಂದ ಹಣ ಸಂಪಾದಿಸಿ, ಹೊಟ್ಟೆ ಹೊರೆದುಕೊಳ್ಳುತ್ತಾರೇನೋ ಎಂದುಕೊಂಡೆ.

ಅದಾದಮೇಲೆ ಐದು ನಿಮಿಷ ಸಂಗೀತ. ಸಾಮೂಹಿಕ ನೃತ್ಯ. ಅಂದರೆ ಅಲ್ಲಿಗೆ ಬಂದಿದ್ದವರು ಜತೆ ಕೂಡಿಸಿಕೊಂಡು ಕುಣಿಯುವುದು.

ಅನಂತರ ಸುಮಾರು ತೂಕವಿದ್ದ ಹೆಣ್ಣೊಂದು ಬಂದು ನೃತ್ಯ ಮಾಡಿತು. ತುಂಬಾ ಎಳಕಾದ ಮುಖ 14-16ರ ಪ್ರಾಯ. ಆದರೂ ಮೈ ತುಂಬಿಕೊಂಡಿತ್ತು. ಸೊಳ್ಳೆ ಪರದೇಲಿ ಉಡುಪನ್ನು ಹೊಲಿಸಿಕೊಂಡು ಈ ಹೆಣ್ಣು ಕುಣಿಯುತ್ತಿತ್ತು. ನೃತ್ಯವನ್ನು ನೋಡಿದರೋ, ಅಥವಾ ಈ ಬೂಸಕ್ಕನ್ನು ನೋಡುತ್ತಿದ್ದರೋ, ಅಲ್ಲಿದ್ದ ಜನ, ಹೇಳಬರುವಂತಿಲ್ಲ. ಅಂಗ ವಿನ್ಯಾಸವಾಗಲಿ, ಕಾಲು ಕುಣಿತವಾಗಲಿ, ಶ್ರೇಷ್ಠ ತರದ್ದಲ್ಲ.

ಆಮೇಲೆ ತಿರುಗಿ ಸಾಮೂಹಿಕ ನೃತ್ಯ, ಸುಗ್ಗಿ ಕುಣಿತದ ತರಹ ಬಂದಿದ್ದವರೆಲ್ಲರೂ ಭಾಗಿಗಳಾಗಿದ್ದರು.

ಅದಾದಮೇಲೆ ಕಾಲಿಗೆ ತಾಳ, ಕೈಯಲ್ಲಿ ಕಂಜಿರ, ಬಾಯಲ್ಲಿ ತುತ್ತೂರಿ, ಸೊಂಟಕ್ಕೆ ಗಿಲಗಿಲಿ ಕಟ್ಟಿಕೊಂಡಿದ್ದವನೊಬ್ಬ ಬಂದು, ಬ್ಯಾಂಡ್ ಬಾರಿಸಿದ. ಹತ್ತೂ ಜನ ಒಟ್ಟಿಗೆ ಮಾಡುವ ಕೊಲೆಯನ್ನು ಇವನೊಬ್ಬನೇ ಮಾಡುತ್ತಿದ್ದ. ಮಂದಿ ಚಪ್ಪಾಳೆ ತಟ್ಟಿತು. ಭೇಷ್ ಅಂದಿತು. ನಾನೂ ಗುಟುಕು ನುಂಗಿದೆ.

ಅನಂತರ ಮಾರ್ಗದರ್ಶಿ ಎದ್ದ, ಹೊರ ಹೊರಟ. ಕುರಿ ಕುರಿಯ ಹಿಂದೆ ಮುಂದೆ ಹೋಗುವಂತೆ ನಾವೂ ಹಿಂಬಾಲಿಸಿದೆವು. ಛೇ ! ಛೇ ಹಾಗನ್ನಬಾರದೇನೋ ? ಬಿಳಿ ಕುರಿಯ ಹಿಂದೆ ಕರಿ ಮಂದೆ ಹೋಗುವಂತೆ ; ಅನ್ನಬೇಕಾಗಿತ್ತು, ಹೋಗಿ ಬಸ್ಸಿನಲ್ಲಿ ಕುಳಿತೆವು. ತಿರುಗಿ ಆ ಬಸ್ಸು, ದೊಡ್ಡರಸ್ತೆ ಅಡ್ಡರಸ್ತೆ ಗಿಡ್ಡರಸ್ತೆಗಳನ್ನು ಹಾದು ಒಂದು ಓಣಿಯ ಪಕ್ಕದಲ್ಲಿ ನಿಂತಿತು.

ತಿರುಗಿ ಎಲ್ಲರೂ ಇಳಿದು ತುಸುದೂರ ನಡೆದು ಹೋಗಿ ಒಂದು ಬಾಗಿಲ ಬಳಿ ನಿಂತೆವು, ಬಾಗಿಲು ತೆರೆಯಿತು. ಎದುರಿಗೆ ಎರಡಡಿ ಅಗಲವಿರುವ ಮೆಟ್ಟಿಲುಗಳು. ಇಪ್ಪತ್ತು ಕಡಿದಾದ ಮೆಟ್ಟಲುಗಳನ್ನು ಹತ್ತಿ ಎಡಕ್ಕೆ ತಿರುಗಿ, ತಿರುಗಿ ಮೆಟ್ಟಿಲುಗಳನ್ನೇ ಹತ್ತಿ ಕಡೆಗೆ ಒಂದು ಅಟ್ಟ ಸೇರಿದೆವು. ಅಲ್ಲಿ ನಮಗಾಗಿ ಮೀಸಲಿದ್ದ ಕುರ್ಚಿಗಳ ಮೇಲೆ ಒತ್ತಡವಾಗಿ ಕುಳಿತೆವು. ಬಲಗಡೆ ವಾರೆಯಾಗಿ ಎದುರಿಗೆ ರಂಗ ಮಂಟಪ. ಬಲಗಡೆ ಹಳ್ಳದಲ್ಲಿ ಪ್ರೇಕ್ಷಕರೆಲ್ಲ ಕುಳಿತಿರುವ ದೃಶ್ಯ, 200-300 ಮಂದಿ ಕುಳಿತಿದ್ದಿರಬಹುದು.

ಪ್ರದರ್ಶನ ಶುರುವಾಗಿತ್ತು. ಒಂದು ಹೆಣ್ಣು ಏಳು ಚೆಂಡುಗಳನ್ನು ದೊಂಬರ ತರಹ ಕುಣಿಸುತ್ತಿದ್ದಳು. ಎರಡೂ ಕೈಗಳಲ್ಲಿ ಎರಡು ಚೆಂಡುಗಳು. ಎಡಗೈಯಿಂದ ಒಂದು ಚೆಂಡನ್ನು ಚಿಮ್ಮುವಳು. ಅದು ಮೇಲಕ್ಕೆ ಹೋದಾಗ ಬಲಗೈಯಿನ ಚೆಂಡನ್ನು ಎಡಗೈಗೆ ಎಸೆಯುವಳು. ಮೇಲಿಂದ ಇಳಿಯುತ್ತಿದ್ದ ಚೆಂಡನ್ನು ಬಲಗೈಯಲ್ಲಿ ಹಿಡಿಯುವಳು. ಚೆಂಡುಗಳೆಲ್ಲಾ ದೊಡ್ಡ ಸೊನ್ನೆಯ ಸುತ್ತ ಸುತ್ತುತ್ತಿದ್ದಂತೆ ಭಾಸವಾಗುತ್ತಿತ್ತು. ಅವಳ ಕೈ ಚಳಕ ಅಷ್ಟು ಚೆನ್ನು. ನಮ್ಮೂರ ಸರ್ಕಸುಗಳಲ್ಲಿ ಈ ಚಮತ್ಕಾರವನ್ನು ಎಷ್ಟೋ ಬಾರಿ ನೋಡಿದ್ದೇನೆ. ಇವೇನು ಮಹಾ

ಎಂದುಕೊಂಡೆ. ನನ್ನ ಪಕ್ಕದಲ್ಲಿ ಕುಳಿತಿದ್ದವ ಅಮೆರಿಕನ್ ಮುದುಕ ಒಬ್ಬ, ಮೊಣಕೈಯಿಂದ ನನ್ನನ್ನು ತಿವಿದ. ಎಷ್ಟು ಚೆನ್ನಾಗಿ ಆಡ್ತಾಳೆ ನೋಡಿ. ಐದೇ ಚೆಂಡುಗಳಲ್ಲಿ ಆಕೆ ಆಡ್ತಾ ಇರೋದು. ಆದರೆ ನೋಡುವವರಿಗೆ ಒಳರ ತರಹ ಕಾಣಸುತ್ತೆ'' ಎಂದ. ತಿರುಗಿ ನೋಡಿದೆ. ದಿಟ ಅವನು ಹೇಳಿದ್ದು. ಐದೇ ಚೆಂಡುಗಳು ತಿರುಗುತ್ತಾ ಇದ್ದುವು. ಮಿಕ್ಕೆರಡು ಎದೆಯ ಮೇಲೆ ಇದ್ದಲ್ಲೇ ಇದ್ದುವು. ಆದರೂ ಕೈ ಚಳಕದ ವೇಗದಲ್ಲಿ ವ್ಯತ್ಯಾಸ ಗೊತ್ತಾಗುತ್ತಲೇ ಇರಲಿಲ್ಲ.

ಅದಾದಮೇಲೆ ಇಬ್ಬರು ನರ್ತಕರು ಬಂದರು. ಸದಾರಮೆ ನಾಟಕದ ಕಳ್ಳನ ತರಹ ಉಡುಪು ಧರಿಸಿದ್ದ ಯುವಕ ಒಬ್ಬ, ಅದೇ ರೀತಿ ಪೈಜಾಮಾ ಒತ್ತಂಗಿ ಧರಿಸಿದ್ದ ಯುವತಿ ಒಬ್ಬಳು. ಅಪಾಚಿ ಡ್ಯಾನ್ಸ್ ಅಂತ ಪಕ್ಕದಲ್ಲಿದ್ದವ ತಿವಿಯುತ್ತಾ ಹೇಳಿದ. ದಿಟವಾದ ವ್ಯಾಯಾಮ ಪ್ರದರ್ಶನವೇ ಅದು. ಅವಳ ಬಲಗೈ ಹಿಡಿದು ತನ್ನ ಸುತ್ತ ಗಿರಿಗಟ್ಲೆ ಸುತ್ತುವ ಹಾಗೆ ಆಕೇನ ತಿರುಗಿಸಿದ. ಹಿನ್ನೆಲೆಯ ಹಿತವಾದ ಸಂಗೀತ. ನಂತರ ಅವಳು ನಿಂತಿದ್ದಳು. ಏನು ಬಂತೋ ಅವನಿಗೆ. ಜಟ್ಟಂತ ಹೋಗಿ ಅವಳ ಕೆನ್ನೆಗೆ ಲಪ್ಪಂತ ಹೊಡೆದ. ತತ್ತರಿಸುತ್ತ ಆಕೆ ಹಿಂದಕ್ಕೆ ಹೋದಳು. ಕುಣಿಯುವ ಹೆಜ್ಜೆಗಳನ್ನು ಹಾಕುತ್ತಲೇ, ಸಂಗೀತದ ಹಿನ್ನೆಲೆಗೆ ಸರಿ ತಾಳ ಹಾಕುತ್ತಲೇ ತತ್ತರಿಸಿದಳು. ದೂರ ಹೋಗಿ ನಿಂತಳು. ಸುಧಾರಿಸಿಕೊಂಡಳು. ತಿರುಗಿ ಬಂದು ಸೇಡು ತೀರಿಸಿಕೊಳ್ಳಲು ಇವನನ್ನು ಹೊಡೆಯುಕ್ಕ ಅಂಗೈ ಎತ್ತಿ ಬಂದಳು. ಹತ್ತಿರ ಬಂದಳು. ಸರಕ್ಕಂತ ಅವಳ ತೋಳುಗಳನ್ನು ಹಿಡಿದು ತನ್ನ ತಲೆ ಮೇಲಕ್ಕೆ ಎತ್ತಿದ. ಅಲ್ಲಿ ಆಕೆಯನ್ನು ಅಪ್ಪಾಲೆ ತಿಪ್ಪಾಲೆ ತಿರುಗಿಸಿದ. ಸುಮಾರು ವಜನ್ ಇದ್ದಳು ಆಕಿ ಏನಿಲ್ಲ ಅಂದರೂ 40-50 ಕಿಲೋಗ್ರಾಂ. ಲೀಲಾಜಾಲವಾಗಿ ಆಕೀನ ಎತ್ತಿ ತಿರುಗಿಸುತ್ತಿದ್ದ. ಇವನ ತೂಕ ಸುಮಾರು 70 ಕಿಲೊ ಇದ್ದಿರಬಹುದು. ಪರವಾಗಿಲ್ಲ ತೆಳ್ಳಗಿದ್ದರೂ ವಸ್ತಾದಿಯಾಗಿದಾನೆ ಎನಿಸಿತು.

ಇದೇ ರೀತಿ ವ್ಯಾಯಾಮದ ಚೆಕ್ಕಂದ ಆಡಿದರು. ಸ್ವಲ್ಪ ಹೊತ್ತು ಸಂಗೀತದವರು ಅಲ್ಬದಾಯಾ ತರಹ ಯಾವುದೋ ಮಟ್ಟನ್ನು ಬಾರಿಸಿದರು. ಏನು ಬಂತೋ ಆ ಕೃಶಾಂಗಿಗೆ, ಯಾವ ಆವೇಶ ಮೂಡಿತೋ. ಘಟ್ಟಂತ ಅವನನ್ನು ಅನಾಮತ್ತು ಎತ್ತಿಬಿಟ್ಟು ಹೆಗಲ ಮೇಲೆ ಹಾಕಿಕೊಂಡು ರಂಗದ ಪಕ್ಕಕ್ಕೆ ಜಗ್ಗು ಹಾಕುತ್ತಾ ಹೊರಟುಹೋದಳು.

6 ವರ್ಷದ ಹುಡುಗನಾಗಿದ್ದಾಗ ನಮ್ಮಜ್ಜಿ, ಪಕ್ಕದ ಮನೆಯ ಮೂರು ವರ್ಷದ ಪಾತುವನ್ನು ಕಂಡು, ''ಲೋ ! ಹುಷಾರಾಗಿರೋ, ಬಲು ಚೂಟಿ ಪಾತು, ಗಂಡನ್ನ ಬುಟ್ಟೀಲಿ ಹಾಕ್ಕೊಂಡು, ಹೆಗಲ ಮೇಲೆ ಇರಿಸಿ, ಸಂತೆಗೆ ಹೋಗಿ ಮಾರಿಕೊಂಡು ಬಂದುಬಿಡುತ್ತಾಳೆ'' ಅಂತ. ಮೂರು ವರ್ಷದ ಪಾತು ಅಲ್ಲ ಈಕೆ. 23 ಮೀರಿದ, ಮಾತು ಆಡದ ಮಹಿಳೆ. ಅವನು ಗಂಡನೋ ಅಲ್ಲವೋ ನನಗೆ ತಿಳಿಯದು. ಆದರೆ ಗಂಡಸು ಅಂತ ಖಚಿತವಾಗಿ ಸುಲಭವಾಗಿ ಗೊತ್ತಾಗಿತ್ತು. ಅವನನ್ನು ಅನಾಮತ್ತು ಎತ್ತಿ ಹೆಗಲ ಮೇಲೆ ಹಾಕಿಕೊಂಡು ಹೋದ ಜೋರು ನೋಡಿದರೆ, ನೇರ ಸಂತೆಗೆ ಹೋಗಿ, ಅಜ್ಜಿ ಹೇಳಿದ ಹಾಗೆ ಮಾರಿಕೊಂಡು ಬರುತ್ತಾಳೇನೋ

ಅಂದುಕೊಂಡೆ.

ರಂಗಮಂಟಪದ ಮೇಲೆ ಹಂಟರ್‌ವಾಲಿಯೊಬ್ಬಳು ಬಂದಳು. ಶಿಕಾರಿ ಗಂಡುಗಳು ಸಾಮಾನ್ಯವಾಗಿ ಧರಿಸುವ ತುಸು ಬಿಗಿಯಾದ ಜೋಧ್‌ಪುರ್ ಷರಾಯಿಯನ್ನು ತೊಟ್ಟಿದ್ದಳು. ನಾಲ್ಕು ಜೋಬುಗಳಿರುವ ಗಾಢಾ ಬಟ್ಟೆಯ ಅಂಗಿಯನ್ನು ಹಾಕಿಕೊಂಡಿದ್ದಳು. ಅಂಗಿಯ ಮೇಲ್ಜೇಬುಗಳೆರಡೂ ತುಂಬಿಕೊಂಡಿದ್ದವು. ವಾರಣವಾಗಿ ತುಂಬಿಕೊಂಡಿದ್ದುವು. ಆದುದರಿಂದಲೇ ಹಂಟರ್‌ವಾಲಿ ಇವಳು, ಹಂಟರ್‌ವಾಲಾ ಅಲ್ಲ ಅಂತ ಖಂಡಿತವಾದುದು. ತಲೆಗೆ ಬಿಗಿಯಾದ ಟೊಪ್ಪಿ ಹಾಕಿಕೊಂಡಿದ್ದಳು. ಟಕ್ ಟಕ್ ಶಬ್ದ ಮಾಡುವ ಬೂಡ್ಸು ಉಡಿಗೆಯನ್ನು ಸಂಪೂರ್ಣಗೊಳಿಸಿತ್ತು. ಕೈಯಲ್ಲೊಂದು ಹಂಟರ್ ಚಾವಟಿ ಹಿಡಿದಿದ್ದಳು. ರಂಗದ ಮೇಲೆ ಅತ್ತಿಂದ ಇತ್ತ ಓಡಾಡುವಾಗ, ಆ ಚಾಟಿಯನ್ನು ಲಟ್ ಪಟ್ ಅಂತ ನುಡಿಸುತ್ತಿದ್ದಳು. ಹಿನ್ನೆಲೆಯ ಸಂಗೀತದ ತಾಳಕ್ಕೆ ಸರಿಯಾಗಿ ಚಾಟಿ ನುಡಿಸುತ್ತಿದ್ದಳು.

ರಂಗಮಂಟಪದ ಬಲ ಪಕ್ಕದತ್ತ ಒಮ್ಮೆ ನೋಡಿದಳು. ಬೇಟೆಯ ಮೃಗ ಅಲ್ಲಿ ಎಲ್ಲಾದರೂ ಹುದುಗಿಕೊಂಡಿರಬಹುದೋ ಅಂತ. ಸಪ್ಪಳದೊಡನೆ ಕಳ್ಳ ಹೆಜ್ಜೆ ಹಾಕುತ್ತ, ಕಣ್ಣಿನ ಮೇಲೆ ಅಂಗೈ ನೆರಳು ಹಾಕಿಕೊಂಡು ನಡೆದಳು. ಚಾಟಿಯಿಂದ ಒಮ್ಮೆ "ಲಟ್" ಮಾಡಿದಳು. ಈ ಶಬ್ದಕ್ಕೆ ವನ್ಯಮೃಗವಿದ್ದರೆ, ಹೊರಗೆ ಬರುತ್ತಿತ್ತು ಎಂದವಳ ಸಹಜವಾದ ಎಣಿಕೆ. ಆ ಪಕ್ಕದಿಂದ ಯಾವ ಮೃಗವೂ ಬರಲಿಲ್ಲ. ಈ ಕಡೆಗೆ ಸರಿದಳು.

ಎಡ ಪಕ್ಕದತ್ತ ಇಣಿಕಿ ನೋಡಿದಳು. ಅಲ್ಲೇನೋ ಹುದುಗಿತ್ತೇನೋ ? ಮೆಲ್ಲ ಮೆಲ್ಲಗೆ ಅತ್ತೆ ಮನೆಗೆ ಮೊದಲ ಬಾರಿ ಹೋಗುವ ಹಳೇ ಕಾಲದ ಸೊಸೆಯಂತೆ ಕಾಲೆಳೆದುಕೊಂಡು ಹೋದಳು. ಅಲ್ಲಿ ಇದ್ದುದು ಅನುಮಾನಾಸ್ಪದವಾಗಿರಬೇಕು ಥಟ್ಟಂತ ನಿಮಿರಿ ನಿಂತಳು. ಎಡಗೈಯನ್ನು ಎಡಸೊಂಟದಮೇಲೆ ಇರಿಸಿದಳು. ಬಲಗೈಯಲ್ಲಿದ್ದ ಚಾಟಿಯನ್ನು "ಲಟ್" ಅಂತ ಬಾರಿಸಿದಳು. ರಂಗ ಮಂಟಪದ ಎಡ ಪಕ್ಕದಲ್ಲೂ ವನ್ಯ ಮೃಗವು ಹುದುಗಿಕೊಂಡಿರಲಿಲ್ಲ. ಬೇಟೆ ಮಾಯವಾಗಿದೆ ಎಂದು ಖಿನ್ನಳಾಗಿ ರಂಗ ಮಂಟಪದ ಮಧ್ಯಕ್ಕೆ ಚಾಟಿ ನುಡಿಸುತ್ತಲೇ ಬಂದಳು. ಬಂದು ನಿಂತಳು. ಚಾಟಿ ನುಡಿಸುವುದನ್ನು ನಿಲ್ಲಿಸಿ ಬೂಡ್ಸಿನಿಂದ ತಾಳ ಹಾಕಿದಳು. ಶತಪಥ ಗಂಡು ಹೆಜ್ಜೆ ಹಾಕಿದಳು. ತಿರುಗಿ ನಿಂತಳು.

ನಂತರ ರಂಗಮಂಟಪದ ಮಧ್ಯೆ ನಿಂತು ನೆಟ್ಟಗೆ ಮುಂದಕ್ಕೆ ನೋಡಿದಳು. ಮುಖ ಮಂದಸ್ಮಿತವಾಯಿತು. ಟ್ಯೂಬ್‌ಲೈಟಿನ ಸ್ವಿಚ್ ಹಾಕಿದ ಮೇಲೆ, ಎಷ್ಟೋ ಹೊತ್ತು ಆವಾಗ ಕಣ್ಣು ಕಣ್ಣು ಮಿಟಕಿಸಿ ಆಮೇಲೆ ದೀಪ ಹೊತ್ತಿಕೊಳ್ಳಲ್ಲವೆ ? ಅದೇ ತರಹ ಹಂಟರವಾಲಿಯೂ ಎದುರಿಗೆ ನೋಡಿ ಪ್ರೇಕ್ಷಕರನ್ನೆಲ್ಲಾ ಕಂಡು, ಕಣ್ಣು ಕಣ್ಣು ಮಿಟಕಿಸಿ, ನಂತರ ಕಿರುನಗೆಯನ್ನು ಹೂಡಿದಳು. ತುಟಿಯ ಎರಡೂ ತುದಿಗಳು ಕಿವಿಯತ್ತ ವಾಲಿದವು. ಎರಡೂ ಕೆನ್ನೆಗಳಲ್ಲಿ ಪುಟಾಣಿಗುಣಿಗಳು ಇಣುಕಿದುವು. ಕಮಲದಂತಿದ್ದ ಕಣ್ಣು, ಮೀನಿನ ಕಣ್ಣುಗಳಂತಾಯಿತು.

ಮೈಯ್ಯೂ ಉಬ್ಬಿದಂತಾಯಿತು. ಕಾಲುಗಳೂ ಸಡಿಲಗೊಂಡುವು.

ಅಷ್ಟು ಹೊತ್ತೂ ವನ್ಯಮೃಗಕ್ಕೆ ಬೇಟೆಯಾಡಿ ಸೋತ ಬೇಸರದಿಂದಲೇ. ಅಥವಾ ಹಾಗೆ ಬೇಟೆಯಾಡಿದ ಆಯಾಸದಿಂದಲೋ ಆಕೆಗೆ ಶಕೆಯಾಗಿದ್ದಿರಬೇಕು ಹಾಗೂ ಎದುರಿಗಿದ್ದ ವನ್ಯಮೃಗಗಳ ಶಿಕಾರಿಗೆ, ಚಾಟಿಯ ಅಗತ್ಯ ಇಲ್ಲ ಎಂದು ಆಕೆ ತಿಳಿದುಕೊಂಡಳೋ ಏನೋ ? ಅಥವಾ ಎದುರಿಗೆ ಕಂಡ ವನ್ಯ ಮೃಗಗಳ ಶಿಕಾರಿಯನ್ನು ಪ್ರಯಾಸಪಡದೆ ಮಾಡಬಹುದು ಎಂದುಕೊಂಡಳೇನೋ ?

ಚಾಟಿಯನ್ನು ಒಂದು ಪಕ್ಕಕ್ಕೆ ಎಸೆದಳು. ರಂಗಮಂಟಪದ ಹಿಂಬದಿಯ ತುದಿಯಲ್ಲಿ ಅಜ್ಜಿಯೊಬ್ಬಳು ನಿಂತಿದ್ದಳು. ಕೈಕಯಿಗೆ ಮಂಥರೆ ಇದ್ದಹಾಗೆ. ಮಿಟಕಲಾಡಿ ಮೀನಾಕ್ಷೀಗೆ ರಂಗಜ್ಜಿ ಇದ್ದ ಹಾಗೆ, ಆಕೆ ಹಂಟರವಾಲಿಯ ರಕ್ಷಕಳಾಗಿದ್ದಳು. ಹಂಟರ್‌ವಾಲಿ ಎಸೆದ ಚಾಟಿಯನ್ನು ತೆಗೆದಿಟ್ಟುಕೊಂಡಳು. ಇದನ್ನು ಹಂಟರ್‌ವಾಲಿಯೂ ನೋಡಿದಳು. ಅಜ್ಜಿಯ ಮೇಲೆ ಕೋಪ ಬಂದಿತೇನೋ ? ನಾನೂ ಇವಳ ಹಾಗೆ ಒಂದು ದಿವಸ ಆಗಿ ಬಿಡ್ತೀನಿ ಅಂತ ಭಯವೇ ಆಮರಿಕೊಂಡಿತೇನೋ ? ಏನಾಯ್ತೋ ಪಾಪ ! ಕೆರಳಿದಳು ಹಂಟರ್‌ವಾಲಿ.

ತಲೆಯಲ್ಲಿದ್ದ ಟೊಪ್ಪಿಯನ್ನು ಕಿತ್ತೆಸೆದಳು. ಭಗೀರಥ ಪ್ರಾರ್ಥಿಸಿದಾಗ ಗಂಗೆ ಮೇಲಿಂದ ರಭಸವಾಗಿ ಇಳಿಯುವಾಗ, ಈಶ್ವರ ನಿಂತು ಆಕೆಯ ಜೋರನ್ನೆಲ್ಲಾ ತನ್ನ ಜಟಾಜೂಟಗಳಲ್ಲಿ ಹುಟ್ಟಡಗಿಸಿ ಹಿಡಿದುಕೊಳ್ಳುವ ರವಿವರ್ಮನ ಚಿತ್ರವನ್ನು ನೋಡಿದ್ದೀರಾ ? ಈಶ್ವರ ದೃಢವಾಗಿ ನಿಂತಿದ್ದಾನೆ. ಜಡೆಗಳೆಲ್ಲವೂ ಕಾಳ ಕರಾಳವಾಗಿ. ಹೆಪ್ಪುಗಟ್ಟಿದ ಕತ್ತಲೆಯಂತೆ. ತಲೆಯಿಂದ ಗುಂಗುರುಗುಂಗುರಾಗಿ ಇಳಿದು ನಿಂತಿವೆ.

ಹಂಟರ್‌ವಾಲಿಯ ರಂಗು ರಂಗಿನ ಗುಂಗುರು ಕೂದಲುಗಳೂ, ಶಿವನ ಜಟೆಯಂತೆ ಮುಖದ ಸುತ್ತಾ ಇಳಿದಾಡುತ್ತಿದ್ದುವು ಇಷ್ಟು ಕೂದಲುಗಳನ್ನು ಆ ಪುಟಾಣಿ ಟೊಪ್ಪಿಯಲ್ಲಿ ದಬ್ಬಿಟ್ಟಿದ್ದಳಲ್ಲಾ ! ಇಂತಹ ಚಾಣಾಕ್ಷಿ ಯಾರನ್ನೂ ಟೊಪ್ಪಿಯಲ್ಲಿ ಹಾಕಿ ಹಿಡಿಯುವ ಸಾಧ್ಯತೆ ಇದೆ ಎಂದೆನಿಸಿತು.

ಆ ಗುಂಗುರು ಕೂದಲುಗಳು ಕಿವಿಯೊಳಗೆ ಗುಂಯ್ ಮಾಡಿದುವೇನೋ ? ಏನು ರಹಸ್ಯ ತಿಳಿಸಿದುವೋ ? ಹಂಟರ್‌ವಾಲಿ ಕುಪಿತಳಾದಳು. ಅಂಗಿಯನ್ನು ಕಿತ್ತೆಸೆದಳು. ಅದೆಂತಹ ಅಂಗಿ ಅಂತ ! ಗುಂಡಿಗಳೆಲ್ಲ ಇದ್ದಂತೆಯೇ ಇದ್ದುವು. ಇವಳು ಒಂದು ಕಡೆ ಹಿಡಿದು ಕಿತ್ತಾಗ ಅಂಗಿಗೆ ಅಂಗಿಯೇ ಕಿತ್ತಂತೆ ಹೊರಬಂತು. ಮಕ್ಕಳ ಅಲಂಕಾರದ ಅಂಗಿಗಳಿಗೆ ಅಲಂಕಾರದ ಗುಂಡಿಗಳನ್ನು ಹಾಕಿರುಲ್ಲವೇ ? ಹಾಗೆ ಈಕೆಯ ಅಂಗಿಗೂ ಕಾಣದ ಹಾಗೆ ಒತ್ತು ಗುಂಡಿಗಳನ್ನು ಹಾಕಿದ್ದಿರಬೇಕು. ಮೂಲೆಯಲ್ಲಿದ್ದ ಅಜ್ಜಿ ಬಂದು ಅಂಗಿಯನ್ನು ತೆಗೆದುಕೊಂಡು ವಾರಣವಾಗಿ ಮಡಿಸಿ ಹಿಂದಕ್ಕೆ ಹೋದಳು.

ಅದೇನು ಮೋಜು ಅಂತ ! ಅಂಗಿಯನ್ನು ತೆಗೆದು ಎಸೆದಿದ್ದರೂ ಮೇಲಿನ ಎರಡು ಜೇಬುಗಳನ್ನು ತುಂಬಿಕೊಂಡಿದ್ದ ವಸ್ತುಗಳು ಅಲ್ಲಿಯೇ ಮೆರೆಯುತ್ತಿದ್ದುವು. ಇವಕ್ಕೂ ಎರಡು ಅಲಂಕಾರದ ಗುಂಡಿಗಳು. ಏಕ ಮುಖ ರುದ್ರಾಕ್ಷಿಗಳ ಹಾಗೆ ಆ ಗುಂಡಿಗಳು ರಚಿತವಾಗಿದ್ದುವು.

ಎದುರಿಗೆ ಕಂಡ ವನ್ಯ ಮೃಗಗಳನ್ನು ಮತ್ತೊಮ್ಮೆ ನೋಡಿದಳು. ಅಂಗೈ ನೆರಳನ್ನು ಹುಬ್ಬಿನಮೇಲೆ ಹಾಕುತ್ತ ನೋಡಿದಳು. ಏನೋ ತೆವಲು ಬಡಿದಿರಬೇಕು. ಎಡ ಸೊಂಟದ ಮೇಲಿದ್ದ ಕೈಯ್ಯನ್ನು ಪಕ್ಕಕ್ಕೆ ಝಾಡಿಸಿದಳು. ಜೋಧ್‌ಪುರ್ ಷರಾಯಿಯ ಎಡ ಅರ್ಧ ಅನಾಮತ್ತಾಗಿ ಹರಿದು ಬಂತು. ಅರ್ಧನಾರೀ ನಗ್ನ ಮೂರುತಿ. ಸರಿ ಇಷ್ಟು ಹೊತ್ತಿಗೆ ನೀವೆಣಿಸಿದಂತೆಯೇ – ಬಲ ಅರ್ಧದ ಷರಾಯಿಯೂ ಅಜ್ಜಿಯ ಕೈ ಸೇರಿತು.

ಅಷ್ಟು ಹೊತ್ತಿಗೆ ಆವೇಶ ಉಲ್ಬಣಕ್ಕೇರಿತ್ತು. ಆವೇಶ ಬಂದವರು ತೇರಿನ ಸುತ್ತ ಕುಣಿದಾಡುವುದಿಲ್ಲವೇ ? ಹಾಗೆ ಹಂಟರವಾಲಿ ಹಾಕಿದ್ದೇ ಹೆಜ್ಜೆ. ಕುಣಿದಿದ್ದೇ ನಾಚು !

ಸುಸ್ತಾಯಿತೇನೋ ಪಾಪ ! ರಂಗಮಂಟಪದ ಪಕ್ಕದಲ್ಲೇ ಉಯ್ಯಾಲೆಯೊಂದು ತೂಗುಹಾಕಿತ್ತು. ಅದರ ಮೇಲೆ ಹೋಗಿ ಬಿದ್ದುಕೊಂಡಳು. ತೊಣಚಿ ಹೊಕ್ಕ ನಾಯಿನ ಹಾಗೆ ಆಡಿದಳು. ನೀರಿನಿಂದ ಹೊರ ಬಂದ ಮೀನಿನ ತರಹ ವಿಲಿವಿಲಿ ಒದ್ದಾಡಿದಳು, ವನ್ಯಮೃಗ ಬೇಟೆಯಲ್ಲಿ ಸಿಗಲಿಲ್ಲ ಅಂತ ಹಾಗೆ ಒದ್ದಾಡಿದಳೋ. ಅಥವಾ ಸಿಕ್ಕಿತು ಅಂತ ಮುಲುಗಾಡಿದಳೋ ಭಗವಂತನಿಗೇ ಗೊತ್ತು. ನಮ್ಮ ದೇಶದ ಭರತನಾಟ್ಯದ ಮುದ್ರಾ ಸಂಕೇತಗಳು ಅವರಿಗೆ ಹೇಗೆ ಗೊತ್ತಾಗುವುದಿಲ್ಲವೋ ಹಾಗೆಯೇ ಅವರ ನಾಟ್ಯದ ಅಂತರಂಗ ಸರಿಯಾಗಿ ನನಗೆ ತಿಳಿಯಲಿಲ್ಲ. ಆದರೂ ಅವರ ಅಂತರಂಗ ಬಹಿರಂಗ ಎರಡೂ ಒಂದೆಯೇನೋ ಎನ್ನುವಷ್ಟು ಅನುಮಾನ ಬಂತು. ಎರಡರಲ್ಲೂ ಮುಚ್ಚಿಡುವ ವಸ್ತುವಾಗಲಿ ಇರಲಿಲ್ಲ.

ರಾತ್ರಿ ಹನ್ನೆರಡು ಗಂಟೆ ಬಡಿಯಿತು. ರಂಗಮಂಟಪದ ಹಿಂಬದಿಯಲ್ಲಿದ್ದ ದೊಡ್ಡ ಗಡಿಯಾರವು ಜಾಗಟೆ ಬಾರಿಸಿತ್ತು. ಒಂದೇ ಮುಳ್ಳು ಗಡಿಯಾರದ ಮುಖದಲ್ಲಿ ನಿಂತಿದ್ದಂತೆ ಕಾಣಿಸಿತು.

ನಮ್ಮ ಮಂದೆಯ ಕುರುಬ ಎದ್ದು ಹೊರಟ. ಹುಷ್ ಅಂತ ಅವನ ಸಿಳ್ಳು ಹಾಕಬೇಕಾಗಿರಲಿಲ್ಲ. ಕುರಿಗಳ ಹಾಗೆ ಅವನ ಹಿಂದೆ ಮಂದೆಗೆ ಮಂದೆಯೇ ನಡೆಯಿತು. ಎಲ್ಲರೂ ಹೋಗಿ ಬಸ್ಸಿನಲ್ಲಿ ಕೂತೆವು. ಬಸ್ ಹೊರಟಿತು. ಸ್ವಲ್ಪದೂರ ಹೋದಮೇಲೆ, ರಾತ್ರಿಯಲ್ಲಿಯೂ ಭವ್ಯವಾಗಿ ಕಾಣಿಸುತ್ತಿದ್ದ ಅರಮನೆಯ ಮುಂದೆ ಬಸ್ ನಿಂತಿತು. ಅರಮನೆಯಲ್ಲಿದ್ದ ಆ ರಾತ್ರಿ ದೀಪೋತ್ಸವವಿರಬೇಕು. ನಮ್ಮಲ್ಲಿ ದೀಪಾವಳಿ ಇದ್ದಹಾಗೆ ಎಂದು ಕೊಂಡೆ. ಆದರೆ ಮಾರ್ಗದರ್ಶಕ ವಿವರಣೆಯಿತ್ತ :— ಆಗಿನ ಕಾಲದ ಅರಮನೆಯು ಈಗ

ಭವ್ಯ ಹೋಟಲಾಗಿ ಪರಿವರ್ತಿಸಲ್ಪಟ್ಟಿದೆಯೆಂದೂ, ನಿಶಿರಾತ್ರಿಯಲ್ಲಿ ಅಲ್ಲಿ ಒಂದು ಬಟ್ಟಲು ಕಾಫಿ ಕುಡಿಯುವುದು, ಒಂದು ಮೋಜೆಂದೂ ಅದಕ್ಕಾಗಿ ಅಲ್ಲಿಗೆ ಹೋಗುತ್ತಿದ್ದೇವೆಂದೂ ತಿಳಿಸಿದ.

ನಿಜವಾಗಲೂ ಅದು ಅರಮನೆಯೇ ! ಒಳ ಅಂಗಳದ ಹಜಾರದಲ್ಲಿ ನಾವು ನಾಲ್ವರೂ ಒಂದು ಮೇಜಿನ ಸುತ್ತ ಕುಳಿತೆವು. ನೂರು ಇನ್ನೂರು ಅಡಿ ಉದ್ದ ಅಗಲದ ಒಳ ಅಂಗಳ, ಸಣ್ಣಪುಟ್ಟ ಕಾರಂಜಿಗಳು. ಹುಲ್ಲುಗಾವಲುಗಳು. ಬಯಲುನಾಟ್ಯ ಮಂಟಪ, ಧಗಧಗಿಸುವ ವರ್ಣವರ್ಣದ ವಿದ್ಯುದ್ದೀಪಗಳು, ಅಂಗಳದ ಸುತ್ತಲೂ ಎತ್ತರವಾದ ಅಗಲವಾದ ಹಜಾರ, ಹಜಾರದಲ್ಲಿ 20-25 ಅಡಿ ಎತ್ತರದ ಅಮೃತಶಿಲೆಯ ದುಂಡು ಕಂಬಗಳು, ಅಣಿಯಾದ ಮೇಜುಗಳು, ಅಂದವಾದ ಕುರ್ಚಿಗಳು.

ಕೂತ ಸ್ವಲ್ಪ ಹೊತ್ತಿನಲ್ಲೇ ನಮ್ಮ ಮೇಜಿನ ಬಳಿಗೆ ಇಬ್ಬರು ಸಭ್ಯಸ್ಥರು ಬಂದರು. ಭಾರತೀಯರಾದ ನಮ್ಮ ಪರಿಚಯ ಮಾಡಿಕೊಳ್ಳಲು ಕುತೂಹಲದಿಂದ ಆ ದೇಶದವರು ಬರುತ್ತಿದ್ದಾರೆ ಅಂತ ಅಂದುಕೊಂಡೆ. ಲಕ್ಷಣವಾದ ಬೆಲೆ ಬಾಳುವ ರಾತ್ರಿ ಸಂಪ್ರದಾಯದ ಕರಿ ಬಾಲದ ಅಂಗಿ, ಷರಾಯಿ, ಬಿಳಿ ಬೊ ಧರಿಸಿದ್ದರು. ಹತ್ತಿರ ಬಂದ ಕೂಡಲೇ ಎದ್ದು ನಮಸ್ತೆ ಎಂದು ಸ್ವಾಗತಿಸೋಣ ; ಭಾರತೀಯ ಶೈಲಿಯಲ್ಲಿ ಎಂದುಕೊಂಡೆ. ಆದರೆ ಬಂದ ಸಭ್ಯಸ್ಥರು, ನಾನು ಬಾಯಿ ಬಿಡುವ ಮೊದಲೇ ಕಾಫೀ ? ಲಿಕ್ಯೂರ್ ? ಎಂದು ಕೇಳಿದರು. ಓಹೋ ! ಈ ಹೋಟಲುಗಳ ಮಾಣಿಗಳು ಇವರು ಕಾಫಿ ಕುಡೀತೀರೋ ? ಅಥವಾ ಕುಡೀತೀರೋ ? ಎಂದು ಕೇಳುತ್ತಿದ್ದಾರೆ ಎಂದು ಅರ್ಥವಾಯಿತು.

ಅಷ್ಟುಹೊತ್ತಿಗೆ ಹೋಟಲ್ ಮ್ಯಾನೇಜರ್ ಬಂದು ಆ ಮಾಣಿಗಳಿಗೆ ಏನನ್ನೋ ಹೇಳಿದ. ಜರ್ಮನ್ ಭಾಷೆಯಲ್ಲಿ ಘರ್‌ಘರ್ ಅಂತ ಹೇಳಿದ "ಭಾರತದಿಂದ ಬಂದು ದುಡ್ಡು ಚೆಲ್ಲುವ ಮಹಾರಾಜರಿವರಲ್ಲ ; ಅಲ್ಲಿಂದ ಬಂದಿರುವ ಪಾಪರ್ ಅಸಾಮಿಗಳು. ಇವರು ಹೋಗುವಾಗ ಚಮಚ ತಟ್ಟೆ ಸರಿಯಾಗಿದೆಯೇ ಅಂತ ನೋಡಿಕೋ" ಅಂತ ಹುಷಾರು ಕೊಟ್ಟನೋ ಅಥವಾ ಇನ್ನೇನಾದರೂ ಹೇಳಿದನೋ ತಿಳಿಯಲಿಲ್ಲ. ಹೇಗೇ ಆಗಲಿ ಮಾಣಿಗಳಿಬ್ಬರೂ ನಮ್ಮ ಉತ್ತರಕ್ಕೆ ಕಾಯದೇ ಹೋದರು. ಹೋಗಿ ನಾಲ್ಕು ಬಟ್ಟಲು ಕರಿ ಕಾಫಿ ತಂದು ನಮ್ಮೆದುರಿಗೆ ಇಟ್ಟರು. ನೋಡುಕ್ಕೆ ನಮ್ಮ ಬಣ್ಣದಂತೆ ಕಾಫಿ ಇದ್ದರೂ, ರುಚಿಯಾಗೇನೋ ಇತ್ತು. ಕ್ರೀಂ ಹಾಕಿದ್ದರಂತೆ, ಯೂರೋಪ್ ದೇಶದ ಬಿಳಿಕೆಚ್ಚಲುಗಳ ಹಾಲು ಕೂಡ ಬೇರೆ ರುಚಿಯನ್ನು ಹೊಂದಿರುತ್ತವೆಯೇನೋ ?

ಅಲ್ಲಿಗೆ ಬಂದಿದ್ದ ಇತರ ಅತಿಥಿಗಳು ದೊಡ್ಡ ಅಂಗಳದ ನಾಟ್ಯ ಮಂಟಪದಲ್ಲಿ ನೃತ್ಯ ಮಾಡಲಾರಂಭಿಸಿದರು. ಪ್ರದರ್ಶನದ ನೃತ್ಯ ಅಲ್ಲ, ಸ್ವಸುಖದ ನೃತ್ಯ, ಜತೆ ಜತೆ ನೃತ್ಯ ಮಾಡುವುದು. ಹುಡುಗನಾಗಿದ್ದಾಗ ನಮ್ಮ ರಂಗಜ್ಜಿ ಹೇಳುತ್ತಿದ್ದಳು. ಮಾಡಿದವರ ಪಾಪ

ನೋಡಿದವರ ಕಣ್ಣು ಕುಕ್ಕುತ್ತೆ ಅಂತ. ಇದರ ಜ್ಞಾಪಕ ಬರುತ್ತಿದ್ದ ಹಾಗೆ ಮುಖ ಈ ಕಡೆಗೆ ತಿರುಗಿಸಿದೆ.

ಅಷ್ಟು ಹೊತ್ತಿಗೆ ನಮ್ಮ ಮಂದೆಯ ಕುರುಬ ಎದ್ದುನಿಂತ. ನಾವೂ ಹೊರಟೆವು.

ಎಲ್ಲರೂ ಹಿಂತಿರುಗಿ ಬಸ್ಸು ತುಂಬಿಕೊಂಡೆವು. ಹೋಟಲಿಗೆ ಹಿಂತಿರುಗಿದಾಗ ನಿಶಿರಾತ್ರಿ ಒಂದು ಗಂಟೆಯಾಗಿತ್ತು. ಜೇಬು ಖಾಲಿಯಾಗಿತ್ತು. ಕಳ್ಳಕಾಕರ ಭಯವಿಲ್ಲದೆ ಮಲಗಿದೆ. ನಿದ್ರೆ ಬಂತು.

ಬೆಳಿಗ್ಗೆ ಎದ್ದಾಗ, ಪಕ್ಕದ ಗೋಡೆಯ ಮೇಲಿದ್ದ ಚಿತ್ರದ ಹೆಣ್ಣು ಕೊಳದಲ್ಲಿ ಈಜುತ್ತಲೇ ಇದ್ದಳು. ಎಷ್ಟು ಚಳಿಯೋ ಪಾಪ ಎನ್ನಿಸಿತು.

# "ಸ್ವಿಟ್ಸರ್ ಲ್ಯಾಂಡ್"

ವಿಯನ್ನಾದಿಂದ ಸ್ವಿಟ್ಸರ್‌ಲ್ಯಾಂಡಿಗೆ ಹೋಗುವುದಕ್ಕೆ ನನಗೆ ಬಲು ಸಡಗರ. ಏಕೆಂದರೆ ನಮ್ಮ ಬೆಂಗಳೂರಿನ ಚಿರಂಜೀವಿಯೊಬ್ಬ ಅಲ್ಲಿ ಕಲಿಯಲು ಹೋಗಿದ್ದ. ಜೂರಿಕ್‌ಇಗೆ ಹತ್ತಿರವಿರುವ ಕಾರ್ಖಾನೆಯಲ್ಲಿ ಆತ ಕೆಲಸ ಮಾಡುತ್ತಿದ್ದ. ಜೂರಿಕ್‌ಇಗೆ ಇಂತಹ ದಿವಸ ನಮ್ಮ ಹಿಂಡು ಬರುತ್ತದೆ ಅಂತ ಅವನಿಗೆ ತಿಳಿಸಿಯೂ ಆಗಿತ್ತು. ಅಂದಮೇಲೆ ಊರು ತಿಳಿದ ನಮ್ಮ ಹುಡುಗ ಒಬ್ಬ ಜತೆಗಿರುತ್ತಾನೆ. ಅವನ ಜತೆಯಲ್ಲಿ ಅಡ್ಡಾಡಬಹುದು ಮುಂದೆ ಹಿಂದೆ ಸುತ್ತಬೇಕಾಗಿಲ್ಲ ಅಂತ ಒಂದು ರೀತಿಯ ಸಂಭ್ರಮ.

ಸಾಯಂಕಾಲದಿಂದ ಗಡಿಯಾರವನ್ನು ನೋಡುತ್ತಲೇ ಇದ್ದೆ. ಆರು ಗಂಟೆ ಆದರೆ ವಿಯನ್ನಾದಿಂದ ಹೊರಟು, ಒಂದು, ಒಂದೂವರೆ ಗಂಟೆಯಲ್ಲಿ ಜೂರಿಕ್ ಅನ್ನು ತಲುಪ ಬಹುದು. ನಮ್ಮ ಖಾಸಾ ಗರಡಿಯ ಹುಡುಗ ಅಲ್ಲಿ ಸಿಕ್ಕಿದಾಗ ಮುಂದಿನ ಕಾರ್ಯಕ್ರಮವನ್ನು ಭದ್ರ ಮಾಡಬಹುದು, ಎಂದೆಲ್ಲಾ ಯೋಚನೆ ಹಾಕುತ್ತಿದ್ದೆ. ನಿಯಮಿತ ವೇಳೆ ಸಂಜೆ ಆರಕ್ಕೆ ವಿಯನ್ನಾದಿಂದ ವಿಮಾನ ಹೊರಟಿತು. ಏಳೂವರೆ ರಾತ್ರಿಗೆ ಜ್ಯೂರಿಕನ್ನು ತಲುಪಿತು. ಜ್ಯೂರಿಕ್ ಊರ ಮಧ್ಯೆ ಇದ್ದ ಹೋಟಲಿಗೆ ಹೋಗುವಾಗ ರಾತ್ರಿ ಎಂಟೂ ಕಾಲು ತೋರಿಸಿತು ನನ್ನ ಗಡಿಯಾರ. ನನ್ನ ಗಡಿಯಾರ ಅಂದರೆ ನಾನು ಬೆಂಗಳೂರಲ್ಲಿ ಕೊಂಡುಕೊಂಡ ಸ್ವಿಟ್ಸರ್‌ಲ್ಯಾಂಡಿನಲ್ಲಿ ತಯಾರಾದ ಗಡಿಯಾರ.

ಹೋಟಲ್ ಸ್ಟಾಲರ್ ಎಂಬ ಮಧ್ಯಮ ವರ್ಗದ ಹೋಟಲು. ಬಾಗಿಲಲ್ಲೇ ನಮ್ಮ ಚಿರಂಜೀವಿ ಕಾದಿದ್ದ. ಆದರದಿಂದ ಬರಮಾಡಿಕೊಂಡ. ಮಹಡಿಯ ಕೊಠಡಿಯಲ್ಲಿ ನನ್ನ ಸಾಮಾನನ್ನಿಳಿಸಿ, ಕಾಡ ಹರಟೆ ಹೊಡೆಯಲು ರಸ್ತೆ ಅಂಚಿನ ಪಾನ ಮಂದಿರದಲ್ಲಿ ಇಬ್ಬರೂ ಕುಳಿತೆವು. ಕನ್ನಡದಲ್ಲಿ ಕಾಡ ಹರಟೆ ಹೊಡೆಯುವುದಕ್ಕೆ ಇತಿಮಿತಿ ಉಂಟೇ ? ಅದರ ಚಂದವೇ ಚಂದ, ಅದರ ಸೊಬಗೇ ಸೊಬಗು. ಇನ್ನು ಯಾವ ಭಾಷೆಯಲ್ಲೂ ಇಷ್ಟು ಸರಸವಾಗಿ, ಗುರಿಗತ್ತು ಏನೂ ಇಲ್ಲದೆ, ಕೆಲಸಕ್ಕೆ ಬಾರದ ಕಾಡ ಹರಟೆ ಸಾಧ್ಯವಿಲ್ಲ ಎಂದೇ ನನ್ನ

ಖಚಿತ ಅಭಿಪ್ರಾಯ. ಆದುದರಿಂದಲೇ ಇರಬೇಕು, ನಮ್ಮ ಕನ್ನಡನಾಡ ವೀರರು, ಕೊಚ್ಚಿಕೊಳ್ಳುವುದರಲ್ಲಿ ಅಪ್ರತಿಮರು. ಕಾರ್ಯರಂಗಕ್ಕೆ ಇಳಿದು ದುಡಿಯುವುದು ಮಾನಕ್ಕೆ ಕಡಿಮೆ, ಅವರಿಗೆ. ಮಾತು ಬಲ್ಲವರು ಮಾಡಲೂಬೇಕೇ ಅಂತ ಅವರ ಗಾದೆ ಕೂಡ.

ಕನ್ನಡಿಗರು ನಾವಿಬ್ಬರೂ ಮಾತಿಗೆ ಕುಳಿತಾಗ ನನ್ನ ಗಡಿಯಾರ ಎಂಟೂವರೆ ತೋರಿಸುತ್ತಿತ್ತು. ಸುಮಾರು ಕಾಲ ಮಾತಾಡಿರಬೇಕು. ನನ್ನ ಗಡಿಯಾರ ಎಂಟೂವರೆಯನ್ನೇ ತೋರಿಸುತ್ತಿತ್ತು. ನಮ್ಮ ಚಿರಂಜೀವಿಯೂ ತನ್ನ ಗಡಿಯಾರವನ್ನು ಆಗಿಂದಾಗ್ಗೆ ನೋಡಿಕೊಳ್ಳುತ್ತಿದ್ದ. ಕಡೆಗೆ ಒಮ್ಮೆ "ಸಾರ್ ! ಹೊತ್ತಾಯಿತು. ಇನ್ನು ಹದಿನೈದು ನಿಮಿಷಗಳಲ್ಲಿ ರೈಲ್ ನಿಲ್ದಾಣವನ್ನು ಸೇರಬೇಕು. ಅದೇ ಕಡೆಯ ರೈಲು, ನಮ್ಮ ಕಾರ್ಖಾನೆಯ ಊರಿಗೆ." ಎಂದು ವಿನಯದಿಂದ ಹೇಳಿದ.

ಗಡಿಯಾರ ನೋಡಿದೆ. ಎಂಟೂವರೆ ! ಎಷ್ಟು ಹೊತ್ತಿಗೆ ರೈಲು ? ಎಂದೆ. ಹನ್ನೊಂದಕ್ಕೆ ಅಂದ. ಮತ್ತೆ ಈಗಿನ್ನೂ ಎಂಟೂವರೆಯಲ್ಲಾ ಎಂದೆ. ಅವನ ಕೈ ಗಡಿಯಾರ ತೋರಿಸಿದ. ಹತ್ತೂ ಮೂಕ್ಕಾಲು ಅದರಲ್ಲಿ.

ಹುಟ್ಟಿದ ಊರಿಗೆ ಬಂದ ಸಂತೋಷವೋ, ತೌರೂರನ್ನು ಕಂಡ ಹಿಗ್ಗೋ ಏನೋ ನನ್ನ ಗಡಿಯಾರ, ನಡೆಯಲೇ ಒಲ್ಲದು. ಅಮ್ಮನ ತೊಡೆ ಮೇಲೆ ತಲೆ ಇಟ್ಟು ತೆಪ್ಪಗೆ ಬಿದ್ದುಕೊಂಡ ಬಸುರಿ ಮಗಳಂತೆ, ನನ್ನ ಗಡಿಯಾರವೂ ಸುಖ ನಿದ್ರೆ ಹೊಡೆಯುತ್ತಿತ್ತು.

ಚಿರಂಜೀವಿಯನ್ನು ಬೀಳ್ಕೊಟ್ಟು, ನನ್ನ ಗಡಿಯಾರದ ಕಿವಿ ಹಿಂಡಿ ಎಚ್ಚಿಸಿ, ನಂತರ ನನ್ನ ಕೊಠಡಿಗೆ ಹೋಗಿ ಮಲಗಿದೆ.

ಮಾರನೆ ದಿನ ಎದ್ದು "ಕರಾಗ್ರೆ ವಸತೆ ಲಕ್ಷ್ಮಿ" ಅಂತ ಕಣ್ಣು ಹೊಸೆದುಕೊಂಡು, ಕೈಗಡಿಯಾರ ನೋಡಿದೆ. ಆರು ಗಂಟೆ ತೋರಿಸುತ್ತಿತ್ತು. ನಡೆಯುತ್ತಿತ್ತು.

* * * *

ಪ್ರಾತಃಕಾಲ ಎಂಟು ಗಂಟೆಗೆ ಸುಖಕರವಾದ ಬಸ್ಸುಗಳಲ್ಲಿ ಬಾಸಲ್‌ಇಗೆ ಪ್ರಯಾಣ ಮಾಡಿದೆವು. ಬಸ್ ಪ್ರಯಾಣ ಅಂದರೆ ನಮ್ಮೂರಿನಲ್ಲಿ ಮಾಸಿದ ಪಂಚೆ ಷರಟುಗಳನ್ನು ತೊಟ್ಟು ಹೋಗುತ್ತೇವೆ. ಏಕೆಂದರೆ ಅರ್ಧ ತಾಸು ಬಸ್ಸಿನಲ್ಲಿ ಪ್ರಯಾಣ ಮಾಡಿದರೆ ರಸ್ತೆಯ ಧೂಳೆಲ್ಲ ನಮ್ಮ ಮೈ ಮೇಲೆ ಕೂತು, ಮೂಗು ಬಾಯಿಗಳಿಗೆ ಮಣ್ಣು ಬಿದ್ದು ಹೋಗುತ್ತವೆ. ಈ ಅನುಭವ ಇದ್ದ ನನಗೆ, ಹೊಸಾ ಸೂಟು ಹಾಕಿಕೊಂಡಿದ್ದೇನಲ್ಲ, ಮುಂದೇನು ಗತಿಯಪ್ಪ ? ಇರೋದೊಂದು ಸೂಟು, ಅದೂ ಕೊಳೆಯಾದರೆ ಹೇಗಪ್ಪ ? ಎಂದು ಶಂಕೆ ಇತ್ತು. ಆದರೆ ಪ್ರಯಾಣ ಹೊರಟ ಸ್ವಲ್ಪ ಹೊತ್ತಿನಲ್ಲೇ ಧೈರ್ಯ ಬಂತು. ಊರಿಂದ ಊರಿಗೆ ಹೋಗುವ ಆ ರಸ್ತೆಗಳಲ್ಲಿ ಸ್ವಲ್ಪವಾದರೂ ಧೂಳು ಇರಬೇಕಲ್ಲ ! ರಸ್ತೆಯೆಲ್ಲಾ ಡಾಮರು. ಅಕ್ಕಪಕ್ಕದ

ಜಮೀನುಗಳಲ್ಲೆಲ್ಲಾ ಹಚ್ಚ ಹಸುರಿನ ಬೆಳೆ. ಧೂಳೇ ಇಲ್ಲ. ಎಷ್ಟೇ ಗಾಳಿ ಬೀಸಿದರೂ ಧೂಳು ಏಳಲು ಅವಕಾಶವೇ ಇಲ್ಲ. ರಸ್ತೆಯಲ್ಲಿ ಬಸ್ ಪ್ರಯಾಣವು ಬಹಳ ಸುಖವಾಗಿತ್ತು.

ಅಲ್ಲಲ್ಲಿ ತಿಳಿ ನೀಲಿಯ ಸರೋವರಗಳು. ಅವುಗಳ ದಡದಲ್ಲೇ ರಸ್ತೆಯು ಹಾದು ಹೋಗುತ್ತಿತ್ತು. ಅಲ್ಲಲ್ಲಿ ಚೊಕ್ಕ ಕಾಣುವ ಮನೆಗಳ ಹಳ್ಳಿಗಳು. ಪ್ರಯಾಣ ಶುರುವಾದ ಎರಡು ತಾಸು ಹೊತ್ತಿನಲ್ಲಿ ಮೂರು ಮದುವೆ ದಿಬ್ಬಣಗಳನ್ನು ಹಾದಿಯಲ್ಲಿ ಕಂಡೆವು. ಬಸ್ಸಿನಿಂದಲೇ ಕೂಗುತ್ತ ದಂಪತಿಗಳಿಗೆ ಶುಭಾಶಯ ಕೋರಿದೆವು. ಮದುಮಕ್ಕಳು ನಮ್ಮ ಬಸ್ಸನ್ನು ಕಂಡು ಕೆಂನಗೆಯನ್ನು ಮುಗುಳ್ನಗುತ್ತಾ ಪ್ರದರ್ಶಿಸಿದರು. ಮದುವೆ ಮೆರವಣಿಗೆ ಚರ್ಚಿನಿಂದ ಹಿಂತಿರುಗುವಾಗ ಹಾದಿಯಲ್ಲಿ ಅಪರಿಚಿತರು ಸಿಕ್ಕಿ ಶುಭಾಶಯ ಕೋರಿದರೆ ಒಳ್ಳೆ ಶಕುನ ಎಂದು ಅವರುಗಳು ನಂಬಿದ್ದರೆ ಚೆನ್ನ ಎನಿಸಿತು. ಹಳ್ಳಿಯ ರಸ್ತೆಯ ಆ ಮದು ಮೆರವಣಿಗೆ ನೋಡಲು ಚಿತ್ರದಂತೆಯೇ ಇತ್ತು. ಸ್ವಿಟ್ಜರ್‌ಲೆಂಡಿನ ಪ್ರಕೃತಿ ಚಿತ್ರಗಳ ಕ್ಯಾಲೆಂಡರುಗಳಲ್ಲಿ ಇರುವಲ್ಲವೇ! ಹಾಗೆಯೇ ಮನಮೋಹಕವಾದ ದೃಶ್ಯ.

ಮದು ಮೆರವಣಿಗೆ ನೋಡಿದ ನಮಗೂ ಅದು ಒಳ್ಳೆಯ ಶಕುನವೇ ! ಆಹ್ಲಾದಕರವಾದ ಪ್ರಯಾಣದ ನಂತರ, ಔಷಧ ತಯಾರಕ ಸಂಸ್ಥೆಗಳಲ್ಲಿ ಪ್ರಸಿದ್ಧವಾದ ''ಸೀಬಾ'' ಕಂಪೆನಿಗೆ ಭೇಟಿ ಇತ್ತೆವು.

ಅಲ್ಲಿನ ಅಧಿಕಾರಿಯೊಬ್ಬ ಸ್ವಾಗತಿಸಿ, ''ನಮ್ಮ ಕಾರ್ಖಾನೆಯ ಕೆಲಸಗಾರರ ಸಂಬಳ ಇಷ್ಟು. ಇಷ್ಟು ಜನ ಕೆಲಸಗಾರರಿದ್ದಾರೆ. ಅಂದಮೇಲೆ ಒಟ್ಟು ಖರ್ಚು ಇಷ್ಟು. ಅಷ್ಟು ಸಂಪಾದಿಸಬೇಕಾದರೆ ಇಷ್ಟು ವ್ಯಾಪಾರವನ್ನು ಇನ್ನಿಷ್ಟು ದೇಶಗಳಲ್ಲಿ ಮಾಡಬೇಕು. ಯಾವುದಾದರೂ ದೇಶದಲ್ಲಿ ಕ್ರಾಂತಿಯಾದರೆ, ನಮ್ಮ ವ್ಯಾಪಾರ ಕುಂಟುತ್ತದೆ. ಅಂದರೆ ನಮ್ಮ ಆರ್ಥಿಕ ಸ್ಥಿತಿ ಮುಗ್ಗರಿಸುತ್ತದೆ. ಅದಕ್ಕೇ ನಾವು ಕಾಯಾ ವಾಚಾ ಮನಸಾ 'ಸರ್ವೇ ಜನಾಃ ಸುಖಿನೋ ಭವಂತು' ; 'ಶಾಂತಿರಸ್ತು' ಎಂದು ಪ್ರಾರ್ಥಿಸುತ್ತೇವೆ'' ಎಂದು ಪ್ರಾರಂಭ ಭಾಷಣ ಮಾಡಿದ.

ಕಾರ್ಖಾನೆಯ ಎಲ್ಲ ವಿಭಾಗಗಳಿಗೂ ಕರೆದುಕೊಂಡು ಹೋಗಿ ಯಂತ್ರ ಚಮತ್ಕಾರಗಳನ್ನೆಲ್ಲ ತೋರಿಸಿದ. ಯಾವ ವಿಭಾಗದಲ್ಲಿ ಔಷಧ ಶೋಧನೆ ನಡೆಯುತ್ತದೋ ಅದೊಂದನ್ನು ಬಿಟ್ಟು ಮಿಕ್ಕೆಲ್ಲವನ್ನೂ ಹೆಮ್ಮೆಯಿಂದ ತೋರಿಸಿದ.

ಔಷಧ ಶೋಧನಾ ಗೃಹಗಳಿಗೆ ನಮ್ಮನ್ನು ಕರೆದೊಯ್ದಿದ್ದರೂ, ನಾವೇನೂ ಅವರ ಗುಟ್ಟುಗಳನ್ನು ಭೇದಿಸಿ ತಿಳಿದುಕೊಳ್ಳುವ ಹಂತದಲ್ಲಿರಲಿಲ್ಲ. ಆದರೂ ಅವರಿಗೆ ಈ ವಿಷಯ ಗೊತ್ತಿರಬೇಕಲ್ಲ! ಆದುದರಿಂದಲೇ ಆ ವಿಷಯದ ಪ್ರಸ್ತಾಪವನ್ನೇ ಅವ ಎತ್ತಲಿಲ್ಲ.

ಅಚ್ಚುಕಟ್ಟಾದ ಊಟ ಹಾಕಿದರು. ಸ್ವಸ್ತಿ ಪಾನ ಮಾಡುತ್ತ, ಉಭಯ ದೇಶಗಳ ಸಹಕಾರಕ್ಕೆ ಜಯ್ ಅಂದರು. ಅದರ ಅರ್ಥ ಇಷ್ಟೆ. ನಿಮ್ಮೂರಿನಲ್ಲಿ ಬೆಳೆಯುವ ಮೂಲಿಕೆ

ಗಳನ್ನು ನಮಗೆ ನಾವು ಕೇಳಿದ ದರದಲ್ಲಿ ಸರಬರಾಜು ಮಾಡಿ. ಅದರಿಂದ ಔಷಧಿಗಳನ್ನು ತಯಾರಿಸಿ, ನಾವು ಹೇಳಿದ ದರಗಳಲ್ಲಿ, ನಿಮಗೆ ಸರಬರಾಜು ಮಾಡುತ್ತೇವೆ, ಎಂದು.

ಉಂಡ ಮನೆಗೆ ಎರಡು ಬಗೆಯುವ ಜನರೇ ? ನಾವು.

ಭೋಜನಾನಂತರ ಜಗತ್ಪ್ರಸಿದ್ಧವಾದ ಸ್ಯಾಂಡೋಸ್ ಔಷಧ ಸಂಸ್ಥೆಗೆ ಭೇಟಿಯಿತ್ತೆವು. ಪ್ರಪಂಚದ ಮೂಲೆ ಮೂಲೆಗೂ ಔಷಧಿಗಳನ್ನು ಸರಬರಾಜಿಸುವ ಈ ಬೃಹತ್ ಕಾರ್ಖಾನೆಯಲ್ಲೂ, ಹತ್ತಾರು ಹೆಸರಾಂತ ವೈದ್ಯ ವಿಜ್ಞಾನಿಗಳು ಕೆಲಸ ಮಾಡುತ್ತಿದ್ದಾರೆ. ಮನಸ್ಸಿನ ಮೇಲೆ ಪರಿಣಾಮ ಮಾಡುವ ಔಷಧಿಗಳ ತಯಾರಿಕೆ ಮತ್ತು ಪ್ರಯೋಗವು ಈ ಸಂಸ್ಥೆಯ ಒಂದು ವಿಶೇಷ. ಲೈಸರ್ಜಿಕ್ ಆ್ಯಸಿಡ್ 25 – ಈ ಸಂಸ್ಥೆಯ ತಯಾರಿಕೆ. ಇಲ್ಲಿಯ ರಸಾಯನಿಕ ತಜ್ಞರೊಡನೆ ಆತ್ಮೀಯವಾಗಿ ಮಾತನಾಡುವ ಅವಕಾಶವೂ ದೊರೆಯಿತು. ಅವರಲ್ಲೊಬ್ಬನನ್ನು "ನಿಮ್ಮ ದೇಶದಲ್ಲಿ ಬೆಟ್ಟ ಗುಡ್ಡಗಳಿವೆ. ಅಲ್ಲಿಂದ ಹರಿದು ಬರುವ ನದಿಗಳು, ಸರೋವರಗಳೂ ಇವೆ. ಅಂದಮೇಲೆ ವಿದ್ಯುಚ್ಛಕ್ತಿ ತಯಾರಿಕೆಗೆ ಎಲ್ಲ ಅನುಕೂಲ ಉಂಟು. ವಿದ್ಯುತ್ ಕೈಗಾರಿಕೆಗಳು ಮುಂದುವರಿಯುವುದು ಸಹಜ. ಆದರೆ ಗಿಡ ಮೂಲಿಕೆಗಳು ಅಷ್ಟಾಗಿ ನಿಮ್ಮಲ್ಲಿಲ್ಲ. ಔಷಧಿ ತಯಾರಿಕೆಯಲ್ಲಿ ಹೇಗೆ ಮುಂದುವರಿದಿರಿ ?" ಎಂದು ಕೇಳಿದೆ. ಆತ ಉತ್ತರ ನೀಡಿದ "ನದಿಗಳಿಗೆ ಅಣೆಕಟ್ಟು ಹಾಕಿ ವಿದ್ಯುತ್ ತಯಾರಿಸುತ್ತಾರೆ. ಆಗ ಸರೋವರಗಳೂ ಆಗಲೇಬೇಕಲ್ಲ. ಹಾಗಾಗಿ ಪುಷ್ಕಳ ನೀರು ದೊರೆಯುತ್ತದೆ. ನಮ್ಮ ವಿಶ್ವವಿದ್ಯಾನಿಲಯಗಳಲ್ಲಿ ಹಲವರು ಪ್ರಚಂಡ ರಾಸಾಯನಿಕ ಪಂಡಿತರಿದ್ದಾರೆ. ಅವರುಗಳು ದೇಶ ದೇಶಗಳಿಂದ ಮೂಲಿಕೆಗಳನ್ನು ತರಿಸಿ ಪ್ರಯೋಗ ನಡೆಸುತ್ತಿದ್ದರು. ಲಾಭಕರ ಎಂದು ಅನ್ನಿಸಿದ ಕೆಲವು ಪ್ರಯೋಗಗಳಿಗೆ ಔಷಧಿ ಸಂಸ್ಥೆಯವರು ಹೇರಳ ಹಣ ಹಾಕಿದರು. ಮೂರು ನಾಲ್ಕು ವರ್ಷ ಕೋಟ್ಯಾಂತರ ಖರ್ಚು ಮಾಡಿ ಪ್ರಯೋಗಗಳನ್ನು ನಡೆಸಿದಮೇಲೆ, ದೊರೆತ ಫಲಿತಾಂಶಗಳು ಕೆಲವು. ಆದರೆ ಈ ವಿಸ್ಮಯಕಾರಿ ಫಲಿತಾಂಶಗಳಿಂದ ಕೇವಲ ಆರೇಳು ತಿಂಗಳುಗಳಲ್ಲಿ ಖರ್ಚು ಮಾಡಿದ ಹಣವೆಲ್ಲಾ ಕೂಡಿಕೊಂಡು ಬಂತು,

"ನಮ್ಮೂರಿನ ಬ್ಯಾಂಕುಗಳಲ್ಲಿ ಪ್ರಪಂಚದ ಎಲ್ಲೆಡೆ ಇರುವ ಸಿರಿವಂತರು, ಹಣವನ್ನು ಇಟ್ಟಿದ್ದಾರೆ. ಗೋಪ್ಯವಾಗಿಟ್ಟಿದ್ದಾರೆ. ಈ ಹಣ ಮುಕ್ಕಾಲು ಪಾಲು ಕಷ್ಟ ಕಾಲಕ್ಕಿರಲಿ ಎಂದೇ ಆ ಸಿರಿವಂತರ ಆಸೆ. ಹಾಗಾಗಿ ಹಾಕಿದ ಹಣವನ್ನು ಬೇಗ ಬೇಗ ಚಲಾಯಿಸುವುದಿಲ್ಲ. ಈ ಕಾರಣದಿಂದ ಬ್ಯಾಂಕಿನವರ ಹತ್ತಿರ ಹೇರಳ ಹಣ ಇರುತ್ತೆ. ಅವರದನ್ನು ಸಂಸ್ಥೆಗಳಿಗೆ ಸುಲಭ ದರದ ಬಡ್ಡಿ ಹಾಕಿ ಕೊಡುತ್ತಾರೆ. ಅಂದರೆ ನಮ್ಮ ಸಂಸ್ಥೆಗಳಿಗೆ ವಿಶ್ವವಿದ್ಯಾನಿಲಯದ ನಿಕಟ ಸಂಪರ್ಕವಿದೆ. ಹಣ ದೊರಕುತ್ತದೆ. ನೀರು, ವಿದ್ಯುಚ್ಛಕ್ತಿ ಹೇರಳವಾಗಿ ದೊರೆಯುತ್ತದೆ. ಗಿಡಮೂಲಿಕೆಗಳನ್ನು ಪ್ರಪಂಚದ ಎಲ್ಲ ಕಡೆಗಳಿಂದಲೂ ತರಿಸಿ ಪ್ರಯೋಗಗಳನ್ನು ನಡೆಸುತ್ತೇವೆ. ನಿಮ್ಮ ದೇಶದ "ಸರ್ಪಗಂಧಿ"ಯನ್ನು ಹಡಗು ತುಂಬ ತರಿಸಿಕೊಂಡವರು

ನಾವು. ಅದರಿಂದ ತಯಾರಿಸಿದ Reserpine ಔಷಧಿಯಿಂದ ಪ್ರಪಂಚದ ಮಾರುಕಟ್ಟೆಯಲ್ಲೇ ನಮ್ಮೂರಿನ CIBA ಕಂಪೆನಿಯವರು ಕೋಟ್ಯಾಂತರ ಲಾಭ ಪಡೆದರು.

ಅಲ್ಲದೆ ನಮ್ಮ ಸರ್ಕಾರ, ತೆರಿಗೆ ವಸೂಲಿ, ಮತ್ತು ಕಾರ್ಮಿಕರ ಹಿತ ರಕ್ಷಣೆ, ಇವೆರಡು ಹೊರತು, ಬೇರೆ ಯಾವ ವಿಧದಲ್ಲಿಯೂ ನಮ್ಮನ್ನು ಕಾಡುವುದಿಲ್ಲ. ಯಾವ ದೇಶದ ಎಷ್ಟೇ ಹಣವನ್ನಾದರೂ ಇಲ್ಲಿಗೆ ತರಬಹುದು. ಹಾಗೆಯೇ ಕಳಿಸಲೂಬಹುದು. ಸರಕಾರದ ಅಡ್ಡಿ ಆತಂಕಗಳಿಲ್ಲ'' ಎಂದು ವಿಶದವಾಗಿ ತಿಳಿಸಿದ.

ಧೂಳಿಲ್ಲದ ದೇಶ, ನಿರ್ಮಲ ಮನಸ್ಸಿನ ವೈಜ್ಞಾನಿಕರು, ಧೂಳನ್ನು ಹೊಡೆದು ಎಬ್ಬಿಸದೆ ಇರುವ ಸ್ವಚ್ಛ ಸರಕಾರ - ಕಂಡವರ ಹಣ - ಕಾರ್ಮಿಕರ ಶ್ರದ್ಧೆ - ಇನ್ನೇನು ಪ್ರಗತಿ ಹೊಂದದೆ ? ಇಡೀ ಪ್ರಪಂಚವನ್ನೇ ತಮ್ಮ ಹಿತ್ತಿಲನ್ನಾಗಿ ಮಾಡಿಕೊಂಡು ದೊಡ್ಡ ಮನೆ ಕಟ್ಟಿಕೊಂಡಿದ್ದಾರೆ. ದಿವನಾಗಿ ಕಟ್ಟಿಕೊಂಡಿದ್ದಾರೆ.

ಆ ರಾತ್ರಿ ನಾಲ್ಕು ಪ್ರಸಿದ್ಧ ಔಷಧ ಸಂಸ್ಥೆಗಳು ಕೂಡಿ ನಮ್ಮ ಗೌರವಾರ್ಥ ಭೋಜನ ಕೂಟವನ್ನೇರ್ಪಡಿಸಿದ್ದರು. ಭೋಜನಾ ನಂತರ ಸ್ವಿಟ್ಜರ್‌ಲ್ಯಾಂಡಿನ ಗುಡ್ಡಗಾಡು ಜನರ ಜಾನಪದ ಸಂಗೀತವನ್ನೇರ್ಪಡಿಸಿದ್ದರು. ಮೂರು ಜನ ತಮಟೆ ಬಾರಿಸುವವರು ಎರಡು ನಿಮಿಷ ಬಜಾಯಿಸಿದರು. ಹಠಾತ್ತನೆ ಗುಡುಗಿದಂತೆ ಎಲ್ಲರೂ ಚಕಿತರಾದೆವು. ಗುಡುಗಿದ ತರುವಾಯ ಮಳೆ ಬಂತೋ ಏನೋ, ಹಕ್ಕಿಗಳು ಕೊರಲಲ್ಲಿ ದನಿದೋರಿದಂತೆ ಆರು ಜನ ಕೊಳಲು ವಾದಕರು, ಬಲು ಇಂಪಾಗಿ, ಬಲು ಹಿತವಾಗಿ, ಬಲು ಮೆದುವಾಗಿ ಕೊಳಲ ನುಡಿಸಿದರು. ಗುಡುಗಿನ ತಮಟೆಗೂ, ಕೊಳಲಿನ ಇಂಚರಕ್ಕೂ ತಾಳ ಹಾಕಿ ಬಾರಿಸಿದ ಜಾನಪದ ಗಾಯನ ಮರೆಯಲಾರದ ಆನಂದವನ್ನು ಇತ್ತಿತು. ಜಾನಪದ ಗಾಯನದ ಗುಟ್ಟೇ ಅದು. ಒಂದೈದು ನಿಮಿಷ ಬಾರಿಸಿದಾಗ ನಮ್ಮ ಕರುಳನ್ನೇ ಕಿತ್ತಂತೆ ಆಗುತ್ತೆ. ಅಲ್ಲಿಗೆ ನಿಂತರೆ ಮರೆಯಲಾಗದ ಅನುಭವ. ಮುಂದುವರೆದರೆ ಬೇಸರವನ್ನು ತಂದೇ ತರುತ್ತೆ. ಆ ಗಾಯಕರಿಗೆ ಈ ಮರ್ಮ ಗೊತ್ತಿತ್ತು. ಅವರ ಗಾಯನದ ಇಂಪು ನಮ್ಮಲ್ಲಿ ಹಸಿರಾಗಿರುವಾಗಲೇ ಅವರು ಗಾಯನ ಮುಗಿಸಿದರು.

ಭೋಜನ ಮುಗಿಯಿ. . ಜಿನ್ನ ದಾತಾ ಸುಖೀ ಭವ ಎಂದು ಹಾರೈಸಿ, ಇಳಿದುಕೊಂಡಿದ್ದ ಹೋಟಲಿಗೆ ಹಿಂತಿರುಗಿ ಬಿದ್ದುಕೊಂಡೆವು.

ಮಾರನೆಯ ಬೆಳಿಗ್ಗೆ ಇನ್ನೊಂದು ಪ್ರಸಿದ್ಧ ಸಂಸ್ಥೆಯಾದ ಹಾಫ್‌ಮನ್ ಲರಾಷ್ ಸಂಸ್ಥೆಗೆ ಭೇಟಿ. ವೈಟಮಿನ್ನುಗಳಿಗೆ ಹೆಸರುವಾಸಿಯಾದ ಸಂಸ್ಥೆ ಇದು. ಮಿಕ್ಕ ಸಂಸ್ಥೆಗಳನ್ನು ನೋಡಿದಾಗ ಅನಿಸಿದಂತೆ, ಈ ಸಂಸ್ಥೆಯ ಭವ್ಯ ಕಟ್ಟಡಗಳನ್ನೂ, ಉಪಕರಣಗಳನ್ನೂ, ಸಲಕರಣೆಗಳನ್ನೂ ಕಂಡಾಗ, ಭಾರತದಿಂದ ಈ ಶ್ರೀಮಂತಿಕೆಗೆ ಎಷ್ಟು ಕಾಣಿಕೆ ಸಂದಿರಬಹುದು ? ಎನ್ನಿಸಿತು.

ಆ ಮಧ್ಯಾಹ್ನ ಮಂದೆಯಿಂದ ತಪ್ಪಿಸಿಕೊಂಡು ಬಾಸಲ್ ರೈಲ್ ನಿಲ್ದಾಣಕ್ಕೆ ಒಂಟಿಯಾಗಿ ಹೋದೆ. ರೈಲಿನಲ್ಲಿ ಜೂರಿಕ್‌ಇಗೆ ಪ್ರಯಾಣ ಮಾಡಿ, ಅಲ್ಲಿ ನಮ್ಮ ಚಿರಂಜೀವಿಯನ್ನು ಭೇಟಿಯಾಗಿ, ಊರಿನಲ್ಲಿ ವ್ಯಾಪಾರಕ್ಕೆ ಹೋಗುವುದು ಎಂದು ಆಣೆ ಮಾಡಿಕೊಂಡಿದ್ದೆ. ಆ ಕಾರಣದಿಂದ, ಗಂಟು ಮೂಟೆಯನ್ನು ಹೊತ್ತು ಬಾಸಲ್ ರೈಲ್ ನಿಲ್ದಾಣಕ್ಕೆ ಹೋದೆ. ಕಾಶಿ ಯಾತ್ರೆಗೆ ಹೊರಟ ವರಪೂಜೆ ಗಂಡಿನಂತೆ, ತೋಳ ಮೇಲೆ ಚೀಲ ಹಾಕ್ಕೊಂಡು ಹೋದೆ.

ರೈಲ್ ನಿಲ್ದಾಣದಲ್ಲಿ ಟಿಕೆಟ್ ಮಾರುವ ಸ್ಥಳದಲ್ಲಿ ಇಂತಿಂತಹ ಊರಿಗೆ ಇಲ್ಲಿ ಟಿಕೆಟ್ ಅಂತ ಬೋರ್ಡು ಲಗತ್ತಿಸಿತ್ತು. ಹಾಗಾಗಿ, ಜ್ಯೂರಿಕ್ ಅಂತ ಬರೆದಿದ್ದ ಕಂಡಿಯ ಬಳಿ ಹೋಗಿ ಟಿಕೆಟ್ ತೆಗೆದುಕೊಂಡೆ. ಸರಿಯಾಗಿ ಚಿಲ್ಲರೆ ಕೊಟ್ಟ ಅಂತ ನನ್ನ ಆಸೆ. ಟಿಕೆಟ್ ಕೌಂಟರಿನಿಂದ ನಮ್ಮ ರೈಲು ಹೊರಡುವ ಪ್ಲಾಟ್‌ಫಾರಂಇಗೆ ಹೋಗಲು, ಪ್ಲಾಟ್‌ಫಾರಂಇನ ಕೆಳಗೆ ಹಾದಿಗಳನ್ನು ಮಾಡಿದ್ದಾರೆ. ನಮ್ಮೂರಿನಲ್ಲಿ ಇರುವ ಹಾಗೆ ಮೆಟ್ಟಿಲುಗಳನ್ನು ಹತ್ತಿ ರೈಲುಗಳ ಮೇಲೆ ಇರುವ ಸೇತುವೆ ದಾಟಿ ಆ ಕಡೆ ಮೆಟ್ಟಿಲುಗಳನ್ನಿಳಿದು, ಆ ಪ್ಲಾಟ್‌ಫಾರಂ ಸೇರಬೇಕಾಗಿರಲಿಲ್ಲ. ಮುದುಕನಾದ ನನ್ನಂತಹವನಿಗೆ ಈ ಏರ್ಪಾಡು ಬಲು ಹಿತಕರವಾಗಿತ್ತು. ಜ್ಯೂರಿಕ್‌ಇಗೆ ಹೋಗಲು ಕಾದಿದ್ದ ಮೂರು ನಾಲ್ಕು ಜನ ಇಂಗ್ಲೀಷಿನವರನ್ನು ಬೇರೆ ಬೇರೆಯಾಗಿ ವಿಚಾರಿಸಿ, ಅಲ್ಲಿಂದ ಹೊರಡುವ ರೈಲು ಜ್ಯೂರಿಕ್‌ಇಗೆ ಹೋಗುತ್ತದೆ ಎಂದು ಧೈರ್ಯ ಮಾಡಿಕೊಂಡು, ಕಾದೆ. ರೈಲು ಬಂದು ನಿಂತಿತು. ಫಸ್ಟ್‌ಕ್ಲಾಸ್ ಅಂತ ಸಂಖ್ಯೆ ಹಾಕಿದ್ದ ಡಬ್ಬದಲ್ಲಿ ಕುಳಿತೆ. ರೈಲು ಹೊರಟಿತು. ಕಾಲ ಬಳಿ ಬಿಸಿ ಗಾಳಿ ಆಡಲಾರಂಭಿಸಿತು. ಹೊರಗೆ ಚಳಿಯಾಗಿತ್ತು.ಬಿಸಿ ಗಾಳಿ ಹಿತವಾಗಿತ್ತು. ಆಮೇಲೆ ತಿಳಿಯಿತು, ಆ ರೈಲು ಗಾಡಿಗಳಲ್ಲಿ ಬಿಸಿ ಗಾಳಿ ಬೀಸುವ ಏರ್ಪಾಡು ಇದೆ ಎಂದು.

ಸ್ವಲ್ಪ ದೂರ ಹೋದಮೇಲೆ ನಮ್ಮ ಡಬ್ಬಕ್ಕೆ ಕೈ ಗಾಡಿಯನ್ನು ನೂಕಿಕೊಂಡು ಒಬ್ಬ ಬಂದ. ನಮ್ಮ ಸ್ಟೇಷನ್ನುಗಳಲ್ಲಿ ಗಾಡಿಯ ಹೊರಗೆ ಸೌತೆಕಾಯಿ ಕಡಲೆಕಾಯಿ ಮಾರುಕ್ಕೆ ಬರುವಂತೆ, ಅಲ್ಲಿ ಗಾಡಿಯೊಳಗೇ ಪಾನೀಯಗಳನ್ನೂ ಚಾಕಲೇಟ್ ಬಿಸ್ಕತ್ ಸಿಗರೇಟುಗಳನ್ನೂ ಕೈ ಗಾಡಿಯಲ್ಲಿ ತಂದು ಮಾರುತ್ತಾರೆ. ರೈಲಿನ ಈ ತುದಿಯಿಂದ ಆ ತುದಿಯ ತನಕ, ಹತ್ತು ಹನ್ನೆರಡು ಗಾಡಿಗಳು ಇದ್ದರೂ, ಎಲ್ಲಾ ಗಾಡಿಗಳಿಗೂ ಹಾದಿಯ ಸಂಪರ್ಕವಿರುವುದರಿಂದ, ಕೈ ಗಾಡಿಯನ್ನು ತರಲು ಸುಲಭ, ಆದರೆ ನಾನೇನನ್ನೂ ಕೊಳ್ಳಲಿಲ್ಲ. ನಮ್ಮ ರೈಲ್ ನಿಲ್ದಾಣಗಳಲ್ಲಿ ಕಡಲೆ ಕಾಯನ್ನು ಮಾರುವವ ಮೋಸ ಮಾಡುಲ್ಲವೇ ? ಹಾಗೆ ಅವನೂ ಮಾಡಿದರೆ ? ಐರೋಪು ಎರಡು ಫ್ರಾಂಕ್ ಕಾಸು, ಅದನ್ನು ಕಳೆದುಕೊಳ್ಳಬಹುದೇ ?

ಬ್ಯಾಡನ್‌ನಲ್ಲಿ ಚಿರಂಜೀವಿ ಸಿಕ್ಕ, ಜ್ಯೂರಿಕ್‌ನಲ್ಲಿ ಇಬ್ಬರೂ ಇಳಿದು ಊರ ವ್ಯಾಪಾರಕ್ಕೆ ಹೊರಟೆವು. ಜತೆಯಲ್ಲಿ ಚಿರಂಜೀವಿ ಇದ್ದುದರಿಂದ, ನನಗೆ ರೆಕ್ಕೆ ಬಂದ ಹಾಗಾಗಿತ್ತು. ಊರಿನ ಪರಿಚಯ ಅವನಿಗಿದ್ದುದು ನನಗೂ ಇದ್ದಂತೆ ಅಲ್ಲವೇ ? ಅಲ್ಲದೆ ಅವನ ಜೇಬಿನಲ್ಲಿ ಆ ಊರಿನ ಕಾಸು ಇತ್ತು.

ಸರಿ ! ಸ್ವಿಟ್ಜರ್‌ಲ್ಯಾಂಡ್ ಅಂಗಡಿಗಳಲ್ಲಿ ಕೊಳ್ಳೋದು ಏನು ? ಕಡಲೆಕಾಯಿ ಪರಿಶೆಯಲ್ಲಿ ಕಡಲೆಕಾಯಿ ಬೆಲ್ಲ ಕೊಂಡಂತೆ, ಅಲ್ಲಿ ಬೇಕಾಗಲಿ ಬೇಡದಿರಲಿ ಗಡಿಯಾರ ಕೊಳ್ಳಲೇಬೇಕಲ್ಲ! ವಂಕನಿಗೊಂದು, ನಾಣೀಗೊಂದು, ಸೀನಿಗೊಂದು ಅಂತ ಸಾಲ ಮಾಡಿದ ದುಡ್ಡನ್ನೆಲ್ಲಾ ಹಾಕಿ ಗಡಿಯಾರಗಳನ್ನು ಕೊಂಡೆ. ನೋಡುಕ್ಕೆ ಖಾಯಿಷ್ ಆದ ಗಡಿಯಾರಗಳೇ ವಿನಹಾ ಬಾಳಿಕೆ ಬರುವಂತಹವಲ್ಲ. ಬಾಳಿಕೆ ಬರುತ್ತೆ ಎಂದು ಹೇಗೆ ಗೊತ್ತಾಗುತ್ತೆ ? ಯಾವ ಗಡಿಯಾರಕ್ಕೆ ಜಾಹೀರಾತು ಹೆಚ್ಚೋ, ಅದೇ ಚೆನ್ನ ಅಂತ ನಂಬಬೇಕು.

ವ್ಯಾಪಾರವನ್ನೆಲ್ಲಾ ಮುಗಿಸಿ ಹೋಟಲಿಗೆ ಹಿಂತಿರುಗಿದೆ. ನನ್ನ ಕೊಠಡಿಯ ನಂಬರು ಮರೆತುಹೋಗಿತ್ತು. ಹೋಟಲ್ ಯಜಮಾನನಿಗೆ ಇಂಗ್ಲೀಷ್ ಬರುಲ್ಲ. ನನಗೆ ಅವನ ಭಾಷೆ ತಿಳಿಯದು. ನನ್ನ ವಿಸಿಟಿಂಗ್ ಕಾರ್ಡ್ ನೋಡಿ ಅವ ಯಾವುದೋ ಕೊಠಡಿಯ ಬೀಗದ ಕೈ ಕೊಟ್ಟ, ಅಲ್ಲಿಗೆ ಹೆದರಿಕೊಂಡೇ ಹೋದೆ. ಸಧ್ಯ ! ಅದೇ ನನ್ನ ಕೊಠಡಿಯಾಗಿತ್ತು. ನನ್ನ ಸೂಟ್‌ಕೇಸ್ ಅಲ್ಲೇ ಇತ್ತು. ಸ್ನಾನ ಮಾಡಿ ಮೈ ಹಗೂರು ಮಾಡಿಕೊಂಡೆ. ಇದ್ದ ಬದ್ದ ಹಣ ಮುಗಿದು ಮನಸ್ಸು ಒಂದು ತರಹ ಹಗೂರಾಗಿತ್ತು.

ಆ ವೇಳೆಗೆ ನಮ್ಮ ಮಂದೆಯವರು ಬಸ್ಸುಗಳಲ್ಲಿ ಜ್ಯೂರಿಕ್‌ಇಗೆ ಬಂದರು. ರಾತ್ರಿ ಊಟವಾಯಿತು. ದಿಟವಾದ ಊಟ. ಯಾಕೆಂದರೆ ಸೊಗಸಾದ ಮೊಸರು ಕೊಟ್ಟರು. ಬ್ರೆಡ್ಡು, ಮೊಸರು, ಮನೆಯಿಂದ ಸ್ನೇಹಿತ ತಂದಿದ್ದ ಚಟ್ನಿಪುಡಿ, ಇನ್ನೇನು ಬೇಕು ?

ರಾತ್ರಿ ಮಲಗಿದಾಗ ಕೇವಲ ಒಂಭತ್ತು ಗಂಟೆ. ಕೊಠಡಿಯಲ್ಲಿದ್ದ ಟೆಲಿವಿಷನ್‌ಹಾಕಿ ನೋಡುತ್ತ ಕುಳಿತೆ. ಮಾತು ಅರ್ಥವಾಗದೆ ಇದ್ದರೇನು ? ಲಕ್ಷಣವಾಗಿ ತುಂಬಿಕೊಂಡ ತರುಣಿಯರು ನಾಚ್ ಮಾಡುತ್ತಿದ್ದರು. ಹೇಳಿದ ಹಾಡು ಅರ್ಥವಾಗದೆ ಇದ್ದರೂ, ಕಿವಿಗೆ ಹಿತವಾಗಿತ್ತು. ಹಾಗೂ ಅನರ್ಥವಾಗುವಂತಿರಲಿಲ್ಲ.

ಕೊಂಡ ಗಡಿಯಾರಗಳನ್ನು ಮೂರು ಮೂರು ಸರ್ತಿ ನೋಡಿ, ತಿರುಗಿ ಪೆಟ್ಟಿಗೆಯಲ್ಲಿ ಹಾಕಿ, ನಂತರ ಮಲಗಿದೆ.

ಕನಸು ಬಿತ್ತು. ಕೈಗೆ ಕಟ್ಟಿಕೊಂಡಿದ್ದ ಹೊಸ ಗಡಿಯಾರ ಸಡಿಲವಾಗಿ ಕೆಳಗೆ ಬಿತ್ತು. ಅಯ್ಯೋ ಹೋಯ್ತಲ್ಲಾ ಅಂತ ಎದ್ದೆ, ಬೆಳಗಾಗಿತ್ತು. ಕೈನಲ್ಲೇ ಇತ್ತು ಗಡಿಯಾರ ಕನಸು ಬಿದ್ದಿದೆ, ಅಷ್ಟೇ ಎಂದು ತಿಳಿದಾಗ ಸಮಾಧಾನವಾಯ್ತು.

ಬೇಗೆದ್ದು ಸಂಧ್ಯಾವಂದನೆ, ಆಹ್ನಿಕ ಮುಗಿಸಿ ಕೆಳಗಿಳಿದೆ.

# ಮೌಂಟ್ ಪಿಲೇಟಸ್

ಶನಿವಾರ ಬೆಳಿಗ್ಗೆ ಬೇಗ ಎದ್ದು ಮೌಂಟ್ ಪಿಲೇಟಸ್ ಎಂಬ ಹೆಸರಾಂತ ಬೆಟ್ಟವನ್ನು ನೋಡಲು ಹೊರಟೆವು. ಬೆಟ್ಟಗುಡ್ಡಗಳ ನಡುವೆ ಕಣಿವೆಗಳಲ್ಲಿ ಹಾದು ಹೋಗುವಾಗ ಸುತ್ತುಮುತ್ತಲಿನ ಹಸಿರುಪಟ್ಟಿಯನ್ನುಟ್ಟ ಹೊಲ ತೋಟಗಳು ಮುತ್ತೈದೆ ಕಳೆಯನ್ನು ಹೊಂದಿದ್ದುವು. ಎಲ್ಲವೂ ಫಲಭರಿತವಾಗಿದ್ದುವು. ಅಲ್ಲಿಸ್ ಕಣಿವೆ ದಾರಿಯಲ್ಲಿ ಬಸ್ ಹೋದಾಗ ನಮ್ಮ ಚಾರ್‌ಮುಡಿ ಘಾಟಿನ ಪ್ರವಾಸದ ನೆನಪಾಯಿತು. ಆದರೆ ನಮ್ಮ ಮಲೆನಾಡಿನ ಕಣಿವೆದಾರಿಗಳಂತೆ ಅಲ್ಲಿನವು ಭಯಾನಕ ಅಲ್ಲ, ಅಷ್ಟು ದಟ್ಟವೂ ಅಲ್ಲ. ಆದರೆ ಅಲ್ಲಿನ ವಾತಾವರಣ ತಂಪಾಗಿದ್ದುದರಿಂದ ಆ ಅನುಭವವೇ ಬೇರೆ ತರಹ. ನಮ್ಮ ಮಲೆನಾಡಿನ ಪ್ರಕೃತಿಯು ಕೆರಳಿ ಹೌಹಾರುವ ದುರ್ಗಿಯಂತೆ. ಆದರೆ ಅಲ್ಲಿನ ಮಲೆನಾಡ ಪ್ರಕೃತಿ ಮನೆ ಯಾಕೆ ತುಸು ಮುನಿಸಿಕೊಂಡಂತೆ. ಅದೂ ಒಂದು ಚೆಂದ, ನೋಡುವುದಕ್ಕೆ. ಕಣಿವೆದಾರಿಯನ್ನು ದಾಟಿ ಲೂಸರ್ನ್ ಎಂಬ ಊರನ್ನು ತಲುಪಿದೆವು. ಅಲ್ಲಿನ ಸರೋವರ ಬಲು ಅಂದ. ಊರೂ ಬಲು ಚೆನ್ನು. ಅಲ್ಲಿನ ಬೀದಿ ಪಾರ್ಕುಗಳಲ್ಲಿ ಕಕವಗಳ ಹಾಗೆ ಬಾಯಿ ಬಿಟ್ಟುಕೊಂಡು ನೋಡುತ್ತ ಸುಮಾರು ಒಂದು ತಾಸು ಓಡಾಡಿ ನೋಡಬೇಕಾದ ಎರಡು ಮೂರು ಸ್ಥಳಗಳನ್ನು ನೋಡಿದೆವು. ಪ್ರೇಕ್ಷಣೀಯವಾದ ಅಂತಹ ಸ್ಥಳಗಳಲ್ಲಿ ಒಂದು ''ದಿ ಲಯನ್ ಮಾನ್ಯುಮೆಂಟ್''ಸಿಂಹದ ಚಿತ್ರ ಕೆತ್ತಿರುವ ವೀರಗಲ್ಲು. ಸ್ವಿಟ್ಸರ್‌ಲ್ಯಾಂಡಿನ ಎಂದಿನ ಯಾವುದೋ ಯುದ್ಧದಲ್ಲಿ ಮಡಿದ ಸೈನಿಕರ ನೆನಪಿಗಾಗಿ ಅದನ್ನು ಸ್ಥಾಪಿಸಿದರಂತೆ.

ಸ್ವಿಟ್ಸರ್‌ಲ್ಯಾಂಡೇ ಪುಟಾಣಿದೇಶ: ಯೂರೋಪಿನ ಯಾವ ದೇಶವಾದರೂ ಅದನ್ನು ಕಬಳಿಸಬಹುದು. ಆ ದೇಶದಲ್ಲೂ ಫ್ರೆಂಚ್, ಜರ್ಮನ್ ಮತ್ತು ಸ್ವಿಸ್ ಭಾಷೆಗಳನ್ನಾಡುವ ಮೂರು ಹಿರಿಯ ಗುಂಪುಗಳು. ಪರಿಸ್ಥಿತಿ ಹೀಗೆ ಇದ್ದರೂ ಯಾವುದೋ ಅವ್ಯಕ್ತ ಕರಾರಿನ ಪ್ರಕಾರ ಯೂರೋಪಿನ ಯಾವ ಹಿರಿಯ ದೇಶವೂ ಸ್ವಿಟ್ಸರ್‌ಲ್ಯಾಂಡನ್ನು ಆಕ್ರಮಿಸಿಲ್ಲ. ಯೂರೋಪಿನ ಹಿರಿಯ ದೇಶದ ನಾಯಕರುಗಳು ತಮ್ಮ ಪತನವಾದಾಗ ನೆರವಿಗಾಗಿ

ಎಂದು ಸ್ವಿಟ್ಸರ್‌ಲ್ಯಾಂಡಿನ ಬ್ಯಾಂಕುಗಳಲ್ಲಿ ಗುಪ್ತವಾಗಿ ಹೇರಳ ಹಣ ಇಡುತ್ತಿದ್ದುದೇ ಸ್ವಿಟ್ಸರ್‌ಲ್ಯಾಂಡಿನ ರಕ್ಷಾ ಕವಚವೇನೋ ? ಯುದ್ಧವನ್ನು ಬಲು ದಿನದಿಂದ ಕಾಣದ ಅಂತಹ ದೇಶವಲ್ಲಿ ''ವೀರಗಲ್ಲ''ನ್ನು ತೋರಿಸಿದ್ದು ತುಸು ಸೋಜಿಗ ಎನಿಸಿತು. ಆ ವೀರಗಲ್ಲಿಗೆ ಅದೇನು ಮರ್ಯಾದೆ ? ಅದೇನು ಹೊಗಳಿಕೆ ? ಊರಿಗೆ ಬಂದ ದಾಸಯ್ಯನವರನ್ನೆಲ್ಲಾ ಅಲ್ಲಿಗೂ ಕರೆದುಕೊಂಡು ಹೋಗುತ್ತಾರೆ. ಪ್ರವಾಸಿಗರ ಸೌಕರ್ಯಕ್ಕೆಂದು ಅಲ್ಲಿ ಚಿಕ್ಕಪುಟ್ಟ ಅಂಗಡಿಗಳೂ ಇವೆ.

ಲೂಸರ್ನ್ ನೋಡಿದ ಮೇಲೆ ಆಲ್ಪನ್‌ಕ್ಸ್ಟಾಡ್ ಎಂಬ ನಿಲ್ದಾಣಕ್ಕೆ ಹೊರಟೆವು. ಆಲ್ಪನ್ ಕ್ಸ್ಟಾಡ್ ನಿಲ್ದಾಣವು ಮೌಂಟ್ ಪಿಲೇಟಸ್ಸಿನ ಕಿಬ್ಬಿಯಲ್ಲಿದೆ. ಬೆಟ್ಟವನ್ನು ಏರಿ ಹೋಗುವ ಫ್ಯೂನಿಕ್ಯುಲರ್ ರೈಲನ್ನು ಇಲ್ಲಿ ಏರಬೇಕು.

ನಂದಿ ಬೆಟ್ಟದ ಕಿಬ್ಬಿಯಲ್ಲಿ ನಿಂತು, ಮೇಲೇರುವ ಮೆಟ್ಟಿಲುಗಳನ್ನು ನೋಡಿದರೆ ''ಇಷ್ಟು ಕಡಿದಾದ ಮೆಟ್ಟುಗ್ಗಳನ್ನು ಹೇಗೆ ಹತ್ತುವುದಪ್ಪಾ!'' ಎನ್ನಿಸುವುದಿಲ್ಲವೇ ? ಅದೇ ರೀತಿ ಫ್ಯೂನಿಕ್ಯುಲರ್ ರೈಲಿನಲ್ಲಿ ಕುಳಿತಾಗ, ಕತ್ತೆತ್ತಿ ಮುಂದೆ ನೋಡಿದಾಗ ಸ್ವಲ್ಪ ಭಯವೇ ಆಯಿತು. ಮಸಲಾ ಅರ್ಧ ದಾರಿ ಹತ್ತಿದಾಗ, ವಿದ್ಯುಚ್ಛಕ್ತಿ ಥಂಡಾ ಆಗಿಬಿಟ್ಟರೆ ? ಗುಡು ಗುಡು ಅಂತ ರೈಲು ಹಿಂದಕ್ಕೆ ಹರಿದು ಉಲ್ಟಾಪಲ್ಟಿ ಹೊಡೆದು, ನಮ್ಮ ಹೆಣ ಯಾವುದೋ ದೇಶದಲ್ಲಿ ಸಂಸ್ಕಾರಗಳಿಲ್ಲದೆ ಹೂಳಲ್ಪಡುತ್ತಲ್ಲ! ಸರಿಯಾಗಿ ತಿಥಿ ಗಿಥಿ ಆಗದೆ ಅಂತರ್ಪಿಶಾಚಿಗಳಾಗಿ, ಆ ಛಳಿ ದೇಶದಲ್ಲಿ ಗಡ ಗಡ ನಡುಗುತ್ತ ವದ್ದ್ಯಾಡಬೇಕಲ್ಲ ! ವೈತರಣಿ ದಾಟಿಸಿ ನಮ್ಮನ್ನು ಸ್ವರ್ಗಕ್ಕೆ ಕಳಿಸಲು ಅಲ್ಲಿ ಯಾರು ಗೋದಾನ ಕೊಡಿಸುತ್ತಿದ್ದರು ? ಹಾಗೆ ಕೊಡುಕ್ಕೆ ಸಿದ್ಧವಾದರೂ ಇಸುಕೊಳ್ಳುವ ಬ್ರಾಹ್ಮಣನನ್ನು ಅಲ್ಲಿ ಎಲ್ಲಿ ತರಬೇಕು ? ಹೀಗೆ ಯೋಚನೆಗಳು ಭಯದ ಚಾಟಿಯಿಂದ ಹೊಡೆಸಿಕೊಂಡು ಕಂಡಾಪಟ್ಟೆ ಓಡುತ್ತಿತ್ತು.

ನಮ್ಮ ಜತೆ ಬಂದಿದ್ದ ಮಾರ್ಗ ಸಖನಿಗೆ ಅನಿಸಿರಬೇಕು. ಮೊದಲ ಬಾರಿ ಇಲ್ಲಿಗೆ ಬಂದವರು ಬೆದರಬಹುದು ಅಂತ. ಅದಕ್ಕೆ ಆತ ವಿವರಣೆ ಇತ್ತ. ''ಈ ರೈಲು ಎರಡು ಕಂಬಿಗಳ ಮೇಲೆ ಮುಂದೆ ಸಾಗಿದರೂ ಕೂಡ, ಮಧ್ಯೆ ಇನ್ನೊಂದು ಹಲ್ಲಿರುವ ಕಂಬಿ ಇದೆ, ನೋಡಿ, ಆ ಕಂಬಿಯ ಹಲ್ಲುಗಳು ರೈಲುಗಾಡಿಗಳ ತಳವನ್ನು ಕಚ್ಚಿಕೊಂಡಿರುತ್ತವೆ. ಮಸಲಾ ಏನಾದರೂ ಗಾಡಿ ಜಾರಿದರೆ ನೆಟ್ಟಗೆ ಕೆಳಕ್ಕೆ ದಭಾರ್ ಅಂತ ಇಳಿಯುಲ್ಲ, ಅಪಘಾತವಾಗುಲ್ಲ. ಅಲ್ಲದೆ ವಿದ್ಯುಚ್ಛಕ್ತಿಯು ಆಕಸ್ಮಾತ್ ನಿಂತುಹೋದರೆ, ತತ್‌ಕ್ಷಣವೇ ಜನರೇಟರ್ ಸೆಟ್‌ನಿಂದ ವಿದ್ಯುಚ್ಛಕ್ತಿ ಹರಿದು ಬರುತ್ತದೆ. ಎಲ್ಲಾ ಆಕಸ್ಮಿಕಗಳಿಗೂ ಮುಂಜಾಗ್ರತೆ ತೆಗೆದುಕೊಂಡಿದೆ. ಈ ತನಕ ಯಾವ ಆಕಸ್ಮಿಕವೂ ಆಗಿಲ್ಲ'' ಎಂದು ವಿಶದೀಕರಿಸಿದ.

ಸ್ವಲ್ಪ ಧೈರ್ಯ ಬಂತು. ಏನು ಮಾಡದೆ ಇದ್ದುದು ಸರಿ ಎಂದು ಎನ್ನಿಸಿತು. ಮೌಂಟ್ ಪಿಲೇಟಸ್ ಮೇಲೆ ಅಲ್ಲಿ ಇಲ್ಲಿ ಮಂಜುಗಡ್ಡೆ ಕಟ್ಟಿತ್ತು. ಮೇಲೆ ನಿಂತು ಕೆಳಗೆ ಕಣಿವೆಗಳನ್ನು

ನೋಡಿದರೆ ಮಂಜಿನ ಭೂತಾಕಾರಗಳು ಬೀಸಿದ ಗಾಳಿಗೆ ವಾಲಾಡುತ್ತ ಇತ್ತ ಅತ್ತ ನಲಿದಾಡುತ್ತಿದ್ದುವು. ಸುತ್ತಲೂ ಕುಳಿರ್ಗಾಳಿ ಮುಖಕ್ಕೆ ಮುತ್ತು ಕೊಡುತ್ತಿತ್ತು. ಆ ಗಾಳಿಗೆ ನಮ್ಮ ಕೆನ್ನೆಗಿಂತ ನಮ್ಮ ಮೂಗಿನ ಮೇಲೆ ಮಮತೆ ಹೆಚ್ಚು. ಅದಕ್ಕೇ ಮೂಗಿನ ತುದಿಯನ್ನೇ ಹಗುರಾಗಿ ಕಚ್ಚುತ್ತಿತ್ತು. ಒಂದು ತರಹ ನೋವು, ಒಂದು ತರ ಹಿತವೂ ಕೂಡ ಆಗಹತ್ತಿತ್ತು. ಬೆಟ್ಟದ ಮೇಲೆಲ್ಲಾ ಒಂದು ತಾಸು ಓಡಾಡಿದೆವು. ಆನಂತರ ಭೋಜನ ಕಾಲ ಒದಗಿತು.

ಆ ಬೆಟ್ಟದ ಅಟ್ಟದಲ್ಲಿ ಅದೆಂತಹ ದಿವನಾದ ಹೋಟಲ್ ಅಂತ ! ಷಹರಿನಲ್ಲಿ ದೊರಕುವ ಅನುಕೂಲಗಳೆಲ್ಲ ಅಲ್ಲಿ ದೊರಕುತ್ತಿದ್ದುವು.

ಬೆಟ್ಟದ ಮೇಲಿದ್ದೀರಿ. ಕೊಟ್ಟಿದ್ದು ತಿನ್ನಿ ಅನ್ನುವ ಹಾಗಿರಲಿಲ್ಲ. ಬೇಕಾದ್ದು ಕೇಳಿ, ಬಿಸಿ ಬಿಸಿಯಾಗಿ ಕೊಡ್ತೀವಿ ಅನ್ನುವ ಆತಿಥ್ಯ. ಭರ್ಜರಿ ಮೊಸರನ್ನು ಬಡಿಸಿದರು. ಅಂದಮೇಲೆ ಸಸ್ಯಾಹಾರಿಗಳಿಗೆ ಹಬ್ಬವೇ ! ಊಟ ಮಾಡಿದೆ. ನಂತರ ಜ್ಞಾಪಿಸಿಕೊಂಡೆ. ಇದೇನಿದು ತಿಥಿ ಬ್ರಾಹ್ಮಣರ ತರಹ ತಿಂದುಬಿಟ್ಟೆನಲ್ಲ ! ಇನ್ನು ಹೊಟ್ಟೆ ಉಬ್ಬರಿಸಿಕೊಂಡು ದಿನವೆಲ್ಲಾ ಗಟರಪಟರ ತೇಗಿಕೊಂಡು ನರಳಬೇಕಲ್ಲ ಎನಿಸಿತು. ಉಂಡಮೇಲೆ ಪಶ್ಚಾತ್ತಾಪ ಪಟ್ಟರೆ ಏನು ಪ್ರಯೋಜನ ?

ಹಿಂತಿರುಗುವ ಸಡಗರ. ಬೆಟ್ಟದ ಮೇಲಿಂದ ಅರ್ಧ ದಾರಿಯಷ್ಟು ರೋಪ್‌ವೇ ಮುಖಾಂತರ ಇಳಿಯುವ ಏರ್ಪಾಡು. 18-20 ಜನ ನಿಲ್ಲಬಹುದಾದ ಪೆಟ್ಟಿಗೆಯೊಂದು ಪ್ಲಾಟ್‌ಫಾರಂನಲ್ಲಿ ಬಂದು ನಿಂತಿತು. ಅಷ್ಟು ಜನ ನಮ್ಮವರನ್ನು ಅದರಲ್ಲಿ ತುಂಬಿದರು. ಬಾಗಿಲು ಜಡಿದು ಭದ್ರಮಾಡಿದರು. ಸುತ್ತಲೂ ಗಾಜಿನ ಕಿಟಕಿ. ಮೇಲಿದ್ದ ಕಬ್ಬಿಣದ ಹಗ್ಗಕ್ಕೆ ಆತುಕೊಂಡಿದ್ದ ಆ ಪೆಟ್ಟಿಗೆ ಕೆಳಗಿಳಿಯಲು ಶುರು ಮಾಡಿತು. ಅಷ್ಟೇನೂ ವೇಗವಾಗಿ ಅಲ್ಲ. ಕೆಳಗೆ ಸುಮಾರು ದೂರದಲ್ಲಿ ಮಂಜು ಹಸಿರು ತುಂಬಿದ ಭೂಮಿ ಕಾಣಿಸುತ್ತಿತ್ತು. ಸ್ವಲ್ಪ ಹೊತ್ತಾದ ಮೇಲೆ ಮಧ್ಯ ಭಾಗಕ್ಕೆ ಬಂದೆವು. ಅಲ್ಲಿ ಇಳಿಯಲು ಒಂದು ನಿಲ್ದಾಣ. ಇಳಿದು ನಾಲ್ಕು ಜನ ಕೂಡುವ ಪುಟಾಣಿ ಪೆಟ್ಟಿಗೆಯಲ್ಲಿ ಕುಳಿತೆವು. ಅವೂ "ರೋಪ್"ಗಳಿಂದ ತೂಗಿಬಿದ್ದು ಸರಿಯುತ್ತಿತ್ತು. ಕೆಳಗಿಳಿಯುಕ್ಕೆ ಶುರು ಮಾಡಿದಾಗ, ಒರಗಿಕೊಳ್ಳಲು ಹೋದೆ. ಏನೋ ಬೆನ್ನೇ ಇಲ್ಲದ ಹಾಗೆ ಭಾಸವಾಯಿತು. ಇಳಿಯುವ ವೇಗ ತುಸು ಹೆಚ್ಚಾಗಿತ್ತು. ನಿಂತಿದ್ದರೇ ಚೆನ್ನ ಎನ್ನಿಸಿತು.

ಹೆದರಿಕೊಂಡೇ ಕೆಳಕ್ಕೆ ನೋಡಿದೆ: ತಲೆಯ ಕುಲಾವಿಯಿಂದ ಕಾಲ ಬೂಟ್ಸಿನ ತನಕ ಒಂದೇ ಬಣ್ಣದ ಉಣ್ಣೆಯ ಉಡುಪನ್ನು ಧರಿಸಿದ, ಒಂದು ಗಂಡು, ಒಂದು ಹೆಣ್ಣು ಬೆಟ್ಟವನ್ನು ಇಳಿಯುತ್ತಿದ್ದುವು. ಬೆಳಿಗ್ಗೆ ಬೆಟ್ಟವನ್ನು ಹತ್ತಿ, ಮಧ್ಯಾಹ್ನ ಫಲಾಹಾರ ಮುಗಿಸಿ, ನಂತರ ಸಂಜೆ ವೇಳೆಗೆ ಮನೆ ಸೇರುವ ಆ ಜತೆಯನ್ನು ಕಂಡು, ವ್ಯಾಯಾಮ ಅಂದರೆ ಹೀಗಿರಬೇಕು. ದೇಹಾರೋಗ್ಯಕ್ಕೆ ಅತ್ಯುತ್ಕೃಷ್ಟ ಮಾರ್ಗ ಇದು ಎಂದೆನಿಸಿತು. ಬೆಟ್ಟಗುಡ್ಡಗಳ ಸ್ವಿಟ್ಜರ್‌ಲ್ಯಾಂಡಿನಲ್ಲಿ ಈ ತರಹ ವ್ಯಾಯಾಮ ಜನಪ್ರಿಯ.

ನಮ್ಮೂರಿನಲ್ಲಿ ಹೀಗ್ಯಾಕೆ ಆಗುಲ್ಲ ಎಂದು ಯೋಚಿಸಿದೆ. ನಮ್ಮ ಬೆಟ್ಟಗಳನ್ನು ಹತ್ತಿಹೋದರೆ ಪ್ರಕೃತಿಯೊಂದೇ ನಮಗೆ ಸವಾಲು ಹಾಕುಲ್ಲ. ಹುಲಿ ಚಿರತೆಗಳು, ಹಾವು ಹಲ್ಲಿಗಳೂ ನಮಗೆ ಎದುರಾಗಬಹುದು. ಒಂದು ಸಾರಿ ಶ್ರವಣಬೆಳಗೊಳದ ಬೆಟ್ಟ ಏರಿ ಗೊಮ್ಮಟನನ್ನು ನೋಡ ಹೋಗಿದ್ದೆ. ಉತ್ಸವದ ಕಾಲ ಅಲ್ಲ ಆಗ, ಹಾಗಾಗಿ ಜನ ಸಂದಣಿ ಇತ್ತಿಲ್ಲ. ಬಾಹುಬಲಿಯ ದರ್ಶನವಾದ ನಂತರ ಸುತ್ತಮುತ್ತ ಸ್ವಲ್ಪ ಹೊತ್ತು ತಿರುಗಾಡಿದೆ. ದೂರದಲ್ಲಿ ಕಣಿವೆಯಾಚೆ ಇನ್ನೊಂದು ಬೆಟ್ಟದಲ್ಲಿ ಹದ್ದುಗಳು ಹೇರಳವಾಗಿ ಹಾರಾಡುತ್ತಿದ್ದುವು. ಬೆಟ್ಟ ಹತ್ತಿ ದೇವರ ದರ್ಶನಕ್ಕೆ ಅಪರಿಚಿತರು ಹೋದರೆ ಅಲ್ಲಿರುವ ನಿವಾಸಿಗಳಿಗೆ ಹಬ್ಬ ಆದಷ್ಟು ಗೆಬಕ ಬಹುದು ಅಂತ. ಹಾಗಾಗಿ ಅಂತಹವನೊಬ್ಬ ನನಗೆ ಗಂಟುಬಿದ್ದಿದ್ದು. ನನ್ನ ಜತೆಯೇ ಬರುತ್ತಿದ್ದ. ಅವನನ್ನು ಕೇಳಿದೆ. ''ಇದೇನು ಅಷ್ಟು ಹದ್ದು ಅಲ್ಲಿ'' ಎಂದು. ''ಅಗೋ ನೋಡಿ ! ಅಲ್ಲೊಂದು ಗುಹೆ ಕಾಣಿಸುತ್ತಲ್ಲ, ಅಲ್ಲಿ ಒಂದು ಹುಲಿ ಬಂದು ಸೇರಿಕೊಂಡಿದೆ. ದನವನ್ನು ಅದು ನೆನ್ನೆ ಹೊಡೆದುಹಾಕಿ ಅಲ್ಲಿ ತಿನ್ನುತ್ತಿದೆ. ತಿಂದು ಮುಗಿಸಿ ಗುಹೆಯಲ್ಲಿ ಮಲಗಿದೆ. ಉಳಿದ ಚೂರುಪಾರುಗಳನ್ನು ಹದ್ದುಗಳು ತಿನ್ನಲು ಹೊಂಚುಹಾಕುತ್ತಿವೆ'' ಎಂದು ಹೇಳಿದ. ತಗೊಳ್ಳಿ ಆಗ ಶುರುವಾಯ್ತು ಹುಲಿಯ ಹೆದರಿಕೆ, ನನಗೆ. ಬೆಟ್ಟದ ಮೇಲಿರುವ ತನಕ ಜತೆಗಾರ ಇದಾನೆ. ಇಳಿಯುವಾಗ ಒಬ್ಬನೇ ಇಳಿಯಬೇಕು. ಯಾರೂ ಇರುಲ್ಲ. ಹುಲಿ ಬಂದು ಗಿಂದರೆ ? ಎಂದು ಮನಸ್ಸು ಬೆದರಹತ್ತಿತು. ಬಾಹುಬಲಿಯ ದರ್ಶನಕ್ಕೆ ಬಂದಿದ್ದೇನೆ. ಬಂದ ಹುಲಿಯನ್ನು ಒಂದೇ ಗುದ್ದಿಗೆ ಬಾಹುಬಲಿ ಸಂಹಾರ ಮಾಡಬಲ್ಲ ಎಂದೂ ಮನಸ್ಸು ಧೈರ್ಯ ಕೊಟ್ಟಿತು. ಆದರೆ ಭಕ್ತರನ್ನು ಮಾತ್ರ ಬಾಹುಬಲಿ ಕಾಪಾಡುತ್ತಾನೆ ಎಂದೂ ಮನಸ್ಸು ನುಡಿಯಿತು.

ನೋಡಿ, ಆ ಕ್ಷಣದಿಂದ, ಬೆಟ್ಟ ಇಳಿದು ಶ್ರವಣಬೆಳಗೊಳದ ಅಂಗಡಿ ಬೀದೀಲಿ ಕಾಲಿಡುವ ತನಕ, ಬಾಹುಬಲಿಯ ನಾಮ ಸ್ಮರಣೆಯನ್ನು ಮಾಡಿದೆ. ಅಷ್ಟು ಭಕ್ತಿಯಿಂದ ಆ ದಿವ್ಯನಾಮಸ್ಮರಣೆಯನ್ನು ಯಾವ ಜೈನ ಭಕ್ತನೂ ಮಾಡಿರಲಿಕ್ಕಿಲ್ಲ.

ಕೆಳಗೆ ಸುರಕ್ಷಿತವಾಗಿ ಕಾರಿನಲ್ಲಿ ಕೂತಾಗ ಅನ್ನಿಸಿತು. ಸಿಕ್ಕವರ ಪಾಪ ಪುಣ್ಯಗಳನ್ನು ವಿಚಾರಿಸದೇ ಹುಲಿ ಹೊಡೆದು ತಿನ್ನುತ್ತದೆ. ಆದರೆ ದೈವ ಹಾಗೆ ಮಾಡುತ್ಯೇ ; ಪಾಪ ಪುಣ್ಯ ವಿಚಾರಿಸಿ, ಯೋಗ್ಯತೆಗೆ ನ್ಯಾಯವಾದ ಫಲ ಉಣಿಸುತ್ತದೆ. ನಾನು ಮಾಡಿದ ಪಾಪದ ಪ್ರಮಾಣ ನನಗೆ ಗೊತ್ತು ಬಾಹುಬಲಿಗೆ ಗೊತ್ತು. ಆದರೆ ಹುಲಿಗೆ ಗೊತ್ತಿಲ್ಲ. ಹುಲಿ ನನ್ನ ತಾಪತ್ರಯವನ್ನು ಒಮ್ಮೆಲೆ ಮುಗಿಸಿಬಿಡುತ್ತಿತ್ತು. ಆದರೆ ದೈವ ! ಕೊಲ್ಲಲೂ ಒಲ್ಲದೆ, ಕಾಡುವುದನ್ನೂ ಬಿಡದೆ ನಮ್ಮ ಶಿಲುಬೆಯನ್ನು ನಾವೇ ಹೊರುವಂತೆ ಮಾಡುತ್ತಲ್ಲ.

ಹೀಗೆಲ್ಲಾ ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದೆ. ರೋಪ್‌ವೆ ಇಳಿತದ ಎರಡನೆ ಹಂತದಲ್ಲಿ. ಏಕೆಂದರೆ, ನನ್ನ ಜತೆಗೆ ಇದ್ದ ಇತರ ಮೂವರು ಜ್ಯೋತಿಷರು. ಎರಡು ಮುದಿ ಗಂಡು, ಒಂದು ಮುದಿ ಹೆಣ್ಣು. ಜ್ಯೋತಿಷರು ಪರಿಚಯವು ಯಥಾವಿಧಿಯಾಗಿ ಆದಹೊರತು

ಮೇಲೆ ಬಿದ್ದು ಮಾತನಾಡುಲ್ಲವಲ್ಲ ! ಈ ಮುದಿಗಳ ಹತ್ತಿರ ನಾನಾದರು ಏನು ಮಾಡುವುದಿದೆ ಎಂದು ನಾನೂ ಶುರು ಹಚ್ಚಲಿಲ್ಲ. ಕಾರಣ ಪರ್ವತಾರೋಹಿಗಳ ವಿಷಯ ಆಲೋಚನೆಗಳು ಸುರುಳಿ ಸುತ್ತಿಕೊಂಡವು. ಅಂದರೆ ಅಷ್ಟು ಹೊತ್ತು ನನ್ನ ಮನಸ್ಸು ನಾನು ಅನುಭವಿಸಿದ ಶ್ರವಣಬೆಳಗೊಳ ಬೆಟ್ಟದ ಯಾತ್ರೆಯಲ್ಲೇ ಮಗ್ನವಾಗಿತ್ತು. ಬಹಿರಂಗವಾಗಿ ಎಲ್ಲೇ ಇದ್ದರೂ ಅಂತರಂಗದಲ್ಲಿ ನನಗೆ ನಾನೇ, ನನ್ನ ಅನುಭವಗಳ ಸುರುಳಿಯೇ ನನ್ನನು ಕವಿದಿರುತ್ತದೆ ಎನ್ನಿಸಿತು.

ನಮ್ಮ ಬಸ್ಸುಗಳು ಕಾದಿದ್ದುವು. ಸಂಜೆ ಮುಂದೆ ಅವುಗಳಲ್ಲಿ ಕುಳಿತು ಗೋಧೂಳಿ ಕಾಲದಲ್ಲಿ ಲೇಕ್ ಲೂಸರ್ನ್‌ಇನ ಸುತ್ತಮುತ್ತಲಿದ್ದ ಸ್ಥಳಗಳನ್ನು ನೋಡುತ್ತಾ, ರಾತ್ರಿ ಊಟದ ಹೊತ್ತಿಗೆ ಜ್ಯೂರಿಕ್‌ನಲ್ಲಿ ಹಾಜರಾದೆವು.

ದಾರಿಯಲ್ಲಿ ಮಾರ್ಗಸಖಿ ಹೇಳಿದ. ಕೆಲವು ತಿಂಗಳ ಹಿಂದೆ ವಿಮಾನವೊಂದು ದಾರಿತಪ್ಪಿ ಈ ರೋಪ್‌ವೆಯನ್ನು ತುಂಡುಹಾಕಿತು. ಎರಡು ಪೆಟ್ಟಿಗೆಗಳು ಆಗ ಇಳಿಯುತ್ತಿದ್ದುವು. ಅವು ಅಧಃಪಾತಾಳಕ್ಕೆ ಇಳಿದೇ ಹೋದುವು. ಎಂಟೂ ಜನರ ಹೆಣ ಇನ್ನೂ ಸಿಕ್ಕಿಲ್ಲ ಅಂತ.

ನಮ್ಮ ಪುಣ್ಯ ಹೋಗುವಾಗ ಆತ ಈ ಸುದ್ದಿಯನ್ನು ತಿಳಿಸಲಿಲ್ಲ. ಎಲ್ಲಾ ಮುಗಿದ ಮೇಲೆ ಹೇಳಿದ ಕಡೆಗುಟುಕು ಕಾಫಿ ಕುಡಿಯುವಾಗ ಸಿಕ್ಕ ಕೂದಲಿನಂತೆ, ಈ ಸುದ್ದಿ ನಮ್ಮನ್ನು ಕಾಡಬಹುದಾಗಿತ್ತು. ಆದರೆ ಸುರಕ್ಷಿತವಾಗಿ ಹಿಂತಿರುಗಿದೆವು ಎಂಬ ನೈಜಾಂಶ, ರಕ್ಷಿಸಿತು ನಮ್ಮನ್ನು.

## ''ಕ್ಷಯದ ಆಸ್ಪತ್ರೆ''

ಭಾನುವಾರ. ಆದರೂ ''ವಾಲ್ಡ್'' ಎಂಬ ಬೆಟ್ಟದ ಮೇಲಿರುವ ಕ್ಷಯ ಚಿಕಿತ್ಸಾ ಆಸ್ಪತ್ರೆಗೆ ಭೇಟಿಯನ್ನು ಏರ್ಪಡಿಸಿದ್ದರು.

ನಮ್ಮ ದೇಶದಲ್ಲಿ ಯಾವ ಶ್ರೀಮಂತರಿಗೆ ಕ್ಷಯ ಬಂದರೂ, ಸ್ವಿಟ್ಸರ್‌ಲೆಂಡಿಗೆ ಮೊದಲು ಓಡುತ್ತಿದ್ದುದು ನನಗೆ ಜ್ಞಾಪಕವಿತ್ತು. ಜವಹರಲಾಲರ ಹೆಂಡತಿಯು ಚಿಕಿತ್ಸೆ ಪಡೆಯಲು ಸ್ವಿಟ್ಸರ್ಲೆಂಡಿಗಲ್ಲವೇ ಹೋಗಿದ್ದು. ಹಾಗಾಗಿ ಈ ದೇಶದ ಕ್ಷಯದಾಸ್ಪತ್ರೆಗಳ ವೈಶಿಷ್ಟ್ಯವೇನು ಎಂಬ ಕುತೂಹಲವಿತ್ತು. ತೌರಿಗೆ ಹೋಗುವ ಸೊಸೆಯಂತೆ ಕುಣಿಕುಣಿಯುತ್ತಾ ಹೊರಟೆ.

ಬಸ್ ಹಾದಿಯು ಬೆಟ್ಟದ ಮೇಲಿನ ಎರಡೂ ಕಡೆಗಳಲ್ಲಿ ಹಚ್ಚಹಸುರಿನ ಗಿಡ ಮರ ಬಳ್ಳಿಗಳು ಹೊರವಾಗಿ ಬೆಳೆದು ಕಣ್ಣಿಗೆ ತಂಪಾಗಿತ್ತು. ಸುಮಾರು ಚಾಮುಂಡಿ ಬೆಟ್ಟದಷ್ಟು ಎತ್ತರವಾಗಿತ್ತು, ಆ ಬೆಟ್ಟ. ಆಸ್ಪತ್ರೆಯು ಅಂತಹ ದೊಡ್ಡದೇನೂ ಅಲ್ಲ. ಕೇವಲ ನಾಲ್ಕು ಅಂತಸ್ತುಗಳಿದ್ದ ಕಟ್ಟಡ. ಬಾಗಿಲಲ್ಲೇ ಆಸ್ಪತ್ರೆಯ ಸಿಬ್ಬಂದಿಯವರು ಆದರದಿಂದ ಸ್ವಾಗತಿಸಿದರು.

ಮೊದಲು ಅಡಿಗೆ ಮನೆಗೆ ಕರೆದುಕೊಂಡು ಹೋದರು. ಎಲೆಕ್ಟ್ರಿಕ್ ಒಲೆಗಳು. ಹೊಳೆಯುತ್ತಿರುವ ಸ್ಟೈಯಿನ್‌ಲೆಸ್ ಸ್ಟೀಲಿನ ಪಾತ್ರೆಗಳು. ಆದರೆ ಏನು ಸೋಜಿಗ ಅಂತೀರಿ ? ನೆಲಕ್ಕೆ, ಮತ್ತು ಗೋಡೆಗೆ ಮರದ ಹಲಗೆಗಳನ್ನು ಬಡಾಯಿಸಿದ್ದರು. ಆ ಊರಿನಲ್ಲಿ ಛಳಿ ಹೆಚ್ಚು, ಅದಕ್ಕೇ ಈ ಯೋಜನೆ ಅಂದುಕೊಂಡೆ.

ಆದರೆ ಮರದ ಹಲಗೆಗಳನ್ನು ಬಡಾಯಿಸಿದರೆ, ಜಿರಳೆ ಕಾಟ ! ನಮ್ಮನೆ ಅಡಿಗೆ ಮನೆಯಲ್ಲಿ ಮೂರು ಬಡುಗಳಿರುವ ಅಲ್ಮೈರಾ ಇದೆ. ಅದರಲ್ಲೇ ಮೆಣಸಿನ ಪುಡಿ, ಸಾರಿನ ಪುಡಿ, ಸಾಂಬಾರ್ ಪುಡಿ, ಚಟ್ನಿಪುಡಿ ಇತ್ಯಾದಿ ಎಲ್ಲವನ್ನೂ ಇಡುವುದು. ಪ್ರತಿ ಶನಿವಾರ ಸಂಜೆಗೆ ಐದು ಗಂಟೆಗೆ ಡಿ.ಡಿ.ಟಿ.ಯನ್ನು ಚೆಲ್ಲುತ್ತೇವೆ. ಡಬ್ಬಗಳನ್ನೆಲ್ಲಾ ಮೊದಲು

ತೆಗೆದಿಡುತ್ತೇವೆ, ಅನ್ನಿ. ಭಾನುವಾರ ಬೆಳಿಗ್ಗೆ ಮೊಂಡು ಕಸಪರಿಕೆ ತೆಗೆದು ಅಲ್ಮೈರಾವನ್ನು ಗುಡಿಸುತ್ತೇವೆ. ಅಲ್ಮೈರಾದ ಬಡುಗಳನ್ನು ಆದಷ್ಟು ಸಡಿಲಿಸಿ ಗುಡಿಸುತ್ತೇವೆ. ಸುಮಾರು ಒಂದು ಮೊರ ತುಂಬುವಷ್ಟು ಜಿರಳೆಗಳ ಹೆಣಗಳು, ಮಕ್ಕಳು ಜಿರಳೆ, ಮರಿ ಜಿರಳೆ, ಪುಟ್ಟ ಜಿರಳೆ, ಎಲ್ಲವೂ, ಬಿದ್ದಿರುತ್ತವೆ. ಅಂದಮೇಲೆ ನೆಲಕ್ಕೆ, ಗೋಡೆಗೆ, ಮರವನ್ನು ಬಡಾಯಿಸಿದರೆ. ಜಿರಳೆಗಳ ಕಾಟ ಮಿತಿಮೀರುಲ್ಲವೇ ? ಎನ್ನಿಸಿತು.

ಅಡಿಗೆ ಮನೆಯ ಅಧಿಕಾರಿಯಾಗಿದ್ದ ಅನ್ನಪೂರ್ಣೆಯನ್ನು ಕೇಳಿಯೇ ಬಿಟ್ಟೆ.

ಆ ಅನ್ನಪೂರ್ಣೆಯೂ 40-50ರ ಪ್ರಾಯದ ತುಂಡಾಂದಿ ಹೆಣ್ಣು. ನನ್ನ ಅಜ್ಞಾನದ ಪ್ರಶ್ನೆಯನ್ನು ಕೇಳಿ ಆಕೆ ನಗಬಹುದು. ನಗಲಿ. ಆಕೆಯ ಹಾಲುಕೆನೆಯಂತಹ ಕೆನ್ನೆಗಳಲ್ಲಿ ಗುಳಿ ಬೀಳುತ್ತಲ್ಲಾ! ನೋಡುಕ್ಕೆ ಎಷ್ಟು ಚೆನ್ನ !! ಅದಕ್ಕೇ ಕೇಳಿಯೇ ಬಿಟ್ಟೆ. ''ಎಲೌ ತರುಣೀ ! ಈ ಅಡಿಗೆ ಮನೆಯಲ್ಲಿ ಜಿರಳೆಗಳ ಕಾಟ ಇಲ್ಲವಲ್ಲ ! ಈ ಪವಾಡವನ್ನು ಹೇಗೆ ಸಾಧಿಸಿದ್ದೀರಿ. ಯಾವ ಬ್ರಾಂಡ್ ಡಿ.ಡಿ.ಟಿ. ಉಪಯೋಗಿಸುತ್ತೀರಿ'' ಎಂದು.

ಆಕೆಯು ನಗಲಿಲ್ಲ. ಹಣೆಯಮೇಲೆ, ಭ್ರೂಮಧ್ಯದಲ್ಲಿ, ಪ್ರಶ್ನಾರ್ಥ ಚಿಹ್ನೆ ಉದ್ಭವವಾಯಿತು. ''ಜಿರಳೆಗಳು ? ಹಾಗಂದರೇನು ?'' ಎಂದಳು.

''ಜಿರಳೆ ! ಜಿರಳೆಗಳು ? ಗೊತ್ತಿಲ್ಲವೆ ? ಹೀಗಿರುತ್ತೆ'' ಎಂದು ವರ್ಣಿಸಿದೆ.

ನನ್ನ ಮುಖವನ್ನು ನೋಡಿದಳು. ನಾನೇ ಜಿರಳೆಯಂತೆ ಆಕೆಯ ಕಣ್ಣಿಗೆ ಕಾಣಿಸಿದೆನೇನೋ ! ಆ ಹೊತ್ತಿಗೆ ಆಸ್ಪತ್ರೆಯ ವೈದ್ಯನೊಬ್ಬನು ಅಲ್ಲಿಗೆ ಬಂದ. ಇಂಗ್ಲೀಷಿನಲ್ಲಿ ಅವನಿಗೆ ನನ್ನ ಪ್ರಶ್ನೆಯನ್ನು ಹೇಳಿದೆ. ಆಕೆಗೆ ಅವ ನಗುತ್ತಾ ಜರ್ಮನ್ ಭಾಷೆಯೋ, ಅಥವಾ ಇನ್ನಾವುದೋ, ಭಾಷೆಯಲ್ಲಿ ಏನನ್ನೋ ಹೇಳಿದ. ಆಕೆ ಇಂಗ್ಲೀಷಿನಲ್ಲಿ ಮಾತನಾಡುತ್ತಿದ್ದರೂ ಜಿರಳೆ — ಎಂಬ ಶಬ್ದದ ಪರಿಚಯವಿದ್ದಿಲ್ಲ ಅಂತ ಕಾಣುತ್ತೆ. ವಿಷಯ ತಿಳಿದ ಮೇಲೆ ತಿಳಿತಿಳಿಯಾಗಿ, ಕೆನ್ನೆಗಳಲ್ಲಿ ಗುಳಿಗಳನ್ನು ಹೂಡುತ್ತಾ ನಕ್ಕು ಹೇಳಿದಳು. ''ಜಿರಳೆಗಳು ಸ್ವಿಟ್ಸರ್ಲೆಂಡಿನಲ್ಲಿ ಇಲ್ಲ. ಹಾಗೂ ಈ ಬೆಟ್ಟದ ಮೇಲಕ್ಕೆ ಹತ್ತಿಬರುಕ್ಕೆ ಅವುಗಳ ಕಾಲಿಗೆ ಶಕ್ತಿಯಿಲ್ಲ'' ಎಂದು.

ಜಿರಳೆಗಳಿಲ್ಲ ! ಧೂಳಿಲ್ಲ ! ಹಸಿಸೌದೆ ಇಲ್ಲ, ಎಲ್ಲಾ ವಿದ್ಯುಚ್ಛಕ್ತಿ ! ಹಲ್ಲಿಗಳಿಲ್ಲ, ಸೊಳ್ಳೆಗಳಿಲ್ಲ, ನೊಣಗಳಿಲ್ಲ, ವಾನರಗಳಿಲ್ಲ ! ಅಂದಮೇಲೆ ಅಡಿಗೆ ಮನೆಯನ್ನೂ ದೇವರಮನೆ ತರಹ ಸಾರಿಸಿ ಗುಡಿಸಿ ರಂಗೋಲಿ ಇಟ್ಟು ಶುಭ್ರವಾಗಿಟ್ಟುಕೊಳ್ಳುವುದು ಏನು ಕಷ್ಟ! ಈ ಜನರ ಶುಭ್ರತೆಗೆ ಪ್ರಕೃತಿಯೇ ಕಾರಣ ಎನ್ನಿಸಿತು.

ಆ ಊರಿನ ಸ್ತ್ರೀಯರ ಮೇಲಿನ ಮರ್ಯಾದೆ, ಗೌರವ, ಕರುಬು, ಎಲ್ಲವೂ ಅರ್ಥ ಆಯಿತು.

ಹಾಲು ಕಾಯಿಸುತ್ತಿದ್ದರು. ದೊಡ್ಡ ಕಡಾಯದಲ್ಲಿ, ಆಗತಾನೆ ಬಂದಿದ್ದ ಪೀಪಾಯಿನಿಂದ ಹಾಲನ್ನು ಕಡಾಯಿಗೆ ಹಾಕುತ್ತಿದ್ದರು. ಎಷ್ಟು ಗಟ್ಟಿಯಾಗಿತ್ತು ಅಂತ ! ಗಟ್ಟಿ ಎಮ್ಮೆಯ ಗಟ್ಟಿಹಾಲಿನ ತರಹ ಇತ್ತು.

ಒಂದು ತರಾಯಿನಲ್ಲಿ ಮೊಟ್ಟೆಗಳ ಸಣ್ಣ ಗುಡ್ಡ ಕಾಣಿಸಿತು. ಇನ್ನೊಂದು ಪಕ್ಕದಲ್ಲಿ ಚೆಂದ ಕಾಣಿಸುತ್ತಿದ್ದ ಹೊಂಬಣ್ಣದ ಬ್ರೆಡ್ಡಿನ ಬೆಟ್ಟ ಕಾಣಿಸಿತು.

ಧೂಳಿಲ್ಲದ ಈ ಗಾಳಿ ಸೇವಿಸಿ, ಹೊಟ್ಟೆಬಿರಿಯ ರುಚಿರುಚಿಯಾಗಿ ತಿಂದು, ವನ ಮಧ್ಯದಲ್ಲಿ ಷಹರಿನ ಸೌಭಾಗ್ಯವನ್ನೆಲ್ಲಾ ಅನುಭವಿಸುವ, ಇಲ್ಲಿನ ರೋಗಿಗಳಿಗೆ ಬೇರೆ ಔಷಧಿ ಯಾಕೆ ? ಹೊಸ ಹೊಸ ಮದ್ದುಗಳ ಇನ್‌ಜೆಕ್ಷನ್ ಬೇಕೇ ? ಎಂದೆನಿಸಿತು. ಬದುಕುಕ್ಕೆ ಆಳ ಮನಸ್ಸಿನಲ್ಲಿ ಆಸೆ ಇಲ್ಲದವರು ಮಾತ್ರ ಇಲ್ಲಿ ಸಾಯಬೇಕು. ಇಲ್ಲದಿದ್ದರೆ ಸಾಯಲು ಚಿತ್ತ ಶುದ್ಧಿಯಿದ್ದ ಜನರಿಗೆ ಇಲ್ಲಿ ಅಸಾಧ್ಯ ಎನ್ನಿಸಿತು.

ಹಿರಿಯಧಿಕಾರಿ ನಂತರ ನಮ್ಮನ್ನೆಲ್ಲಾ ಆಸ್ಪತ್ರೆಯ ಸಭಾಮಂದಿರಕ್ಕೆ ಕರೆದುಕೊಂಡು ಹೋದ. ಕಳೆದ ಎರಡು ವರ್ಷಗಳಿಂದ ಎಷ್ಟೆಷ್ಟು ತರಹಾ ಔಷಧಿಗಳನ್ನು ಯಾವ ಪ್ರಮಾಣ ದಲ್ಲಿ ಉಪಯೋಗಿಸಿದ, ಯಾವ ಸತ್ಪರಿಣಾಮಗಳಾದುವು ಎಲ್ಲವನ್ನೂ ಬಲು ಆಸ್ಥೆಯಿಂದ ವಿವರಿಸಿದ.

ಆತ ಹೇಳಿದ ಪ್ರಮಾಣದಲ್ಲಿ ಆ ಔಷಧಿಗಳನ್ನು ಪ್ರತಿರೋಗಿಗೆ ನಮ್ಮ ದೇಶದಲ್ಲಿ ಪ್ರಯೋಗಿಸಿದರೆ, ಅರ್ಧಕ್ಕಷ್ಟು ಅರ್ಧ ಜನ ಔಷಧಿಗಳ ತೀವ್ರತೆಯಿಂದಲೇ ನೆಗೆದುಬಿದ್ದು ಹೋಗ್ತಾರೆ. ಆ ವೇಳೆಗೆ ಆದ ಖರ್ಚನ್ನು ಸರಿ ತೂಗಿಸಹೋದರೆ ನಮ್ಮ ದೇಶ ಪಾಪರ್‌ಚೀಟಿ ತೆಗೆದುಕೊಂಡು ಬಿಡುತ್ತೆ, ಮಿಕ್ಕವರಿಗೆಲ್ಲ ಇದನ್ನು ಕಂಡು ಹುಚ್ಚು ಹಿಡಿದು ಹೋಗುತ್ತೆ ಎನ್ನಿಸಿತು.

ಆಸ್ಪತ್ರೆಯಲ್ಲಿನ ವಾರ್ಡ್, ರೋಗಿಗಳಿಗಿರುವ ಸೌಕರ್ಯ ಎಲ್ಲವನ್ನೂ ಕೂಲಂಕಷ ವಾಗಿ ವಿವರಿಸಿದರು. ತೋರಿಸಿದರು. ಹೊಟ್ಟೆ ಉರಿದುಹೋಯ್ತು ಆ ರೋಗಿಗಳನ್ನು ನೋಡಿ. ಹಿಂದಿನ ಕಾಲದ ರಾಜ್ಯ ಇದ್ದ ರಾಜರ ಅಳಿಯಂದಿರು ಕೂಡ ಆ ವೈಭವವನ್ನು ಅನುಭವಿಸಿರ ಲಾರರು.

ಬಲು ಆದರದಿಂದ ಆಸ್ಪತ್ರೆಯ ಡಾಕ್ಟರುಗಳು ನಮ್ಮನ್ನು ಮಾತನಾಡಿಸಿದರು. ಮುಚ್ಚುಮರೆಯಿಲ್ಲದೆ ತಾವು ಕಲಿತುದನ್ನು ವಿವರಿಸಿ ಹೇಳಿದರು. ಕಡೆಗೆ ಅನಿಸಿದ್ದು ಆ ದೇಶದ ಅನುಭವ ನಮ್ಮ ದೇಶಕ್ಕೆ ಏನೊಂದೂ ಪ್ರಯೋಜನವಿಲ್ಲ. ದೂರದಿಂದ ನೋಡುಕ್ಕೆ ಚೆನ್ನ. ಆದರೆ ಅನುಸರಿಸಲು ಯಾವುದೂ ಸಮನಲ್ಲ, ಸಮಂಜಸವೂ ಅಲ್ಲ ಎಂದು.

## ಸಂತೇಲಿ ಸ್ವೆಟರ್ ಕೊಂಡಿದ್ದು

ಸೋಮವಾರ ಬೆಳಿಗ್ಗೆ ಯಾವ ಕಾರ್ಯಕ್ರಮವೂ ಇದ್ದಿಲ್ಲ. ಮಧ್ಯಾಹ್ನ ಭೋಜನಾನಂತರ ಸುಮಾರು 2 ಗಂಟೆಗೆ ಇಟಲಿಗೆ ಪ್ರಯಾಣ ಹೊರಡಬೇಕು ಅಂದಮೇಲೆ ಬೆಳಿಗ್ಗೆ ಆರಾಂ. ಜೇಬನ್ನು ಹುಡುಕಿದೆ. ನೂರು ಫ್ರಾಂಕ್ ಅಷ್ಟು ಕಣ್ಣಿಗೆ ಬಿತ್ತು. ಅದನ್ನು ಕಂಡ ಮೇಲೆ, ಅದು ಕೈಬಿಡುವ ತನಕ ತೊಣಚಿ ಹೊಕ್ಕ ನಾಯಿನ ಹಾಗೆ ಆಡುವ ಸ್ವಭಾವ ನನ್ನದು. ಸರಿ, ಜೂರಿಕ್ಕಿನ ಸಂತೆ ಬೀದೀಗೆ ಹೋದೆ. ಸ್ವೆಟರ್ ಒಂದನ್ನು ಕೊಳ್ಳುವ ಆಸೆ. ಬೆಂಗಳೂರಿನಲ್ಲಿದ್ದಾಗ ಸ್ವೆಟರ್ ಕೊಳ್ಳುವ ಯೋಚನೆಯೇ ಬಂದಿರಲಿಲ್ಲ. ಪ್ರಕೃತಿದತ್ತವಾದ, ಕರಡಿಗಿರುವಂತೆ ಇರುವ, ಸಹಜವಾದ ಸ್ವೆಟರ್ ನನ್ನ ಎದೆ ಬೆನ್ನುಗಳ ಮೇಲೆಲ್ಲಾ ಹುಲುಸಾಗಿದೆ. ಅಂದ ಮೇಲೆ ಧನುರ್ಮಾಸ ಬಂದರೂ ನಡುಗುವಂತೆ ಎಂದೂ ಆಗುವುದಿಲ್ಲ. ಆದರೆ ಸ್ವಿಟ್ಸರ್ಲೆಂಡಿನಲ್ಲಿ ಮನಮೋಹಕ ಸ್ವೆಟರುಗಳನ್ನು ತೊಟ್ಟುಕೊಂಡ ಹೆಂಗಸರು ದೃಷ್ಟಿ ಹರಿಸಿದ ಕಡೆ ಕಾಣುತ್ತಿದ್ದರು. ಬಣ್ಣ ಬಣ್ಣದ ತುಂಬು ತುಂಬುಕೊಂಡಿರುವ ಚಿತ್ರವಿಚಿತ್ರವಾದ ಆ ಸ್ವೆಟರುಗಳನ್ನು ಕಂಡಾಗ ನಾನೂ ಒಂದನ್ನು ಕೊಂಡರೆ ಚೆನ್ನ ಎನಿಸಿತ್ತು. ಸಂತೆ ಬೀದಿಯಲ್ಲಿದ್ದ ಸುಮಾರು ದೊಡ್ಡ ಅಂಗಡಿಯೊಂದರೊಳಕ್ಕೆ ಹೋದೆ ಅಂಗಡಿಯ ತುಂಬಾ ಗಿಜಿಗಿಜಿ ಅಂತ ಬಿಳಿಯರು ತುಂಬಿದ್ದರು. ಬಿಳಿ ಗಿರಾಕಿಗಳಾಡುತ್ತಿದ್ದ ಇಂಗ್ಲೀಷನ್ನು ಕೇಳಿದಾಗ, "ಓಹೋ ! ಇವರು ಅಮೆರಿಕನ್ ಪ್ರವಾಸಿಗಳು. ಹಿಂಡು ಹಿಂಡಾಗಿ ಬಂದಿದ್ದಾರೆ. ಜೇಬಿನ ತುಂಬಾ ಝಣ ಝಣ ಅಂತಿರುತ್ತೆ, ಯೋಚನೆ ಮಾಡದೆ ಕಾಸು ಚೆಲ್ಲುವ ಜನ. ಇವರುಗಳು ಬಂದ ಅಂಗಡಿ ಎಂದರೆ, ಸುಮಾರು ದುಬಾರಿಯದೇ ಇರಬೇಕು. ದಾರಿ ತಪ್ಪಿ ಇಲ್ಲಿಗೆ ಯಾಕೆ ಬಂದೆನಪ್ಪಾ' ಎಂದೆಲ್ಲಾ ಅನ್ನಿಸಿತು. ಆ ಗಲಾಟೆಯಲ್ಲಿ ಯಾರಿಗೂ ಕಾಣದ ಹಾಗೆ ನುಸುಳಿಕೊಂಡು ಹೊರಗೆ ಬಂದುಬಿಡೋಣ ಎಂದು ಕಳ್ಳಹೆಜ್ಜೆಗಳನ್ನು ಹೊರಬಾಗಿಲ ಕಡೆಗೆ ಹಾಕಲು ಶುರು ಮಾಡಿದೆ.

ಅಷ್ಟರಲ್ಲೇ ಅಂಗಡಿ ಸಿಬ್ಬಂದಿಯ ಗೃಧ್ರಾಕ್ಷಿಯೊಬ್ಬಳು ನನ್ನನ್ನು ಕಂಡಿರಬೇಕು. ಮಿಂಚು ಹರಿದು ಬಂದಂತೆ ನನ್ನ ಬಳಿ ಬಂದಳು. "ಯಾವ ರೀತಿ ನಿಮಗೆ ನೆರವಾಗಲಿ"

ಎಂದು ವಿನಯದಿಂದ ಆದರದಿಂದ ಕೇಳಿದಳು. ''ಈಕೆಯು ಬಳಿ ದಿಟ ಹೇಳಿದರೆ ಅನುಕೂಲ ವಾಗಬಹುದು'' ಎನ್ನಿಸಿತು. ''ನೋಡಮ್ಮ ! ಮಹಿಳಾಮಣಿ ! ಸ್ವೆಟರ್ ಕೊಳ್ಳೋಣ ಅಂತ ಬಂದೆ. ಬಡದೇಶದಿಂದ ಬಂದ ಬಡಪಾಯಿ ನಾನು. ಈಗ ನನ್ನಲ್ಲಿರೋ ಭಂಡಾರ ನೂರು ಫ್ರಾಂಕುಗಳು ಮಾತ್ರ. ಇದರಲ್ಲಿ ಬಹಳ ಚೆನ್ನಾಗಿರುವ, ನಮ್ಮೂರಿನಲ್ಲಿ ಇದನ್ನು ನೋಡಿದರೆ ಇತರರು ಕರುಬುವಂತಹ ಸ್ವೆಟರ್ ಸಿಗುತ್ತೆ ? ಇಲ್ಲಿಗೆ ಬಂದಿರುವ ಅಮೆರಿಕನ್ ಗಿರಾಕಿಗಳನ್ನು ನೋಡಿದರೆ, ನನ್ನ ವ್ಯಾಪಾರ ಇಲ್ಲಿ ಕುದುರುಲ್ಲ ಎನ್ನಿಸುತ್ತೆ'' ಎಂದು ಎದೆ ಬಿಚ್ಚಿ ಮಾತನಾಡಿದೆ.

ನನ್ನ ಅಂಗಿಯನ್ನು ಬಿಚ್ಚಿದಳು, ಆಕೆ. ''ಬನ್ನಿ ಇಲ್ಲಿ'' ಎಂದು ಅಂಗಡಿಯ ಒಂದು ಮೂಲೆಗೆ ಕರೆದುಕೊಂಡು ಹೋದಳು. ಹತ್ತಾರು ಸ್ವೆಟರುಗಳನ್ನು ಬಡುಗಳಿಂದ ತೆಗೆದು, ಇದು ನಿಮ್ಮ ಅಳತೆಗೆ ಸರಿ ಹೋಗುತ್ತೆ, ಈ ಬಣ್ಣ ಬಲು ಚೆನ್ನ. ಇದೇ ನವ್ಯ ಮಾದರಿ. ಬೆಲೆಯೂ ನಿಮಗೆ ಎಟುಕುತ್ತೆ ಎಂದೆಲ್ಲಾ ಹೇಳಿದಳು. ಸುಮಾರು ಗಾಢವಾದ ಹಸಿರು ಬಣ್ಣದ ಸ್ವೆಟರ್ ಒಂದನ್ನು ಕೈಗೆತ್ತಿಕೊಂಡೆ. ಪಕ್ಕದಲ್ಲೇ ಪರದೆಗಳಿಂದ ಮುಚ್ಚಲ್ಪಡಬಹುದಾದ ಪುಟಾಣಿ ಸ್ಥಳ ಒಂದಿತ್ತು, ಅಲ್ಲಿಗೆ ಆಕೆಯೇ ನನ್ನನ್ನು ಸ್ವೆಟರಿನೊಡನೆ ಕರೆದುಕೊಂಡು ಹೋದಳು. ಗೋಡೆಗೆ ಭಾರಿ ಕನ್ನಡಿ ಬಡಾಯಿಸಿತ್ತು, ಸುತ್ತಲೂ ಪರದೆ ಎಳೆದಳು. ಹೇಗಿದ್ದರೂ ಮೊದಲೇ ನನ್ನ ಅಂಗಿ ಬಿಚ್ಚಿದ್ದಳಲ್ಲ! ತನ್ನ ಕೈ ಮೇಲೆ ಅದನ್ನು ಹಾಕಿಕೊಂಡಿದ್ದಳಲ್ಲ!! ಈಗ ಸ್ವೆಟರನ್ನು ತೆಗೆದುಕೊಂಡು ನನಗೆ ತೊಡಿಸಿದಳು. ಆ ಸ್ವೆಟರು ಹಿತವಾಗಿ ನನ್ನನ್ನು ಆಲಂಗಿಸಿಕೊಂಡಿತು. ನಿಮ್ಮ ಅಳತೆಗೆ ಸರಿಯಾಗಿದೆ. ಕನ್ನಡಿಯಲ್ಲಿ ನೋಡಿಕೊಳ್ಳಿ ಎಂದಳು. ನೋಡಿದೆ. ಕನ್ನಡಿಯಲ್ಲಿ ಕಾಣಿಸಿದ್ದು ಆಕೆ. ಆಕೆಯ ಮುಂದೆ ಸಣ್ಣ ಕರಡಿ ಮರಿ ನಿಂತಿದೆಯೇನೋ ಎನ್ನಿಸಿತು. ಸ್ವೆಟರಿನ ಉಣ್ಣೆ ಕರಡಿಯ ಮೈ ತರಹವೇ ಇತ್ತು. ಇದನ್ನೇ ಕೊಳ್ಳೋಣ ಇಲ್ಲದೆ ಇದ್ದರೆ ಹತ್ತಾರು ಬಾರಿ ಇವಳೇ ಸ್ವೆಟರ್ ತೊಡಿಸುತ್ತಾಳೆ. ಪರಸ್ತ್ರೀಯರು ಶುದ್ಧ ಚಾರಿತ್ರ ಸನಾತನಿಯನ್ನು ಹಾಗೆಲ್ಲಾ ಕಂಕುಳ ಸಂದಿಗೆ ಕೈ ಹಾಕಿ ಮುಟ್ಟಬಾರದು. ಆದುದರಿಂದಲೇ ಇದು ಒಪ್ಪಿಗೆ. ಆದರೆ ಬೆಲೆ ? ಎಂದೆ. ಇದಕ್ಕೆ 60 ಏ ಫ್ರಾಂಕು. ಇನ್ನು 40 ಫ್ರಾಂಕ್ ಮಿಗುತ್ತೆ ನಿಮ್ಮ ಇತರೇ ಖರ್ಚಿಗೆ ಎಂದಳು. ನಮ್ಮೂರಿನ ಅಂಗಡಿಯವರಾಗಿದ್ದರೆ, ಹೊರ ದೇಶದಿಂದ ಗಿರಾಕಿ ಬಂದು ನೂರು ರೂಪಾಯಿ ಮಾತ್ರ ಇದೆ. ಒಳ್ಳೆ ಟೋಪಿ ಕೊಳ್ಳಬೇಕು ಎಂದು ಕೇಳಿದರೆ, ಅವನ ತಲೆಗೆ ನೂರು ರೂಪಾಯಿಗೂ ಟೋಪಿ ಹಾಕಿ ಕಳಿಸುತ್ತಿದ್ದರು.

ಅಂಗಿ ಹಾಕಿಕೊಂಡೆ, ಸ್ವೆಟರನ್ನು ಹಿಡಿದುಕೊಂಡು ಆಕೆ ಖಜಾಂಚಿ ಕೂರುವಲ್ಲಿಗೆ ಹೋದಳು. ಅವಳನ್ನೇ ನೆರಳಿನಂತೆ ಹಿಂಬಾಲಿಸಿದೆ. ಖಜಾಂಚಿಯ ಮೇಜಿನ ಪಕ್ಕದಲ್ಲಿ ಆಕೆ ನಿಂತು, ಸ್ವೆಟರನ್ನು ಮಡಿಸಿ ಕಾಗದದ ಮೇಲಿಟ್ಟು ಎಷ್ಟು ಬೇಗ ಎಷ್ಟು ಅಂದವಾಗಿ ಭಾಂಗಿ ಕಟ್ಟಿದಳು ಅಂತ. ಭಾಂಗಿ ಮುಗಿದಮೇಲೆ ನೋಡಿದರೆ ಹಿಡಿದುಕೊಳ್ಳಲು ನುಣುಪಾದ ದಾರದ ಕೈ ಹಿಡಿ ಬೇರೆ! ಆ ವೇಳೆಗೆ ಹಣ ಕೊಟ್ಟು ಮುಗಿಸಿದ್ದೆ.

ದಿಗ್ವಿಜಯ ಮಾಡಿದ ಉತ್ತರ ಕುಮಾರನಂತೆ ಅಂಗಡಿಯಿಂದ ಹೊರ ಬಿದ್ದು ಉಳಿದುಕೊಂಡಿದ್ದ ಹೋಟಲಿಗೆ ಹಿಂತಿರುಗಿದೆ.

ಊಟದ ಹೊತ್ತಾಗಿತ್ತು. ಇಲ್ಲದ ಇದ್ದರೆ ಕೊಠಡಿಯಲ್ಲಿ ಭಾಂಗಿಯನ್ನು ಬಿಚ್ಚಿ ಸ್ವೆಟರನ್ನು ತೊಟ್ಟು ಇನ್ನೊಂದು ಸರ್ತಿ ಕನ್ನಡಿಯಲ್ಲಿ ನೋಡಿಕೊಳ್ಳುತ್ತಿದ್ದೆ.

ಊಟ ಮುಗಿಸಿ, ಸಾಮಾನುಗಳೆರಡನ್ನೂ ಜೋಪಾನವಾಗಿ ಕಾಯುತ್ತ ಹೋಟಲಿನ ಅಂಗಳದಲ್ಲಿ ಕುಳಿತೆ. ಬಸ್ ಬಂದು ಇಟಲಿಗೆ ಹೋಗುವ ವಿಮಾನಕ್ಕೆ ನಮ್ಮನ್ನು ಸಾಗಿಸಬೇಕಲ್ಲ! ಆ ತನಕ ಕಾಯುತ್ತ ಕುಳಿತೆ. ಬಾಲ್ಯದಲ್ಲಿ ಕಲಿತ ಪದ್ಯ ಜ್ಞಾಪಕಕ್ಕೆ ಬಂತು.

ವರುಷ ನೂರಾಯುಷ್ಯ. ಅದರೊಳಗೆ
ಇರುಳು ಐವತ್ತು. ಕಳೆದೈವತ್ತರಲಿ.
ಮೂರು ಬಸ್ಸಿಗಾಗಿ ಕಾಯುವುದು

ಎಂದು ಪಲುಕಕ್ಕೆ ಶುರು ಮಾಡಿದೆ. "ಏಳ್ರೀ ! ಏಳ್ರೀ ! ಬಸ್ ಬಂತು" ಎಂದಾಗಲೇ ಎಚ್ಚರವಾದ್ದು. ಧಡಬಡ ಬಸ್ಸಿನತ್ತ ಓಡಿದೆ. ಕೂತೆ. ಸಾಮಾನುಗಳನ್ನು ಆ ವೇಳೆಗೆ ಸಿಬ್ಬಂದಿಯವರು ಸಾಗಿಸಿದ್ದರು.

# ಇಟಲಿ, ನಮ್ಮ ಕೇರೀನೇ !

ಗೋಧೂಳಿ ಕಾಲ. ಸಂಜೆ 6-6.30ರ ವೇಳೆ. ರೋಮಿನ ವಿಮಾನ ನಿಲ್ದಾಣದಿಂದ ಊರೊಳಗಿರುವ ಹೋಟೆಲ್ ಟೆಟ್ಟಿಯೋನೋಗೆ ಬಸ್ಸಿನಲ್ಲಿ ಹೊರಟೆವು. ಹತ್ತು ಗಾವುದದ ತ್ರ ಹಾದಿಯಲ್ಲಿ ಹಳ್ಳಿ ಕೇರಿಗಳ ಜನರು ಅಲ್ಲಲ್ಲಿ ಕಾಣಿಸಿಕೊಂಡರು. ನಮ್ಮ ತರಹ ಕಪ್ಪು ಕಪ್ಪು ಕೂದಲು. ಹರಕು ಹರಕು ಬಟ್ಟೆ. ಹಳ್ಳಿಗಳ ರಸ್ತೆ ಅಂಚಿನಲ್ಲಿ ಕುಕ್ಕುರುಗಾಲಿನಲ್ಲಿ ಕೂತ 6-8 ವಯಸ್ಸಿನ ಹುಡುಗರು.

ನಮ್ಮ ಕೇರೀನೇ ! ಗ್ರಾಮ ಸಿಂಹಗಳಿಗೆ ಆಹಾರ ಒದಗಿಸಲು ರಸ್ತೆ ಅಂಚಿನಲ್ಲಿ ನಮ್ಮ ಹುಡುಗರು ಕೂತುಕೊಳ್ಳುಲ್ಲವೇ ? ಅದೇ ರೀತಿ ಅಲ್ಲಿ ಕೂಡ. ಆ ತನಕ ಯೂರೋಪಿನ 6-7 ವಾರಗಳ ಪ್ರವಾಸದಲ್ಲಿ ಈ ದೃಶ್ಯವನ್ನೇ ಕಂಡಿರಲಿಲ್ಲ. ಇಟಲಿಯಲ್ಲಿ ಇದನ್ನು ಕಂಡಾಗಲೇ ಅಪ್ಪಾ ! ನಮ್ಮ ಊರಿಗೇ ಬಂದಹಾಗಾಯ್ತು. ಮನೆ ಸೇರಿದ ಹಾಗಾಯ್ತು. ಇಲ್ಲಿ ಎಲ್ಲಿ ಬೇಕಾದರೂ ನಮ್ಮೂರಿನಲ್ಲಿ ಮಾಡುವಂತೆ ಸಂದಿ ಗೊಂದಿಗಳಲ್ಲಿ ದೇಹ ಬಾಧೆಗಳನ್ನು ತೀರಿಸಿಕೊಳ್ಳಬಹುದು ಎಂಬ ಧೈರ್ಯ ಬಂತು. ಎಲ್ಲಿ ಬೇಕಾದರೂ ಸಿಂಬಳ ಸೀನಬಹುದು ಎನ್ನುವ ವಿಶ್ವಾಸ ಹುಟ್ಟಿತು.

ಹೋಟಲನ್ನು ಸೇರಿದಾಗ ಇನ್ನೂ ಕಣ್ಣು ಬೆಳಕಾಗಿತ್ತು. ಹಳೆ ಕಾಲದ ಅರಮನೆಯನ್ನು ಹೋಟಲಾಗಿ ಪರಿವರ್ತಿಸಿದ್ದರು. ತುಸು ಹತ್ತಿರದಲ್ಲೇ ಜ್ಯೂಲಿಯಸ್ ಸೀಸರನ್ನು ಕೊಲೆಗೈದ ಸ್ಥಳ. ಹೋಟಲಿನಲ್ಲಿ ಸಾಮಾನು ಇಳಿಸಿ ಆ ಸ್ಥಳವನ್ನು ನೋಡಲು ಆಸಕ್ತಿ ಇದ್ದ ಇಬ್ಬರು ಮೂವರು ಹೋದೆವು.

ಕೆರೆ ಅಂಗಳ ಇದ್ದ ಹಾಗೆ ಇದೆ ಆ ಸ್ಥಳ. ಕೊಳಚಲು ಪ್ರದೇಶ. ಜ್ಯೂಲಿಯಸ್ ಸೀಸರ್ ಕೊಲೆಯಾದಲ್ಲಿ ಒಂದು ಹಳೆ ಮಂಟಪದ ತರಹ ಶಿಥಿಲವಾದ ಕಟ್ಟಡ ಒಂದಿದೆ. ಸುತ್ತಲೂ ಅಲ್ಲಿ ಇಲ್ಲಿ ಸಣ್ಣ ಗುಹೆಗಳ ತರಹ ಕೊಠಡಿಗಳು. ಭಿಕ್ಷುಕರು ಅಲ್ಲಿ ಇರಬಹುದು ಎನ್ನುವಂತಿದ್ದುವು.

ಜಟ್ಟಂತ ಒಂದು ಧಡೂತಿ ಕರಿ ಬೆಕ್ಕು ಕೊಠಡಿಯೊಂದರಿಂದ ಓಡಿ ಬಂತು. ಅದರ ಹಿಂದೆಯೇ ಗಡವಾ ಬೆಕ್ಕು ಒಂದು ಓಡಿಬಂತು.

ಜತೆ ಜತೆ ಚೀತ್ಕಾರ, ಜೋಡಿ ಜೋಡಿ ಕಿರುಚಾಟ, ಪರಸ್ಪರ ಪರಚಾಟ. ಯಥಾ ಪ್ರಕಾರ ನಮ್ಮ ಕೇರಿಯ ದೃಶ್ಯವೇ ? ಸಂಗಾತಿ ಬೆಕ್ಕುಗಳ ಸಂಗೀತವೇ !

ಜ್ಯೂಲಿಯಸ್ ಸೀಸರ್ ಎಂದರೆ ನನ್ನ ವಾರಿಗೆಯ ವಿದ್ಯಾರ್ಥಿಗಳಿಗೆಲ್ಲ ತುಂಬ ಗೌರವ. ಆತ ಬರವಣಿಗೆಯಲ್ಲಿ ಹೇಗೋ ಹಾಗೆ, ಸಮರದಲ್ಲೂ ಅತಿ ಕೌಶಲ ತೋರಿದವ. ಸಾಮ್ರಾಜ್ಯ ಕಟ್ಟಿದವ. ಭೂಲೋಕದ ನಮಗೆ ತಿಳಿದ ಚರಿತ್ರೆಯಲ್ಲ ಸೀಸರ್, ವಿದ್ಯಾರಣ್ಯ, ವಿನ್‌ಸ್ಟನ್ ಚರ್ಚಿಲ್, ಈ ಮೂವರೇ ಕತ್ತಿಯನ್ನೂ ಲೇಖನಿಯನ್ನೂ ಒಂದೇ ಪ್ರೌಢಿಮೆ ಯಿಂದ ಝಳಪಿಸಿದವರು. ಇಂದಿಗೂ ಆಗಿಂದಾಗ್ಗೆ ಆತನ Commentaries ಅನ್ನು ಓದುತ್ತೇನೆ.

ಅಂತಹವನ ಮರಣ ಮಂಟಪ ಊರ ಮಧ್ಯದಲ್ಲಿ ಶಿಥಿಲವಾಗಿ ಬಿದ್ದಿದೆ. ಬೆಕ್ಕುಗಳ ಕ್ರೀಡಾರಂಗ. ಜೇಬುಗಳ್ಳರ ಕೋಟೆ ಕೊತ್ತಲ. ಆತನನ್ನು ಬೆಂಬಲಿಸಿದ್ದ ಕ್ಲಿಯೋಪಾತ್ರಳ ಸಿನೀಮಾವನ್ನು ನೋಡಿದರೆ ಆತನ ಕಾಲದ ಶ್ರೀಮಂತಿಕೆ ಸೌಭಾಗ್ಯ ಸಂಸ್ಕೃತಿ ಎಲ್ಲವೂ ಕಣ್ಣಿಗೆ ಕಟ್ಟಿದಂತಾಗುತ್ತದೆ. ಆದರೆ ಚರಮ ಸ್ಥಳ ?

ಹೀಗೆಲ್ಲಾ ಅನಿಸಿತು. ಹೋಟಲಿಗೆ ಮರಳಿದೆವು, ಆ ಮಾತು ಈ ಮಾತು ಆಡುತ್ತ. ರಾತ್ರಿ ಎಂಟಕ್ಕೆಲ್ಲಾ ಊಟ ಮುಗಿಯಿತು. ಊರಿನಲ್ಲಿ ಅಡ್ಡಾಡಿ ಬರೋಣ ಒಂದೆರಡು ತಾಸು, ಎಂದು ನಾಲ್ವರು ಹೊರಡಲು ಸಿದ್ಧರಾದೆವು. ಆ ಹೋಟೆಲ್ ಮ್ಯಾನೇಜರ್ ತುಸು ಹಿರಿಯವ. ನಮ್ಮ ಪೆಂಗು ಮುಖಗಳನ್ನು ನೋಡಿ ಏನು ಕರುಣೆ ಉಕ್ಕಿತೋ, ಅವ ಹೇಳಿದ "ನಿಮ್ಮ ಪರ್ಸ್‌ಗಳಲ್ಲಿ ಹಣವಿದ್ದರೆ, ಅದನ್ನು ಹೋಟಲಿನಲ್ಲಿ ಇಟ್ಟು ಹೋಗಿ. ನಿಮ್ಮ ಪ್ಯಾಸ್‌ಪೋರ್ಟ್ ಮತ್ತು ಪರಿಚಯ ಪತ್ರಗಳನ್ನು ಮಾತ್ರ ತೆಗೆದುಕೊಂಡು ಹೋಗಿ. ಈ ಊರಿನಲ್ಲಿ ಬಲು ಚೂಟಿ ಜೇಬುಗಳ್ಳರಿದ್ದಾರೆ. ಯಾವುದೋ ಮಾಯದಲ್ಲಿ ಜೇಬು ಕತ್ತರಿಸುತ್ತಾರೆ. ಆದರೂ ಕದ್ದ ನಂತರ ಪರ್ಸಿನಲ್ಲಿದ್ದ ಹಣವನ್ನು ಲಪಟಾಯಿಸಿ, ಪ್ಯಾಸ್‌ಪೋರ್ಟ್ ಮತ್ತು ಇತರ ವೈಯಕ್ತಿಕ ಕಾಗದಗಳನ್ನು ಅನಾಮಧೇಯವಾಗಿ ಇಂಡಿಯನ್ ರಾಯಭಾರಿ ಕಚೇರಿಗೆ, ಅಂಚೆಯಲ್ಲಿ ಕಳಿಸುತ್ತಾರೆ.

ಹಿಂತಿರುಗಿ ಬಂದಾಗ ಜೇಬು ಖಾಲಿಯಾಗಿದ್ದರೆ ಹೆದರಬೇಡಿ. ನಾಳೆ ಅಥವಾ ನಾಡಿದ್ದು ಇಂಡಿಯನ್ ರಾಯಭಾರಿ ಕಚೇರಿಗೆ ಹೋಗಿ. ನಿಮ್ಮ ಪ್ಯಾಸ್‌ಪೋರ್ಟ್ ಖಂಡಿತ ದೊರೆಯುತ್ತೆ. ನಮ್ಮೂರ ಜೇಬುಗಳ್ಳರಿಗೆ, ನೀತಿ ನಿಯತ್ತು ಇದೆ. ಪ್ರವಾಸಕ್ಕೆ ಬಂದವರ ಹಣ ದೋಚುವುದಕ್ಕೆ ಅವರು ಹಿಂತೆಗೆಯುವುದಿಲ್ಲ. ಆದರೆ ಅವರಿಗೆ ಇತರ ಇನ್ನಾವ ತೊಂದರೆಯನ್ನೂ ಮಾಡುವುದಿಲ್ಲ." ಎಂದು ಎಚ್ಚರಿಕೆ ಕೊಟ್ಟ.

ಎದೆಯ ಮೇಲೆ ನೆಪೋಲಿಯನ್ ಯಾವ ರೀತಿ, ಚಿತ್ರಗಳಲ್ಲಿ ಕೈ ಇಟ್ಟುಕೊಂಡೇ ಇದ್ದ. ಅದೇ ರೀತಿ ನಾನೂ ಎದೆಯ ಮೇಲೆ ಅಂಗಿಯ ಒಳ ಜೇಬಿನಲ್ಲಿದ್ದ ಪರ್ಸಿನ ಮೇಲೆ, ರಕ್ಷಣೆಗಾಗಿ ಕೈಯಿಟ್ಟುಕೊಂಡೇ ಹೊರಟೆ.

ಸಣ್ಣಪುಟ್ಟ ಸಂದಿಗೊಂದಿಗಳು, ಬೆಂಗಳೂರಿನ ಚಿಕ್ಕಪೇಟೆ ದೊಡ್ಡಪೇಟೆ ಸಂದಿಗಳ ತರಹಾನೇ ! 6-8 ಅಡಿ ಅಗಲದ ಸಂದಿಗಳು. ಹಳೇಕಾಲದ ನುಣ್ಣಗೆ ಈಗ ತೇಯ್ದು ಹೋಗಿರುವ ಚಪ್ಪಡಿ ಹಾಸಿದ ಸಂದಿಗಳು. ಹಾದಿಗೇ ತೆರೆಯುವ ಹೆಬ್ಬಾಗಿಲುಗಳಿರುವ ಎರಡೂ ಮೂರು ಅಟ್ಟದ ಮನೆಗಳು. ಗಿಜಿ ಗಿಜಿ, ಗುಜುಗುಜು, ಎಲ್ಲಾ ನಮ್ಮ ಊರಿನ ಹಳೇಪೇಟೆಯ ಮಾದರಿಯೇ.

ಆ ಸಂದು, ಈ ಗೊಂದು ದಾಟಿ, ಹಾದಿಯಲ್ಲಿ ಸಿಕ್ಕ ಇಂಗ್ಲೀಷ್ ಬಲ್ಲ ಒಬ್ಬನಿಂದ ಸಲಹೆ ಪಡೆದು, ಬಸವನ ಕೊಳದಂತಿದ್ದ ಒಂದು ಕೊಳದ ಬಳಿ ಹೋದೆವು. ಅರ್ಧ ಚಂದ್ರಾಕಾರದಲ್ಲಿದೆ ಆ ಕೊಳ. ಹಿಂದೆ ದೊಡ್ಡ ಬಂಡೆಗಳಂತೆ ಗೋಡೆಯನ್ನು ರಚಿಸಿದ್ದಾರೆ. ಆ ಗೋಡೆಯಲ್ಲಿ ಮೂರು ನಾಲ್ಕು ಅಪ್ಸರೆಯರ ವಿಗ್ರಹಗಳಿವೆ. ಅವರ ಬಾಯಿಗಳಿಂದ ನೀರು ಸುರಿದು ಬರುತ್ತದೆ. ಬಂದ ನೀರು ಕೊಳದಲ್ಲಿ ತಿಳಿ ಅಲೆಗಳನ್ನು ಎಬ್ಬಿಸುತ್ತದೆ. ಕೊಳದ ಸುತ್ತಲೂ ದಾರಿಯನ್ನೂ ನಿರ್ಮಿಸಿದ್ದಾನೆ. ದಾರಿಯಿಂದ ಇಳಿದು ಕೊಳದ ನೀರಿನಂಚಿನತ್ತ ಹೋಗಬಹುದು.

ಮೂರು ನಾಣ್ಯಗಳನ್ನು ಆ ಕೊಳಕ್ಕೆ ಎಸೆದು, ಇಷ್ಟಾರ್ಥವನ್ನು ನೆನೆಸಿಕೊಂಡರೆ, ಆ ಇಷ್ಟಾರ್ಥ ಈಡೇರುತ್ತದೆ ಎಂದು ಪ್ರತೀತಿ. ಈ ನಂಬುಗೆಯ ಮೇಲೆ, ಈ ಕೊಳದ ಚಲನಚಿತ್ರವೊಂದನ್ನು ನಿರ್ಮಿಸಿದ್ದಾರೆ. ಹಾಲಿವುಡ್ಡಿನ ಜಾಣರು. ಆ ಜಾಣರ ಇಷ್ಟಾರ್ಥವೇನೋ ಈಡೇರಿತಂತೆ.

ನಾವು ಅಲ್ಲಿಗೆ ಹೋದಾಗ ಪಕ್ಕದಲ್ಲೇ ತರುಣತರುಣಿಯರ ಜೋಡಿ ನಿಂತಿತ್ತು. ಇವರು ಅಮೆರಿಕನ್ನರು ಎಂದು ಸುಲಭವಾಗಿ ಹೇಳಬಹುದಿತ್ತು. ಧಾಂಡಿಗರ ಹಾಗೆ ಬೆಳೆದಿದ್ದರೂ ಅವರ ಬೆರಳುಗಳ ಸುತ್ತ ಉಂಗುರವಿದ್ದಿಲ್ಲ. ಅವನೇನೋ ಎಂಟುಹತ್ತು ಬಾರಿ ಮೂರು ಮೂರು ನಾಣ್ಯಗಳನ್ನು ಕೊಳಕ್ಕೆ ಎಸೆದು, ಕಣ್ಣುಮುಚ್ಚಿಕೊಂಡು ಪ್ರಾರ್ಥಿಸುತ್ತಿದ್ದ. ಆಕೆಯ ಕೈಲೂ ನಾಣ್ಯಗಳನ್ನಿಟ್ಟು ನೀನೂ ನಾಣ್ಯತ್ರಯ ಹಾಕಿ ಪ್ರಾರ್ಥಿಸಿಕೊ ಎಂದ. ಆಕೆಯೂ ಹಾಗೇ ಮಾಡಿದಳು. ಯಾಕೋ ? ಏನೋ ? ಅವ ಹಠಾತ್ತನೆ ಕಣ್ಮರೆಯಾದ. ಇನ್ನೂ ಯಾರೋ ಒಬ್ಬ ಅಮೆರಿಕನ್ ತರುಣ ''ಇಲ್ಲೇ ಇದ್ದೀಯಾ ಎಲ್ಸಿ'' ಅಂತ ಉದ್ಗಾರ ತೆಗೆಯುತ್ತ ಅಲ್ಲಿಗೆ ಬಂದ.

8-10 ಸಾರಿ ಮೂರುಮೂರು ನಾಣ್ಯ ಹಾಕಿದವನ ಇಷ್ಟಾರ್ಥ ಅಂದೇನೂ ಈಡೇರುವಂತೆ ತೋರಲಿಲ್ಲ.

''ಇಂಡಿಯಾನೋ'' ಎಂಬ ಪ್ರಶ್ನೆಯನ್ನು ಯಾರೋ ಕೇಳಿದರು. ತಿರುಗಿ ನೋಡಿದೆ. ಭಾರಿ ಮೀಸೆಯ ಗುಂಗುರು ಕ್ರಾಪಿನ ಇಟಾಲಿಯನ್ ಆ ಪ್ರಶ್ನೆಯನ್ನು ಕೇಳಿದ್ದ.

''ಜೀ ! ಜೀ !'' ಎಂದು ನಾನೂ ಉತ್ತರಿಸಿದೆ.

ಆಮೇಲೆ ಅವ ಹರುಕುಮುರುಕು ಇಂಗ್ಲೀಷಿನಲ್ಲಿ ಮಾತನಾಡಲಾರಂಭಿಸಿದ.

''ಮೂರು ನಾಣ್ಯ ಹಾಕಿ, ಪ್ರಾರ್ಥಿಸಲಿಲ್ಲ ನೀವು ಏಕೆ'' ಎಂದ.

''ನನ್ನ ಪ್ರಾರ್ಥನೆ ಈಡೇರುವ ಹಾಗಿಲ್ಲ'' ಎಂದೆ.

''ಯಾಕೆ ? ಅಂತಹ ಪ್ರಾರ್ಥನೆ ಏನು ?'' ಎಂದ.

''ಸುಮಾರು ಅರ್ಧ ತಾಸಿನಿಂದ ಬಂದು ಹೋದ ಪುಷ್ಪ ಧರಿಸಿದ ಪುಷ್ಪವತಿಯರನ್ನು ಮತ್ತು ಅವರ ಜತೆಯನ್ನು ನೋಡುತ್ತಿದ್ದೇನೆ. ಏನಿಲ್ಲ ಅಂದರೂ ಈ ಕೊಳದಲ್ಲಿ ಈ ಹೊತ್ತಿಗೆ ಮಂತ್ರಿಗಳಿಗೆ ಕೊಡಬಹುದಾದಷ್ಟು ಲಂಚದ ಮೊತ್ತ ಬಿದ್ದಿರುತ್ತದೆ. ಆ ನಾಣ್ಯಗಳನ್ನೆಲ್ಲಾ ಲಪಟಾಯಿಸಬೇಕು ಎಂದು ನನ್ನ ಆಸೆ. ಆದರೆ ಅದು ಈಡೇರುವಂತಿಲ್ಲ'' ಎಂದೆ.

''ಯಾಕೆ ಈಡೇರುಲ್ಲ'' ಎಂದ.

''ನನಗೆ ಈಜು ಬರುಲ್ಲ. ಅಲ್ಲದೆ ಈ ಕೊಳದೊಳಕ್ಕೆ ಯಾರೂ ಇಳಿಯಬಾರದು ಅಂತ ಎಚ್ಚರಿಕೆ ಬೋರ್ಡ್ ಹಾಕಿದ್ದಾರೆ. ಕೊಳದಲ್ಲಿ ಸಂಗ್ರಹವಾದ ಹಣವನ್ನೆಲ್ಲಾ ಪೌರಸಭೆ ಲಪಟಾಯಿಸುತ್ತೆ ಎಂದು ಈಗತಾನೆ ಯಾರೋ ಹೇಳಿದರು. ಅದಕ್ಕೇ'' ಎಂದು ರಾಗ ತೆಗೆದೆ.

''ದಿಟ ! ದಿಟ ! ನೀವು ಹೇಳಿದ್ದು'' ಅಂದ ಅವ.

ಗ್ರಾಸಿ ಗ್ರಾಸಿ ಅಂತ ವಂದನೆ ಸಲ್ಲಿಸಿ. ಇಟಾಲಿಯನ್ನರ ತರಹ ತಬ್ಬಿಕೊಂಡು ಮುತ್ತುಕೊಟ್ಟು ಹೊರಟು ಹೋದ.

ನಾವು ನಾಲ್ವರಿದ್ದೆವಲ್ಲ ! ಅವರಲ್ಲಿ ಒಬ್ಬ ಹಠಾತ್ತನೆ ಒಂದೊಂದಾಗಿ ಮೂರು ನಾಣ್ಯಗಳನ್ನು ಕೊಳಕ್ಕೆ ಎಸೆದು ಕಣ್ಣು ಮುಚ್ಚಿಕೊಂಡ.

ಆಶ್ಚರ್ಯವಾಯಿತು ನನಗೆ. ''ಪುಡಿಗಾಸು ಇರೋದು ನಮ್ಮ ಬಳಿ. ಅದನ್ನೂ ಕಳೆದುಕೊಂಡು ಏನು ಬೇಡಿಕೊಂಡೆಯೋ ?'' ಎಂದೆ.

ನನಗೂ ಸ್ವಲ್ಪ ಅನುಮಾನ. ತೆಳ್ಳಗೆ ಬೆಳ್ಳಗೆ ಇದ್ದ ಯುವಕ ಡಾಕ್ಟರ್ ಅವ. ಬಾಲ್‌ರೂಂಡ್ಯಾನ್ಸ್ ಕಲಿತಿದ್ದ ಸ್ಫುರದ್ರೂಪಿ. ಮನೆ ಹೆಂಡತಿ ಊರು ಬಿಟ್ಟು ಬಂದು ಸುಮಾರು ರಾತ್ರಿಗಳಾಗಿತ್ತು. ಏನು ಬೇಡಿಕೊಂಡ ಈಗ ? ಎಂದು.

"ಮನೆಯಿಂದ ತಂದಿದ್ದ ಚಟ್ನಿಪುಡಿ ಮುಗಿದು ಮೂರುದಿನ ಆಯ್ತು. ಊರಿಗೆ ತುರ್ತುಕಾಗದವನ್ನು ವಿಮಾನದ ಮೂಲಕ ಕಳಿಸೀನಿ. ಜ್ಯೂರಿಕ್‌ಇಗೆ ಇಂತಹ ತೇದಿಗಳಲ್ಲಿ, ರೋಮ್‌ಇಗೆ ಈ ತಾರೀಖಿನಲ್ಲಿ ತಲುಪುವ ಹಾಗೆ ಆದಷ್ಟು ಚಟ್ನಿಪುಡಿ ಕಳಿಸಿ. ಮರೆಯದೆ ಕಳಿಸಿ ಅಂತ. ಜ್ಯೂರಿಕ್‌ನಲ್ಲಿ ದಿನಾಲೂ ಅಂಚೆ ಕಚೇರಿಗೆ ಹೋದೆ. ಏನೂ ಬರಲಿಲ್ಲ. ಇಲ್ಲಾದರೂ ಬಂದರೆ, ಇನ್ನೆರಡು ದಿನ ಜೀವ ಹಿಡಕೊಂಡು ಇರಬಹುದು. ನಾಲಿಗೆ ಮೇಲೆಲ್ಲಾ ದೋಷಕಟ್ಟಿದ ಹಾಗಾಗಿದೆ. ಬೇಗ ಚಟ್ನಿಪುಡಿ ಬರದೆ ಇದ್ದರೆ. ಈ ಹಾಳು ಊಟ ತಿಂಡಿ ಮಾಡಲೇಬೇಕಾದರೆ ಘಟ ಇಲ್ಲೇ ಬಿದ್ದುಹೋಗಬಹುದು ಎನ್ನಿಸುತ್ತೆ" ಎಂದ.

"ಅಯ್ಯೋ ಪಾಪ ! ಹಾಗೇನೋ ? ನಿನ್ನ ಇಷ್ಟಾರ್ಥ ಈಡೇರಲಿ. ನಿನ್ನ ಸಂಗಾನೇ ಇರ್ತೀನಿ. ಚಟ್ನಿಪುಡಿ ಬಂತು ಅಂತ ನನ್ನ ಸಂಗ ಬಿಡಬೇಡ" ಎಂದು ಅಂಗಲಾಚಿಕೊಂಡೆ.

ಆ ಕಾರಂಜಿಯ ಬಳಿ ಇದ್ದ ಚರ್ಚಿನ ಗಡಿಯಾರ ಹತ್ತು ಬಡಿಯಿತು. ನಾಲ್ವರೂ ಹೋಟಲಿಗೆ ಹಿಂತಿರುಗಿದೆವು. ಅವರನ್ನ ಇವರನ್ನ ಕೇಳಿ ರಸ್ತೆ ತಿಳಿದುಕೊಂಡು ಹಿಂತಿರುಗಲು ಅರ್ಧ ತಾಸಾಗಿತ್ತು.

ಮಲಗುವ ಮುನ್ನ ಅಂಗಿ ಬಿಚ್ಚಿಡುವಾಗ ನೋಡಿಕೊಂಡೆ. ನನ್ನ ಪರ್ಸ್ ಸುರಕ್ಷಿತವಾಗಿತ್ತು. ನೆಪೋಲಿಯನ್ ಹಸ್ತ ಅದನ್ನು ಕಾಪಾಡಿತ್ತು. ಆದರೆ ನನ್ನ ಎಡಮೇಲ್ ಜೇಬಿನಲ್ಲಿದ್ದ ರೇಷ್ಮೆ ಕರವಸ್ತ್ರ ಮತ್ತು ಪಾರ್ಕರ್ ಪೆನ್ ಎರಡೂ ಮಾಯವಾಗಿದ್ದುವು.

ಭಾರಿ ಮೀಸೆಯ ಗುಂಗುರು ಕೂದಲಿನ "ಇಂಡಿಯಾನೋ " ಎಂದ ಆ ಇಟಾಲಿಯನ್ ತಬ್ಬಿಕೊಂಡು ಮುತ್ತುಕೊಟ್ಟ ನೆನಪಾಯಿತು. ಗಂಡು ಗಂಡಸಿಗೆ ಮುತ್ತು ಕೊಟ್ಟರೂ ಜೇಬು ಖಾಲಿಯಾಗುತ್ತೆ ಎಂದು ಆಗಲೇ ನನಗೆ ತಿಳಿದಿದ್ದು.

ಮಲಗುವ ಮುಂಚೆ, ಬಾಗಿಲು ಕಿಟಕಿಗಳು ಭದ್ರವಾಗಿವೆ ಎಂದು ಖಾತರಿ ಮಾಡಿಕೊಳ್ಳುವುದು ಅಭ್ಯಾಸ. ಬಾಗಿಲು ಜಡಿದಿತ್ತು. ಕಿಟಕಿಗಳು ತೆರೆದಿದ್ದುವು ಕಂಬಿಗಳಿದ್ದಿಲ್ಲ. ಆದರೆ ಐದನೆ ಅಂತಸ್ತಿನಲ್ಲಿತ್ತು, ನನ್ನ ಕೊಠಡಿ. ಯಾವ ಕಳ್ಳ ಇಷ್ಟು ಎತ್ತರ ಹತ್ತಿ ಬರುತ್ತಾನೆ ಎಂದು ಧೈರ್ಯ ಬಂತು, ಆದರೂ ಅಭ್ಯಾಸ ಬಲದಮೇಲೆ ಕಿಟಕಿಯಾಚೆ ಕಣ್ಣುಹಾಯಿಸಿದೆ. ಅಲ್ಲೊಂದು ಪುಟ್ಟ ಮೊಗಸಾಲೆ ಇತ್ತು. ಹಳೆ ಅರಮನೆಗಳ ಮಹಡಿ ಕಿಟಕಿಗಳಿಗೆ ಇರುಲ್ಲವೇ ಆ ತರಹ. ಪಕ್ಕದ ಕೊಠಡಿಯ ಮೊಗಸಾಲೆಯೂ ಈ ಮೊಗಸಾಲೆಯೂ ಹೆಜ್ಜೆ ಅಂತರ ಮಾತ್ರ ದೂರವಾಗಿದ್ದುವು. ಪಕ್ಕದ ಕೊಠಡಿಯಲ್ಲಿ ಕಳ್ಳ ಇದ್ದರೆ ? ಕಳ್ಳಿ ಇದ್ದರ ಇನ್ನೂ ತಾಪತ್ರಯ ಎಂದು ತೋಚಿತು. ಬೇಗ ಕಿಟಕಿಯನ್ನು ಮುಚ್ಚಿದೆ. ಹಳೇಕಾಲದಲ್ಲಿ ಅರಮನೆಯ ವಾತಾವರಣದಲ್ಲಿ ಈ ಸೌಕರ್ಯಗಳಿರಬೇಕಾದದ್ದು ನ್ಯಾಯ. ಆದರೆ ಈಗ ? ಅದೂ ಮುದುಕನಿಗೆ ?

ಗಾಳಿ ಇಲ್ಲದೇ ಇದ್ದರೂ, ಸುರಕ್ಷಿತವಾಗಿದ್ದರೆ ಸಾಕು ಎಂದು ರಾಮ ಸ್ಕಂದ ಹೇಳಿ ಮಲಗಿದೆ.

ಮಾರನೆಯ ಬೆಳಿಗ್ಗೆ ಬೇಗ ಹೊರಡಬೇಕಾಗಿತ್ತು. ಅದಕ್ಕೇ ಏನನ್ನೂ ಓದಲು ತೊಡಗಲಿಲ್ಲ.

## "ನೇಪಲ್ಸ್"

ಮಂಗಳವಾರ ನಮ್ಮೂರಿನಲ್ಲಿ ಹಜಾಮರಿಗೆ ರಜ. ಆದರೆ ಇಟಲಿಯಲ್ಲಿ ಮಂಗಳವಾರ ಅಂತ ಹಜಾಮಿತಿ ಮಾಡುಕ್ಕೆ ಹಿಂತೆಗೆಯುವುದಿಲ್ಲ. ಬೇಗ ಅಂದರೆ ಉಷಃಕಾಲ 6ಕ್ಕೆ ತಲೆಮಾಡಿಸಿಕೊಂಡು, ಮಂಗಳಸ್ನಾನ ಮಾಡಿ, ಹೊರಗೆ ಹೊರಡುವಾಗ 7 ಗಂಟೆಯಾಗಿತ್ತು. ರಸ್ತೆ ಗುಡಿಸುವವರೂ ಕೂಡ ಕೆಲಸಕ್ಕೆ ಇಳಿದಿತ್ತಿಲ್ಲ. ಆ ಹೊತ್ತಿಗಾಗಲೇ ಬಸ್ ಸಿದ್ಧವಾಗಿತ್ತು ; ನಮ್ಮ ಹಿಂಡನ್ನು ನೇಪಲ್ಸ್‌ಇಗೆ ಸಾಗಿಸಲು.

ನಾವು ಹುಡುಗರಾಗಿದ್ದಾಗ ಎ.ವಿ. ಸ್ಕೂಲು ಅಂತ ಒಂದಿತ್ತು. ಆಂಗ್ಲೊ-ವರ್ನಾಕುಲರ್ ಸ್ಕೂಲ್ ಅಂತ. ಇಂಗ್ಲೀಷನ್ನು ತಕ್ಕಮಟ್ಟಿಗೆ ಬಿಗಿಯಾಗಿ ಕಲಿಸುತ್ತಿದ್ದರು. ಒಂದು ಪಾಠದಲ್ಲಿ "ನೇಪಲ್ಸ್ ಪಟ್ಟಣವನ್ನು ನೋಡಿ ಸಾಯಿ" ಎಂಬ ತೀರ್ಮಾನವಿತ್ತು. ಅಂತಹ ಸುಂದರ ನಗರ. ಅದನ್ನು ನೋಡುವುದೇ ಜೀವನದ ಹಿರಿಯ ಧ್ಯೇಯವಾಗಿರಬೇಕು. ಅದು ನೋಡುವ ತನಕ ಜೀವನವನ್ನು ಭದ್ರವಾಗಿ ಹಿಡಿದಿಟ್ಟುಕೊಂಡಿರಬೇಕು. ನಂತರ ಸತ್ತರೂ ಚಿಂತೆ ಇಲ್ಲ ಎಂದೆಲ್ಲಾ ನಮ್ಮ ಮಾಸ್ತರು ರಸವತ್ತಾಗಿ ಬಣ್ಣಿಸಿದ್ದರು. ಬಾಲ್ಯದಲ್ಲಿ ಏನೋ ಒಂದು ಆಸೆ ಇತ್ತು ; ಹೇಗಾದರೂ ಮಾಡಿ ಯೂರೋಪ್ ಖಂಡವನ್ನು ನೋಡಬೇಕು. ಆಗ ನೇಪಲ್ಸ್ ಪಟ್ಟಣದಲ್ಲಿ ಎರಡು ದಿನ ಇದ್ದು ಸಂತಸಪಡಬೇಕು ಅಂತ. ಆದರೆ ಜೀವನದ ಹೋರಾಟದಲ್ಲಿ ತೊಡಗಿದಾಗ, ಇದ್ದ ಊರಲ್ಲೇ ಕಾಲುಭದ್ರ ಆಗುವ ಹಾಗಾದರೆ ಸಾಕು, ಬೇರೆ ಊರ ಸ್ಮಶಾನದ ಯೋಚನೆ ಯಾಕೆ ? ಎಂದೆನಿಸಿತ್ತು. ಈಗ ಗತ್ಯಾಗತ್ಯಾ ಈ ಪಟ್ಟಣ ನೋಡುವ ಯೋಗ ಒದಗಿತ್ತು. ಸುಯೋಗ ಎಂದು ಹೇಳಲಾರೆ. ಏಕೆಂದರೆ ಅಂತಹ ಉತ್ಸಾಹದ ವಯಸ್ಸು ಮೀರಿ ಹೋಗಿತ್ತು.

ಆದರೂ ಇದ್ದುಬದ್ದುದರಲ್ಲಿ ಮಾಸ್ತರು ವರ್ಣಿಸಿದ್ದುದನ್ನು ಜ್ಞಾಪಿಸಿಕೊಳ್ಳಲು ಯತ್ನಿಸಿದೆ. ಏನೊಂದೂ ನೆನಪಾಗಲಿಲ್ಲ. ಹಾಳಾಗಿ ಹೋಗಲಿ, ತೆರೆದ ಮನಸ್ಸಿನಿಂದ ನೋಡುವುದೇ ಚೆನ್ನ ಎಂದು ಸಮಾಧಾನ ಮಾಡಿಕೊಂಡೆ.

ಬಸ್ ಹೊರಟಿತು. ಇಟಲಿಯ ಮಾರ್ಗದರ್ಶಕನೊಬ್ಬ ನಮ್ಮ ಜತೆಗೆ ಬಂದಿದ್ದ. ಬಲ
ಜಾಣ ; ವಾಗ್ಮಿ. ಒಂದೊಂದು ಹಳ್ಳಿಯ ಸ್ಥಳಪುರಾಣವನ್ನೂ ರಮ್ಯವಾಗಿ ಹೇಳುತ್ತಿದ್ದ
ವಿಸೂವಿಯಸ್ ಜ್ವಾಲಾಮುಖಿ ಒಂದು ಪಕ್ಕದಲ್ಲಿ ಕಾಣುತ್ತಿತ್ತು. 'ನೋಡಿ, ಆ ಬಂಡೆಯ
ಬದಿಯಲ್ಲೇ Circeಗಳು ತಮ್ಮ ಗಂಧರ್ವ ಗಾನ ಹಾಡಿ ನಾವಿಕರನ್ನು ಬಲೆಗ
ಬೀಳಿಸುತ್ತಿದ್ದರು.' ಇತ್ಯಾದಿ ಆ ಊರಿನ ಜಾನಪದ ಕತೆಗಳನ್ನೂ ಹೇಳಿದ. ನಾವೆಲ್ಲಾ ಇಂಗ್ಲೀಷ
ಅನ್ನೂ ಬಾಲ್ಯದಿಂದಲೂ ಕಲಿತವರಲ್ಲವೇ ? ಇಟಾಲಿಯನ್ನರ ಜಾನಪದ ಕತೆಗಳು, ಅವರಿಗ
ಎಷ್ಟೋ ಅಷ್ಟು ನಮಗೂ ತಿಳಿದಿತ್ತು. ನಮ್ಮೂರಿನ ಜಾನಪದ ಕತೆಗಳು ನಮಗೆ ತಿಳಿದಿರಲಿಲ್ಲ
ದಿಟ. ಏಕೆಂದರೆ ಯೂರೋಪಿಯನ್ನರಾರೂ ನಮಗೆ ಅವನ್ನು ಇಂಗ್ಲೀಷಿನಲ್ಲಿ ಕಲಿಸಿರಲಿಲ್ಲ
ಭಾಷಾ ತ್ರಿಶಂಕುಗಳಂತಿದ್ದ ನಮ್ಮ ರೋಮನ್ ಜಾನಪದ ಜ್ಞಾನವನ್ನು ಕಂಡು,
ಇಟಾಲಿಯನ್ ಮಾರ್ಗದರ್ಶಕ, ಬೆರಳು ಕಚ್ಚಿಕೊಂಡ.

ಹಾದಿಯಲ್ಲಿ ಬಲಪಕ್ಕದಲ್ಲಿ ಹಚ್ಚಹಸುರಿನ ಗದ್ದೆಗಳಿದ್ದುವು. "ನೋಡಿ ಇಲ್ಲೆಲ್ಲಾ
ಮೊದಲು ಜೌಗು ಕಟ್ಟಿಕೊಂಡು ಮಲೇರಿಯಾ ಹರಡಿ, ಮೈಲು ಮೈಲುಗಟ್ಟಲೆ
ಹಾಳುಕೊಂಪೆಯಾಗಿತ್ತು. ಇಲ್‌ಡೂಚೆ ಅಧಿಕಾರಕ್ಕೆ ಬಂದಾಗ ಇಲ್ಲಿ ನಿಲ್ಲುವ ನೀರನ್ನು
ಹರಿಯುವಂತೆ ಮಾಡಿ, ಮಲೇರಿಯಾ ಪಿಡುಗನ್ನೂ ನಿರ್ನಾಮ ಮಾಡಿ, ಫಲವತ್ತಾದ
ಜಮೀನನ್ನು ಮಾಡಿದ" ಎಂದು ಹೇಳಿದ.

"ಇಲ್‌ಡೂಚೆ" ಅಂದರೆ ಮಸ್ಸಲಿನಿ ; ಅವನೂ ಮತ್ತು ಹಿಟ್ಲರ್ ಇಬ್ಬರೂ ಹೈರಾವಣ
ಮೈರಾವಣರಂತೆ ಯೂರೋಪಿನಲ್ಲೆಲ್ಲಾ ದಾಂಧಲೆ ನಡೆಸಿ ವಿಶ್ವದ ಎರಡನೇ ಮಹಾಯುದ್ಧ
ವನ್ನು ನಡೆಸಿದರು. ಈ ರಾಕ್ಷಸರಿಗೆ ಈ ಶಕ್ತಿ ಮತ್ತು ಬೆಂಬಲ ಹೇಗೆ ಬಂತು ಎಂದು
ಅಚ್ಚರಿಪಡುತ್ತಿದ್ದೆ. ಈಗ ಅರ್ಥವಾಯಿತು. ತನ್ನ ದೇಶವನ್ನು ಸಾಕಷ್ಟು ಉದ್ಧಾರ ಮಾಡಿದ
ಶ್ರೀಸಾಮಾನ್ಯನ ಜೀವನವನ್ನು ಬೆಳಗಿದ. ನಂತರ ಇಷ್ಟೆಲ್ಲಾ ಮಾಡಿದೆ ಎಂಬ ಅಹಂಕಾರ
ಮೆಟ್ಟಿಕೊಂಡಿತು. ಶ್ರೀಸಾಮಾನ್ಯನು ಬೆಂಬಲವನ್ನು ಕೊಡುವುದು ಸಹಜವಾಗಿತ್ತು, ಅವನಿಗ
ಒಳ್ಳೆಯದಾಗಿತ್ತಿಲ್ಲವೇ ? ಇಲ್‌ಡ್ಯೂಚೆಗೆ ಅಹಂಕಾರ ಮೆಟ್ಟಿರುವುದು ಶ್ರೀಸಾಮಾನ್ಯನಿಗೆ ಹೇಗ
ಗೊತ್ತಾಗಬೇಕು ? ಅಹಂಕಾರ ಮೆಟ್ಟಿಕೊಂಡ ಮೇಲೆ ಮಸ್ಸಲಿನಿ ತಾನು ಹಾಳಾದುದಲ್ಲದ
ವನವನ್ನೆಲ್ಲಾ ಹಾಳು ಮಾಡಿಯೇ ಹೋದ. ಇದೆಲ್ಲವೂ ಅರ್ಥವಾಯಿತು.

ನಮ್ಮ ದೇಶದ ಪಾಡೂ ಹೀಗೆಯೇ ಆಗುತ್ತೇನೋ ಎಂಬ ಸಂಶಯವೂ ಮೂಡಿಬಂತು.
ಹಾಗಂತ ಬಹಿರಂಗವಾಗಿ ಹೇಳಿದರೆ, ನಮ್ಮ ದೇಶದ ಬಾಂಧವರು ನನ್ನನ್ನು ಚಚ್ಚಿಟ್ಟು ಬಿಡ್ತಾರೆ, ಎಂಬ
ಅರಿವೂ ಮೂಡಿತು. ಮನಸ್ಸಿನಲ್ಲೇ ನೊಂದುಕೊಂಡು, ಭಗವಂತನ ಈ ಲೀಲೆಯನ್ನು ತುಸು ಅರಿತೆ.

ಹೆದ್ದಾರಿಯ ಬಳಿಯಲ್ಲಿದ್ದ ಫಲಾಹಾರ ಮಂದಿರಕ್ಕೆ "ನಾಷ್ಟಾ" ಕೊಡಿಸಲು
ಕರೆದೊಯ್ದರು. "ಹಳ್ಳಿ ಕಡೆ ಹೋಟೆಲು ! ಶುಚಿಯಾಗಿರುತ್ತೋ ಇಲ್ಲವೋ ? ಇಲ್ಲಿ ತಿಂದರ
ಮುಂದೆ ಕಾಯಿಲೆ ಬಿದ್ದರೆ ಹೇಗಪ್ಪಾ ?" ಎಂದು ಹೆದರಿಕೊಂಡೇ ಹೋದೆ. ಹೆದ್ದಾರಿಯಿಂದ

ಸುಮಾರು 100 ಗಜ ತೋಟದ ಮಧ್ಯೆ ನಡೆದು ಹೋದೆವು. ಅಲ್ಲೊಂದು ಚಿಕ್ಕದಾದರೂ ಚೊಕ್ಕಟವಾದ ವಿಶಾಲ ಅಂಗಳವಿದ್ದ, ಚಿತ್ರದ ತರಹ ಕಾಣುತ್ತಿದ್ದ ಹೋಟಲು. ಸುಮಾರು 15-20 ಭಾರಿ ಮೋಟಾರುಗಳು ಮುಂದಿನ ಮೈದಾನದಲ್ಲಿದ್ದುವು. ಅಂಗಳದ ಅರ್ಧವೆಲ್ಲಾ ಅಮೆರಿಕನ್ನರಿಂದ ತುಂಬಿತ್ತು. ಕಾರುಗಳಲ್ಲಿ ಇಟಾಲಿ ಪ್ರವಾಸ ಮಾಡುತ್ತಿದ್ದ ಅಮೆರಿಕನ್ನರು. ಒಬ್ಬ ಅಮೆರಿಕನ್ ಒಂದು ದಿನ ಒಂದು ಹೋಟಲಲ್ಲಿ ಇಳಿದುಕೊಂಡರೆ, ಆ ಹೋಟಲಿನವರು ಒಂದು ವಾರದ ಖರ್ಚನ್ನು ಎಬ್ಬಿಸುತ್ತಾರೆ. ಒಂದು ವಾರ ಮೂರು ಅಮೆರಿಕನ್ನರು, ಅವರಲ್ಲಿ ಒಂದು ಹೆಣ್ಣು ಇರಬೇಕು, ಹಾಗೆ ಹೋಟಲಲ್ಲಿ ಇದ್ದರೆ, ತಿಂಗಳ ಖರ್ಚು ಹುಟ್ಟುತ್ತದೆ, ಎಂದು ಅಲ್ಲಿಯ ಹೋಟಲಿನವರ ಅಂದಾಜಂತೆ. ಅಂದಮೇಲೆ ಅಷ್ಟು ಜನ ಅಮೆರಿಕನ್ನರು ಇದ್ರೆ, ಹೋಟಲು ಯಾಕೆ ಬಡವಾಗಿರುತ್ತೆ ? ರುಚಿಯಾಗಿತ್ತು ಹೋಟಲು, ರುಚಿಯಾಗಿತ್ತು, ಫಲಾಹಾರ, ಲೊಟ್ಟೆ ಹೊಡೆದೆವು ಕಾಫಿ ಕುಡಿದು, ಖರ್ಚೆಲ್ಲಾ 'ಲಿ ಪಟಿಟ್'ರವರದು. ಅವರಿಗಾದರೂ ಈ ಖರ್ಚು, ವರಮಾನ ತೆರಿಗೆಯಿಂದ ಮನ್ನಾ ಪಡೆಯುತ್ತದೆ. ಅಂದಮೇಲೆ ಯಾರಿಗೂ ದುಃಖವಿಲ್ಲ.

ಪ್ರವಾಸಿಗರಿಂದಲೇ ಐಶ್ವರ್ಯವಂತರಾಗುವ ದೇಶಗಳಲ್ಲಿ ಇಟಾಲಿಯೂ ತನ್ನ ಹಕ್ಕನ್ನು ಬಿಟ್ಟುಕೊಟ್ಟಿಲ್ಲ. ಅಲ್ಲಿರುವಂತೆಯೇ ನಮ್ಮಲ್ಲೂ ಪುರಾತನ ದೇವಾಲಯಗಳಿವೆ. ಚಿತ್ರಕಲೆಯಿದೆ. ಆದರೆ ಉಳಿದುಕೊಳ್ಳಲು, ಹಾವು ಚೇಳು ಇಲ್ಲದ ಪ್ರವಾಸಿಮಂದಿರಗಳಿಲ್ಲ. ಹೋಗಿಬರಲು ವಾಹನ ಸೌಕರ್ಯ ಇದ್ದರೂ ರಸ್ತೆಗಳು ಸುಖವಿಲ್ಲ. ಇವನ್ನು ಸರಿಪಡಿಸಿಕೊಂಡರೆ ನಾವೂ ಪ್ರವಾಸಿಗರನ್ನು ಆಕರ್ಷಿಸಿ, ಅವರ ಜೇಬಿಗೆ ಕೈ ಇಳಿಬಿಡಬಹುದು ಎಂದನ್ನಿಸಿತು.

"ನಾಷ್ಟಾ" ಮುಗಿಸಿಕೊಂಡು ಹೊರಟೆವು. ನೇಪಲ್ಸ್ ಪಟ್ಟಣವನ್ನು ಹಾದು ಹೋಗಬೇಕು. ದಿಟವಾಗಲೂ ನೇಪಲ್ಸ್ ಸೌಭಾಗ್ಯ ನಗರ.

ನಗರವನ್ನು ಹಾದು ಹೋದೆವು, ದಿಟ. ಅಲ್ಲಿ ಇದ್ದು ನಗರವನ್ನು ನೋಡಲಿಲ್ಲ, ಒಳ್ಳೆಯದೇ ಆಯಿತೇನೋ ? ಅಲ್ಲಿ ಇದ್ದು ಅಡ್ಡಾಡಿದ್ದರೆ, ಬಡತನದ ಕೊಂಪೆಗಳನ್ನು ಕಾಣುತ್ತಿದ್ದೆವೇನೋ ? ಕೊಚ್ಚೆ ಕಲ್ಮಶ ತುಂಬಿದ ಸಂದಿಗಳನ್ನು ನೋಡುತ್ತಿದ್ದೆವೇನೋ ? ಕೂಲಿನಾಲಿಗಳನ್ನು ಮರುಕದಿಂದ ನೋಡಬೇಕಾಗುತ್ತಿತ್ತೇನೋ ?

ಕೃಷ್ಣನೀಲಿ ಬಣ್ಣದ ಕಡಲಿನ ಸುತ್ತ, ಕುದುರೆಯ ಗೊರಸಿನಂತೆ ವರ್ತುಳಾಕಾರದಲ್ಲಿ ನೇಪಲ್ಸ್ ಪಟ್ಟಣ ಬೆಳೆದು ಬಂದಿದೆ. ಕಡಲ ತೀರದಲ್ಲೇ ಹೆದ್ದಾರಿ. ವಿಶಾಲವಾದ ಹೆದ್ದಾರಿ. ಎಡಗಡೆಗೆ ಸೊಗಸಾದ, ವೈವಿಧ್ಯತೆಯನ್ನು ಮೆರೆಸುವ ಭವ್ಯ ಕಟ್ಟಡಗಳು. ಶೃಂಗರಿಸಲ್ಪಟ್ಟ ಅಂಗಡಿಗಳ ತೋರು ಕಿಟಕಿಗಳು. ವಿಧ ವಿಧ ಉಡಿಗೆ ತೊಡಿಗೆಗಳ ಜನ. ಬಲಗಡೆಗೆ ಕಡಲು. ನೀಲಿಗಡಲು. ವಿಧ ವಿಧವಾದ ಹಡಗುಗಳು, ದೋಣಿಗಳು, ಒಂದೊಂದಕ್ಕೂ ಒಂದೊಂದು ರೀತಿಯ ಅಲಂಕಾರ. ದಿಗಂತದಲ್ಲಿ ಬೆಟ್ಟಗಳ ಸಾಲು. "ವಿಸೂವಿಯಸ್ ಅಲ್ಲಿದೆ ನೋಡಿ"

ಎಂದು ಮಾರ್ಗದರ್ಶಕ ಬೆರಳು ನಿಮಿರಿ ತೋರಿಸಿದ. "ಆ ಬಂಡೆಗಳನ್ನು ನೋಡಿ, ಅಲ್ಲಿಯೇ ಸರ್ಕಿ, ಸೈರನ್‌ನರ್ ತಮ್ಮ ತಮ್ಮ ಮನ ಸೆಳೆವ ಗಾಯನದಿಂದ ನಾವಿಕರನ್ನೂ ಸೆಳೆದು ಬುಟ್ಟಿಗೆ ಹಾಕಿ ಕೊಳ್ಳುತ್ತಾರೆ" ಎಂದು ಬಂಡೆಗಳನ್ನು ಮಾರ್ಗದರ್ಶಕ ತೋರಿಸಿದ.

ಆ ಬೆಳಿಗ್ಗೆ ಗಾಳಿ ಹಗೂರಾಗಿ ಬೀಸುತ್ತಿತ್ತು. ದೋಣಿಗಳ ಮೇಲಿನ ಬಾವುಟ ಸಾಲುಗಳು ನಲಿದಾಡುತ್ತಿದ್ದುವು. ಕುಣಿಯುತ್ತಿರಲಿಲ್ಲ. ಅಂದ ಮೇಲೆ ಸಮುದ್ರವು ಅಲ್ಲೋಲ್ಲೋಡುತ್ತಿತ್ತೇ ಏನಹಾ, ದುರ್ಗಿಯನ್ನು ಪೂಜಿಸ ಹೊರಟಿರಲಿಲ್ಲ. ಕಣ್ಣುಗಳಿಗೆ ತಂಪಾಗಿದ್ದ, ಮನಕ್ಕೆ ಇಂಪಾಗಿದ್ದ ಆ ಕಡಲ ನೋಟ ಸೈರನ್‌ನರ ಗಾಯನದಂತೆ, ನನ್ನನ್ನು ಬುಟ್ಟಿಗೆ ಹಾಕಿಕೊಂಡಿತು.

ಮೆಲ್ಲಗೆ ಹೋಗುತ್ತಿದ್ದ ಬಸ್ಸನ್ನು ಮೂರು ರಸ್ತೆ ಸೇರುವ ಒಂದು ಕಡೆಯಲ್ಲಿ ನಿಲ್ಲಿಸಿದರು. ಹತ್ತು ನಿಮಿಷ ವಿರಾಮಕ್ಕಾಗಿ. ಕಾಲುಗಳನ್ನು ಆಡಿಸಿ ಸಡಿಲ ಮಾಡಿಕೊಳ್ಳಲು ಹಾಗೂ ಬಸ್ಸಿನ ಆರೈಕೆ ಮಾಡಲು. ಅದಕ್ಕೂ ಎಣ್ಣೆ ಬೆಣ್ಣೆ ಮಾಡದೆ ಇದ್ದರೆ ಸುಮ್ಮನಿರುತ್ತ್ಯೇ ?

ಆ ತ್ರಿಸಂಧಿಯ ಕಡಲಂಚಿನಲ್ಲಿ ಒಬ್ಬ ಮುದುಕ ನಿಂತಿದ್ದ. ತುಸು ಕೆಂಚು ಗಡ್ಡದ ಸುಮಾರು ಮುದುಕ. ಯಾವುದೋ ಗುಡ್ಡಗಾಡು ಜನಾಂಗದವರ ಉಡಿಗೆ ತೊಡಿಗೆ, ಹಾಗೂ ಹ್ಯಾಟ್. ಹ್ಯಾಟ್ ಅನ್ನಬಹುದೇ ? ನೀಳ್ ಟೋಪಿ ಅನ್ನಬೇಕೇ ? ಅಥವಾ ಅಗಲದ ಕುಲಾವಿ ಅನ್ನಬೇಕೋ ? ಭಗವಂತ ಬಲ್ಲ. ಐದಡಿ ಆರಂಗುಲದ ಮುದುಕ. ಅವನ ಪಕ್ಕದಲ್ಲಿ ಒಂದು ಕತ್ತೆ. ಆ ಕತ್ತೆಯ ಬಣ್ಣ ದಿಟವಾಗಲೂ ಹೊಂಬಣ್ಣ. ಆ ಕತ್ತೆಗೆ ಏನು ಶೃಂಗಾರ ಮಾಡಿದ್ದ ಅಂತ. ಮದುವಣಗಿತ್ತಿಗೆ ಶ್ರೀಮಂತ ವ್ಯಾಪಾರಸ್ಥರು ಜವಾಹಿರಿ ತೊಡಿಸುಲ್ಲವೇ ಹಾಗೆ ಆ ಕತ್ತೆಗೆ ಗಿಲೀಟ್ ಗೆಜ್ಜೆಗಳನ್ನು ಅಲ್ಲಿ ಇಲ್ಲಿ ಎಲ್ಲೆಲ್ಲೂ ಕಟ್ಟಿದ್ದರು. ಕತ್ತೆ ಚೆನ್ನೋ, ಮುದುಕ ಚೆನ್ನೋ ತೀರ್ಮಾನಿಸುವುದು ಕಷ್ಟ

ಎರಡು ಮೋಟಾರುಗಳು ಭರ್ರಂತ ಬಂದು, ಅಲ್ಲಿ ನಿಂದವು. ನಾಲ್ಕೂ ಜನ ಅಮೆರಿಕನ್ನರು ಇಳಿದರು. ಗಂಡುಗಳು ಕ್ಯಾಮರಾ ಹಿಡಿದು ದೂರ ನಿಂತರು. ಅಮೆರಿಕನ್ ಎರಡೂ ಹೆಣ್ಣುಗಳು, ಆ ಕತ್ತೆಯನ್ನು ತಡವರಿಸುತ್ತ ನಿಂತರು. ಅವರುಗಳ ಹಿಂದೆ, ಕತ್ತೆಯ ಬಾಲದ ಬಳಿ ಮುದುಕ.

ಅಮೆರಿಕನ್ ಗಂಡುಗಳು ಫೋಟೋ ತೆಗೆದುಕೊಂಡರು. ನಂತರ ಹೆಣ್ಣುಗಳು ಇತ್ತ ಬಂದುವು. ಗಂಡುಗಳು ಕತ್ತೆಯ ಬಳಿ ನಿಂತವು. ಮರಳಿ ಫೋಟೋಗಳು. ತೊಡೆಗಳನ್ನು ಚಿವುಟುತ್ತಾ ಅಮೆರಿಕನ್ನರು ಕಾರಿಗೆ ಹಿಂತಿರುಗಿ ಭರ್ರಂತ ಮುಂದೆ ಹೊರಟರು. ಮುದುಕನ ಕೈಲಿ ಆ ವೇಳೆಗೆ 3 ಡಾಲರುಗಳು ಸಂದಿದ್ದುವು.

ಇಷ್ಟನ್ನೂ ನಿಂತಲ್ಲಿಂದಲೇ ನೋಡಿದೆ. ನನ್ನ ಜೇಬಿನಲ್ಲಿದ್ದುದು ಕೇವಲ 2 ರೂಪಾಯಿಗಳಷ್ಟು ಲೀರಾ. ಅಮೇರಿಕನ್ನರು ಕೊಟ್ಟ ಭಕ್ಷೀಷ್ 15 ರೂಪಾಯಿಗಳಷ್ಟು. ದುಡ್ಡಿಲ್ಲದೇ ಹೋದರೆ ಕತ್ತೆ ಬಾಲ ಹೋಯಿತು ಎಂದು ಯೋಚಿಸುತ್ತಾ ಮನಸ್ಸಿಗೆ ಸಮಾಧಾನ ತಂದುಕೊಂಡೆ.

## - ಲ ಪೆಟಿಟ್ ಔಷಧಾಗಾರ -

ಐದು ನಿಮಿಷಗಳಾದುವು. ಬಸ್ಸಿನ ಆರೈಕೆ ಮುಗಿದಿತ್ತು. ಅದೂ ಸಂತಸದಿಂದ ಕೊಂಬು ಕೂಗಿತು. ಎಲ್ಲರೂ ಬಸ್ ಹತ್ತಿದೆವು. ಪ್ರಯಾಣ ಮುಂದೆ ಸಾಗಿತು.

ಲ ಪೆಟಿಟ್ ಲೇಬೋರೇಟರಿಯನ್ನು ತಲುಪಿದೆವು. ಹೆಬ್ಬಾಗಿಲಿನಲ್ಲೇ ಹಿರಿಯ ಅಧಿಕಾರಿಗಳು ಬಲು ಒಲವಿನಿಂದ ಸ್ವಾಗತಿಸಿದರು. ಒಬ್ಬೊಬ್ಬ ಅತಿಥಿಯ ಕೈಯಲ್ಲೂ ಒಂದೊಂದು ಪ್ಯಾಕೆಟ್ ಕೊಟ್ಟರು. ಅದರಲ್ಲಿ ಏನಿತ್ತು ಅಂತೀರಿ ? 12 ಜನ ಹೆಸರಾಂತ ಇಟಲಿಯ ಚಿತ್ರಕಾರರು ರಚಿಸಿದ ದೊಡ್ಡ ಚಿತ್ರಗಳು. ಎಲ್ಲವೂ ವೈದ್ಯಕೀಯಕ್ಕೆ ಸಂಬಂಧಿಸಿದುವು. ಸಂಸ್ಕೃತಿಯನ್ನು ಮರೆಯಲಿಲ್ಲ, ವ್ಯಾಪಾರವನ್ನು ಬಿಡಲಿಲ್ಲ, ಎರಡಕ್ಕೂ ಸೇತುವೆ ಕಟ್ಟಿದಂತಿದ್ದ ಚಿತ್ರಗಳು. ಇಟಲಿಯಲ್ಲಿ ಎಲ್ಲೆಲ್ಲೂ ಕಾಣಬರುವ ಭರ್ಜರಿ ಇಗರ್ಜಿಗಳು ಈ ತೆರನ ಮನೋಭಾವನೆಗೆ ಕಾರಣವೇನೋ ಎನ್ನಿಸಿತು.

ನಂತರ ಔಷಧಾಗಾರದ ಭೇಟಿ ಮಾಡಿದೆವು. ಯೂರೋಪಿನ ಜರ್ಮನಿ, ಸ್ವಿಟ್ಸರ್ಲೆಂಡ್ ಮತ್ತಿತರ ದೇಶಗಳಲ್ಲಿರುವ ಕಾರ್ಖಾನೆಗಳಿಗೂ ಇಟಲಿಯ ಕಾರ್ಖಾನೆಗಳಿಗೂ ಸುಮಾರು ವ್ಯತ್ಯಾಸವಿದೆ. ಯೂರೋಪಿನಲ್ಲಿ ''ನಾವು ಎಲ್ಲ ಕಲಿತಿದ್ದೇವೆ, ಏನನ್ನೆಲ್ಲಾ ಸಾಧಿಸುತ್ತಿದ್ದೇವೆ, ಕರಿಯರೇ ಬನ್ನಿ ನೋಡಿ, ಆಶ್ಚರ್ಯಪಡಿ, ನಿಮಗೇನೂ ತಿಳಿಯುವುದಿಲ್ಲ'' ಎಂದೆನ್ನುವ ಆಳ ಮನದಲ್ಲಿನ ಭಾವ. ಆದರೆ ಇಟಲಿಯಲ್ಲಿ ''ನಾವು ಇಷ್ಟು ಮಾಡುತ್ತಿದ್ದೇವೆ. ಯೂರೋಪಿಯನ್ನರಂತೆ ತುಂಬಾ ಸಾಧಿಸಿಲ್ಲ, ಆದರೂ ನಮ್ಮ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಇದ್ದೇವೆ, ನೀವೇನಾದರೂ ನಮಗೆ ಕಲಿಸುತ್ತೀರಾ ? ಅಥವಾ ನಮ್ಮ ಅನುಭವವನ್ನು ಉಪಯೋಗಿಸಿಕೊಳ್ಳುತ್ತೀರಾ ? ಯಾವುದಕ್ಕೂ ನಮ್ಮ ಸ್ವಾಗತ'' ಎಂದೆನ್ನುವ ಮನೋಭಾವ.

ಈ ಔಷಧಿಯ ಕೈಗಾರಿಕಾ ಪ್ರಗತಿಯಲ್ಲೂ ಇಟಲಿ ಸೇತುವೆ ಕಟ್ಟಿದೆ, ಅತ್ತ ಬಲಿತ ಯೂರೋಪಿಗೂ, ಇತ್ತ ಬೆಳೆಯ ಬಯಸುವ ದೇಶಗಳಿಗೂ, ಇಟಲಿಯೇ ಆತ್ಮಾಭಿಮಾನವನ್ನು ಉಳಿಸಿಕೊಂಡ ಮಾದರಿ ದೇಶವೇನೋ ಎನ್ನಿಸಿತು.

ಔಷಧಿ ತಯಾರಿಕ ಸಂಸ್ಥೆಯ ಅನುಭವ ತಕ್ಕಷ್ಟು ನನಗೆ ಇತ್ತು. ಆ ದೃಷ್ಟಿಯಿಂದಲೇ ಆ ಕಾರ್ಖಾನೆಯ ಸುತ್ತ ತಿರುಗಿದೆ. ಮಾತನಾಡಿದೆ. ''ಉತ್ಸಾಹವಿದೆ ನಮ್ಮಲ್ಲಿ. ಜಾಣತನವಿದೆ ನಮ್ಮಲ್ಲಿ. ಅವಕಾಶಗಳೂ ಹೇರಳವಾಗಿವೆ. ಆದರೆ ಯಾವ ಉತ್ಸಾಹಿಯೂ, ಯಾವ ಜಾಣನೂ ತನ್ನ ಕೆಲಸದಲ್ಲಿ ಪ್ರಗತಿ ಸಾಧಿಸಬೇಕಾದರೆ, ಅವನಿಗೆ ಪೂರ್ಣ ಅಧಿಕಾರ ಇರಬೇಕು. ಮತ್ತು ಅರಿಯದ ಕುರಿಗಳಂತಿರುವ ಕೆಲಸಗಾರರನ್ನು ಶಿಸ್ತಿನಿಂದ ನಡೆಸಿಕೊಳ್ಳುವ ಅವಕಾಶವೂ ಇರಬೇಕು. ಆದರೆ ನಮ್ಮ ದೇಶದಲ್ಲಿ ಇಂತಹ ಅರಿಯದ ಒಳ್ಳೆಯ ಕುರಿಗಳನ್ನು ಕೆಲವು ಸ್ವಾರ್ಥಿ ತೋಳಗಳು, ವಶಪಡಿಸಿಕೊಂಡು, ಬುಗುರಿ ತಿರುಗಿಸಿದಂತೆ ತಿರುಗಿಸುತ್ತಿವೆ. ಈ ಕಾರಣದಿಂದ ನಮ್ಮ ದೇಶದಲ್ಲಿ ಕೈಗಾರಿಕಾ ಪ್ರಗತಿ ಟಾಂಗ್ ಬಿ ರಾಂಗ್ ಹೊಡೆಯುತ್ತಿದೆ. ವಯಸ್ಕರಿಗೆ ವೋಟು ಎಂದು ಸಿದ್ಧಾಂತ ಮಾಡುವ ಮೊದಲು, ವಯಸ್ಕರಾಗುವ ಹೊತ್ತಿಗೆ ಅವರು ಅಕ್ಷರಸ್ಥರಾದರೂ ಆಗಬೇಕು ಎಂದು ಕಡ್ಡಾಯ ಮಾಡಬೇಕು. ಅದಿಲ್ಲದೆ ಈಗಿರುವಂತೆ, ಹಸಿ ಡೆಮೊಕ್ರೆಸಿ ಆದರೆ ಪ್ರಗತಿಗೆ ಬಿಸಿ ತಟ್ಟಲೇಬೇಕು. ಪ್ರಗತಿ ಬೆಂದು ಕುಂಟಲೇಬೇಕು.''

ಇಷ್ಟೆಲ್ಲಾ ಆಗ ಮನದಟ್ಟಾಯಿತು. ಇದನ್ನು ಬಾಯಿ ಬಿಟ್ಟು ಪ್ರಚುರಪಡಿಸಿದರೆ ಆಗುವ ಫಲಿತಾಂಶವೇನು ? ಹತ್ತೂ ಜನ ಉನ್ಮಾದಸ್ಥರು ನನ್ನ ತಲೆ ಒಡೆಯುತ್ತಾರೆ. ದೇಶಕ್ಕೂ ಯಾವ ಪ್ರಯೋಜನವೂ ಆಗುವುದಿಲ್ಲ. ಕೇವಲ ಅರಣ್ಯ ರೋದನ ! ವೃಥಾ ಶ್ರಮ !

ನಮ್ಮ ಜನರ ಮುನ್ನಡೆಯು ಈ ರೀತಿಯಲ್ಲೇ ಮುಂದುವರೆದರೆ ಮುಂದೆ ಚೀಣದಂತೆಯೇ ಪರ್ಯವಸಾನವಾಗುತ್ತದೆ ಎಂದು ಹೇಳಿದರೆ, ಶತಮಾನಗಳ ನಂತರ ಯಾರಿಗಾದರೂ ಈ ಹೇಳಿಕೆ ಕಂಡರೆ, ''ಅಯ್ಯೋ ಪಾಪ ! ಆಗಲೂ ದೃಷ್ಟಾರರಿದ್ದರು. ಆದರೆ ಅಜ್ಞಾನದ [illegible] ಉತ್ಸಾಹದ ಪ್ರವಾಹದಲ್ಲಿ ಹೇಳ ಹೆಸರಿಲ್ಲದಂತೆ ಕೊಚ್ಚಿಕೊಂಡು ಹೋದರು'' ಎಂದು ಅಂದುಕೊಳ್ಳಬಹುದು.

ತುಸು ಮುಂದೆ ಗಾಣುವವರನ್ನು ಜನತೆ ಶಿಲುಬೆಗೇರಿಸುತ್ತದೆ. ಗುಂಡಿಟ್ಟು ಕೊಲ್ಲುತ್ತದೆ. ಅನುಭವ ಮಂಟಪವನ್ನೂ ಒಡೆದು, ಕೂಡಲಸಂಗಮನಲ್ಲಿಗೆ ಕಳಿಸುತ್ತದೆ.

ಇದೇ ಜನಜೀವನ ಪ್ರಗತಿಯ ರೀತಿ, ನೀತಿ ಮತ್ತು ನಿಯಮ, ಆ ಕಾರಣದಿಂದಲೇ ನಮ್ಮ ದೇಶದಲ್ಲಿ ದಾರಿ ತೋರಬಲ್ಲ ಹಿರಿಯರನೇಕರು, ತಮ್ಮ ಪಾಡಿಗೆ ತಾವು ಎಂಬಂತಾಗಿರುವುದು.

ನಮ್ಮ ದೇಶದ ಔಷಧ ತಯಾರಕರು ಯಾವ ಸಮಸ್ಯೆಗಳನ್ನು ಎದುರಿಸುತ್ತಾರೋ ಅವನ್ನೇ ಅವರೂ ಎದುರಿಸಿದ್ದರು. ಎದುರಿಸಿ ನಿವಾರಿಸಿದ್ದರು. ಈ ಪ್ರಗತಿಗೆ ಮುಖ್ಯ ಕಾರಣವೆಂದರೆ ಕಾರ್ಖಾನೆಯ ವೈಜ್ಞಾನಿಕ ಸಿಬ್ಬಂದಿಯ ತನ್ನ ಪ್ರಯೋಗಗಳನ್ನು ಯಾವ ಅಡ್ಡಿ ಆತಂಕಗಳೂ ಇಲ್ಲದೆ ನಡೆಸುವುದಕ್ಕೆ ಪೂರ್ಣ ಅವಕಾಶವಿದೆ. ಮತ್ತು ಇಂತಹ ಸಂಸ್ಥೆಗಳ

ವೈಜ್ಞಾನಿಕ ಸಿಬ್ಬಂದಿಗೆ ವೈಜ್ಞಾನಿಕ ಅರ್ಹತೆಯ ಮೇಲೆ ಜನರನ್ನು ಆಯ್ಕೆ ಮಾಡುತ್ತಾರೆ. ಮಂತ್ರಿಯ ಅಳಿಯ, ಅಂತಹವರ ಮಗ, ಮುಂದೆ ಇಂತಹವರಾಗಬಹುದಾದವರ ಸಂಬಂಧಿ ಇತ್ಯಾದಿ ಯಾವುದೂ ಇಲ್ಲ. ಅಂತಹ ಸುದಿನ ನಮ್ಮ ದೇಶದಲ್ಲಿ ಬಂದರೆ ಪ್ರಗತಿಯೂ ಸುಲಭ ಎನ್ನಿಸಿತು.

ಕಾರ್ಖಾನೆಯ ಎಲ್ಲ ಭಾಗಗಳಲ್ಲೂ ಓಡಾಡಿದೆ. ಅಲ್ಲಿದ್ದ ವೈಜ್ಞಾನಿಕರೊಡನೆ ಮಾತನಾಡಿದೆ. ನಮ್ಮಿಂದಲೂ ಪ್ರಗತಿ ಸಾಧ್ಯ ಎಂಬ ಆತ್ಮವಿಶ್ವಾಸ ಉಂಟಾಯಿತು.

ಸುಮಾರು ಒಂದು ಗಂಟೆಗೆ ಫ್ಯಾಕ್ಟರಿ ಭೇಟಿ ಮುಗಿಸಿ, ಪ್ರಯಾಣ ಮುಂದುವರೆಸಿದೆವು. ಮಧ್ಯಾಹ್ನದ ಊಟಕ್ಕೆ ''ಪಾಂಪಿ''ಯ ಬಳಿ ಇದ್ದ ಹೋಟಲೊಂದಕ್ಕೆ ಹೋಗಬೇಕಾಗಿತ್ತು. ಹತ್ತಿರವೇ ಇತ್ತು ಆ ಹೋಟಲು.

ತುಸು ಹೊತ್ತಿನಲ್ಲೇ ಅಲ್ಲಿಗೆ ಹೋದೆವು. ತೀರ್ಥ ತಿಂಡಿ ಮತ್ತು ಸಂಗೀತ. ಇಟಲಿಯ ಹೋಟಲುಗಳಲ್ಲಿ ಊಟ ಮಾಡುವಾಗ ಯಾರಾದರೂ ಹತ್ತಿರ ಬಂದು ಹಾಡುತ್ತಾರೆ. ನಂತರ ಬಗ್ಗಿ ಸಲಾಂ ಹಾಕುತ್ತಾರೆ. ನಮ್ಮ ಕೈಲಾದ ದಕ್ಷಿಣೆಯನ್ನು ಅವರಿಗೆ ಕೊಡಬೇಕು. ಆ ದಿನ ಆ ಗಾಯಕರು ಹಾಡುತ್ತಾ ಪಿಟೀಲು ಬಾರಿಸಿದರು. ನಮ್ಮ ತಂಡದಲ್ಲಿ 2–3 ಹೆಣ್ಣು ಮಕ್ಕಳು ಹಾಡಿದರು, ಪಿಟೀಲು ಬಾರಿಸಿದರು. ಅಂದಮೇಲೆ ಪೀಟಿ ಪೀಟಿ ಆಯಿತಲ್ಲ! ದಕ್ಷಿಣೆಯನ್ನು ನಾವು ಕೊಡಲೇ ಇಲ್ಲ. ನಮ್ಮ ಮಹಿಳಾ ವೈದ್ಯರು ಹಾಡಿದ್ದಕ್ಕೆ ಅವರೂ ದಕ್ಷಿಣೆ ಕೊಡಲಿಲ್ಲ; ಆದರೂ ಗಾಯಕರಿಗೆ ಅನ್ಯಾಯವೇನೂ ಆಗಿರಲಾರದು. ಕಾರ್ಖಾನೆಯ ಅತಿಥಿಗಳು ನಾವು, ಅವರೇ ಈ ಬಾಬತ್ತನ್ನು ನೋಡಿಕೊಂಡಿರುತ್ತಾರೆ ಎನ್ನುವ ವಿಶ್ವಾಸ.

ಊಟ ಗಾಯನ ಸಾವಧಾನವಾಗಿ ನಡೆಯಿತು. ನಂತರ ಎದುರಿನಲ್ಲಿದ್ದ ಹೆಸರಾಂತ ''ಪಾಂಪಿ''ಯನ್ನು ನೋಡ ಹೋದೆವು.

## "ಪಾಂಪಿ"

ಪಾಂಪಿಯನ್ನು ನೋಡ ಹೊರಟಾಗ, ಹಂಪೆಯ ಜ್ಞಾಪಕ ಸ್ವಾಭಾವಿಕವಾಗಿ ಬಂತು. ಕ್ರಿ.ಶ. 79ರಲ್ಲಿ ಅಗ್ನಿಪರ್ವತವು ಕೆರಳಿ ಪಾಂಪಿ ನಗರವನ್ನು ಹಠಾತ್ತನೆ ಹೂತುಬಿಟ್ಟಿತು. ಮನೆಗಳಲ್ಲಿ, ರಸ್ತೆಗಳಲ್ಲಿ, ಅಂಗಡಿಗಳಲ್ಲಿ ಯಾರು ಯಾರು ಹೇಗೆ ಹೇಗೆ ಇದ್ದರು ಹಾಗೆ ಹಾಗೆಯೇ ಸಮಾಧಿಸ್ಥರಾದರು. ವಿಸೂವಿಯಸ್ ಹೊರ ಸೂಸಿದ ಕಾದಕೆಂಡ ಮಣ್ಣು ಧೂಳು ಎಲ್ಲವೂ ಗಜಗಜಗಳಷ್ಟು ಎತ್ತರ ನಗರವನ್ನೆಲ್ಲಾ ತುಂಬಿಕೊಂಡಿತು. 16–17 ಶತಮಾನಗಳ ನಂತರ ಅಗೆಯಲು ಊರಿಗೆ ಊರೇ ಪ್ರತ್ಯಕ್ಷವಾಯಿತು. ಅಲ್ಲಿದ್ದ ಶವಗಳು ಕಲ್ಲು ಶಿಲೆಯಂತಾಗಿದ್ದುವು. ಮುಟ್ಟಿದರೆ ಧೂಳಾಗುತ್ತದೆ ಎನ್ನುವಂತಿದ್ದು , ಬಲು ಹುಷಾರಿನಿಂದ ಅವುಗಳ ಪ್ಲಾಸ್ಟರ್ ಪ್ರತಿಗಳನ್ನು ತೆಗೆದು, ಮ್ಯೂಸಿಯಂನಲ್ಲಿಟ್ಟರು. ಎಚ್ಚರಿಕೆಯಿಂದ ಅಗೆದು, ಆಗಿನ ಕಾಲದ ರೋಮನ್ನರ ಮನೆಗಳನ್ನೂ, ಸಾರ್ವಜನಿಕ ಸ್ಥಳಗಳನ್ನೂ ಬಹಿರಂಗ ಪಡಿಸಿದರು. ಕೆಲವು ಮನೆಗಳಲ್ಲಿ ಈಗ ಕೂಡ ಯಾರಾದರೂ ವಾಸ ಮಾಡಬಹುದು ಎನ್ನುವಷ್ಟು ಚೆನ್ನಾಗಿ ಸಂರಕ್ಷಣೆ ಮಾಡಲಾಗಿದೆ.

ಆದರೆ ನಮ್ಮ ಹಂಪೆಯ ವೈಭವವೆಲ್ಲಾ ಮಾನವ ಮಾನವ ಯುದ್ಧದಲ್ಲಿ ಮಾಯವಾಯಿತು. ಗೆದ್ದ ಶತ್ರುಗಳು, ತಿಂಗಳಾನುಗಟ್ಟಲೆ ಊರನ್ನು ನೆಲಸಮ ಮಾಡಿದರು. ಹುದುಗಿಟ್ಟಿದ್ದ ಭಂಡಾರ ಸಿಗುವ ಆಸೆಯಿಂದ ತೋಡಿ ಕೆತ್ತಿ ಹಾಳು ಮಾಡಿದರು. ಅಂದಮೇಲೆ ಈಗ ಹಂಪೆಯಲ್ಲಿರುವ ಭಗ್ನಾವಶೇಷಗಳನ್ನು ನೋಡಿದಾಗ, ನಮ್ಮ ಊಹೆಯೇ ನಗರದ ಚಿತ್ರವನ್ನು ಕಣ್ಣೆದುರಿಗೆ ಕಟ್ಟಬೇಕು. ಆದರೆ ಹಂಪೆಯು ಹದಿನೈದನೇ ಶತಮಾನದಲ್ಲಿ ನಿರ್ನಾಮವಾಯಿತು. ಪಾಂಪಿಯಾದರೋ ಮೊದಲನೇ ಶತಮಾನದಲ್ಲಿ, ಆದರೂ ಹೋಲಿಕೆಗಳು ಸುಮಾರು ಹೆಚ್ಚಾಗಿಯೇ ಇವೆ.

ಪಾಂಪಿಯ ಎದುರಿನಲ್ಲೇ ನಮಗೆ ಕಾಣಿಸುವುದು ಕೋಟೆಕೊತ್ತಲಗಳ ಅವಶೇಷಗಳು. ಅಂತಹ ಭಾರಿ ಕೋಟೆಯ ಗೋಡೆಗಳೇನೂ ಅಲ್ಲ, ನಗರದ ರಸ್ತೆಗಳು ಸುಮಾರು 10–12

ಅಡಿ ಅಗಲ. ಕಲ್ಲುಗಳನ್ನು ಹಾಸಿದ ರಸ್ತೆಗಳು. ನಮ್ಮ ಇತ್ತೀಂದೀಚಿನ ಕೋಟೆಗಳ ರಸ್ತೆಗಳ ತರಹಾನೇ. ಮುಂದೆ ನಡೆದರೆ ಮ್ಯೂಸಿಯಂ.

ಮ್ಯೂಸಿಯಂ ಅತ್ಯಾಧುನಿಕ ರೀತಿಯಲ್ಲಿ ಸಜ್ಜುಗೊಳಿಸಲ್ಪಟ್ಟಿದೆ. ತರುಣಿಯೊಬ್ಬಳು ಪಾತ್ರೆಯನ್ನು ಎತ್ತಿಕೊಂಡಿದ್ದಾಳೆ. ಹಾಗೆಯೇ ಮರಣ ಸಂಭವಿಸಿದೆ. ಆ ಶವದ ಪ್ಲಾಸ್ಟರ್ ಮಾದರಿಯನ್ನು ಪ್ರದರ್ಶಿಸಿದ್ದಾರೆ. ಅದೇ ರೀತಿ ಮಲಗಿರುವ ಹುಡುಗಿಯೊಬ್ಬಳು, ಏನಿದು ಎಂದು ಎದ್ದು ತಲೆಯೆತ್ತಿದ್ದಾಳೆ. ಹಾಗೆಯೇ ಮರಣ. ಪಾನೀಯವನ್ನು ಕುಡಿಯುತ್ತಿದ್ದವನೊಬ್ಬ ಹಾಗೆಯೇ ಗೊಟಕ್ ಎಂದಿದ್ದಾನೆ. ಆಟವಾಡುತ್ತಿದ್ದ ಇಬ್ಬರು ಅದೇ ಭಂಗಿಯಲ್ಲಿ ಪ್ರತಿಮೆಯಾಗಿದ್ದಾರೆ.

ಒಂದೇ, ಎರಡೇ ! ಊರಿಗೆ ಊರೇ ಫಟ್ ಆದರೆ ವಿವರಗಳನ್ನು ಹೇಳಲು ಸಾಧ್ಯವೇ?

ಸಹಸ್ರಾರು ಫೋಟೋಗಳಿವೆ. ಹೀಗೆ ಹೀಗೆ ಆಗ ನಗರದಲ್ಲಿ ಇದ್ದಿರಬೇಕು ಎಂದು ತೋರಿಸುವ ಫೋಟೋಗಳು. ಆ ಫೋಟೋಗಳ ಆಲ್ಬಂ ಅನ್ನು ಮಾರುಕ್ಕೆ ಇಟ್ಟಿದ್ದಾರೆ ಎಂದು ಹೇಳಬೇಕೇ ? ಪ್ರವಾಸಿಗಳು ತಮ್ಮೂರಿಗೆ ಹಿಂತಿರುಗಿದಾಗ ಇತರರಿಗೆ ತೋರಿಸಲು ಈ ಸಾಕ್ಷ್ಯಗಳು ಬೇಡವೇ ?

ಮ್ಯೂಸಿಯಂ ಅನ್ನು ನೋಡಿದ ಮೇಲೆ ನಗರ ಪ್ರದಕ್ಷಿಣೆ.

ಅಲ್ಲೊಂದು ಮನೆ. ಒಳಗೆ ಹೋಗುತ್ತಲೇ ದೊಡ್ಡ ಅಂಗಳ. ನಮ್ಮ ದೇಶದಲ್ಲಿನ ಹಳೇ ತೊಟ್ಟಿ ಮನೆಗಳಿಲ್ಲವೇ ಆ ತರಹ. ಅಂಗಳದ ಸುತ್ತ ಕೈಸಾಲೆ. ಅಂಗಳದಲ್ಲಿ ನೀರು ಚಿಮ್ಮುವ ಕಾರಂಜಿ. ನಮ್ಮಲ್ಲಿ ತುಳಸಿ ಕಟ್ಟೆ ಇದ್ದಹಾಗೆ. ಸುತ್ತಲೂ ಗಿಡ ಬಳ್ಳಿಗಳು. ನಮ್ಮ ತೊಟ್ಟಿ ಮನೆಗಳಂತೆಯೇ ಅಂಗಳಕ್ಕೆ ಸೂರು ಹಾಕಿಲ್ಲ. ಗಾಳಿ ಬೆಳಕು ಯಥೇಚ್ಛವಾಗಿ ಬರಲು ಅವಕಾಶವಿದೆ, ಅಂಗಳದ ಸುತ್ತ ಕೈಸಾಲೆಯನ್ನು ಕಡೆದ ಕಲ್ಲಿನ ಕಂಬಗಳಿಂದ ಅಲಂಕರಿಸಿದ್ದಾರೆ. ಸುಮಾರು 15-16 ಅಡಿ ಎತ್ತರದ ಕಂಬಗಳು. ಅಂಗಳವೇ 20 ಅಡಿ ಅಗಲ ಸುಮಾರು 25-30 ಅಡಿ ಉದ್ದ. ಅಂಗಳದ ಎರಡೂ ಪಕ್ಕಗಳಲ್ಲಿ ಮಲಗುವ ಕೊಠಡಿಗಳು. 8 ಅಡಿ ಅಗಲ, 10 ಅಡಿ ಉದ್ದ 9 ಅಡಿ ಎತ್ತರದ ಚಿಕ್ಕ ಗವಾಕ್ಷ ಬಂದಿರುವ ಕತ್ತಲೆ ಕೋಣೆಗಳು. ಇಷ್ಟು ದೊಡ್ಡ ಮನೆಗೆ ಇಷ್ಟು ಚಿಕ್ಕ ಮಲಗುವ ಮನೆಗಳೇ ಎಂದು ಆಶ್ಚರ್ಯವಾಯಿತು. ಶ್ರೀಮಂತರ ಮನೆ ಅದು. ಅಂದಮೇಲೆ ಸೇವಕರು ಮಲಗುವ ಕೋಣೆಗಳಾಗಿರಬಹುದು ಎಂದುಕೊಂಡೆ. ಆದರೆ ಇನ್ನೊಂದು ಕೋಣೆಯನ್ನು ನೋಡಲು ಕರೆದೊಯ್ದರು.

ಆ ಕೊಠಡಿಯೂ ಪುಟಾಣಿಯದೇ ! ಕರೆದೊಯ್ದ ಮಾರ್ಗದರ್ಶಕ ನಮ್ಮ ಗುಂಪಿನಲ್ಲಿ ಹೆಂಗಸರು ಇಲ್ಲವೋ ಇದಾರೋ ಎಂದು ಪರೀಕ್ಷಿಸಿದ. ನಂತರ "ಬೇಗ ಬನ್ನಿ,

ಹೆಂಗಸರು ಯಾರಾದರೂ ಬಂದರೆ ಆ ಕೊಠಡಿಯನ್ನು ನೋಡಲಾಗುವುದಿಲ್ಲ" ಎಂದು ಎಚ್ಚರಿಕೆ ಕೊಟ್ಟು ಓಡ ಹತ್ತಿದ. ನಮ್ಮನ್ನು ಆ ಕೊಠಡಿಗೆ ಕಳಿಸಿ ತಾನು ಬಾಗಿಲ ಬಳಿ ಪಹರೆ ನಿಂತ. ಆ ಕತ್ತಲೆ ಕೋಣೆಗೆ ಗವಾಕ್ಷಿಯಿಂದಲೆ ಬೆಳಕು ಚೆಲ್ಲುತ್ತಿತ್ತು. ಮಧ್ಯಾಹ್ನ ಆದುದರಿಂದ, ಪಶ್ಚಿಮದ ಸೂರ್ಯನ ಬೆಳಕಿಗೆ ಎದುರಾಗಿ ಗವಾಕ್ಷ ಇದ್ದುದರಿಂದ, ಗೋಡೆಗಳ ಮೇಲೆಲ್ಲಾ ಮನುಷ್ಯಾಕಾರದ ಚಿತ್ರಗಳು. ವರ್ಣ ತುಂಬಿದ ರೇಖಾಚಿತ್ರಗಳು. ವಿಧವಿಧ ಭಂಗಿಗಳಲ್ಲಿ ಜತೆ ಜತೆಯಾದ ಚಿತ್ರಗಳು.

ಕಾಮನ ಹಬ್ಬದ ದಿನ ನಮ್ಮ ಹಳ್ಳಿ ಕಡೆಯ ಜನರ ಧುಮ್ಮಿ ಧುಮ್ಮಿ ಪದಗಳನ್ನು ಹಾಡುವ ವಾಡಿಕೆ. ಸ್ವರ್ಗದಲ್ಲಿ ದುಂದುಭಿಗಳು ಮೊಳಗಿದಂತೆ ಜಾನಪದ ಧುಮ್ಮಿ ಧುಮ್ಮಿ ಪದಗಳನ್ನು ಹಾಡುವ ವಾಡಿಕೆ. ಸ್ವರ್ಗದಲ್ಲಿ ದುಂದುಭಿಗಳು ಮೊಳಗಿದಂತೆ ಜಾನಪದ ಧುಮ್ಮಿ ಧುಮ್ಮಿ ಪದಗಳನ್ನು ಹಳ್ಳಿಗಳಲ್ಲಿ ಮೊಳಗುತ್ತಾರೆ. ಮಾನ, ಲಜ್ಜೆ ಭಯ ಎಲ್ಲವನ್ನೂ ಮೀರಿದ ಸ್ಥಿತಿಯಲ್ಲಿ ಹಾಡುಗಳನ್ನು ಅನ್ನುತ್ತಾರೆ. ಕಾಮಾತುರಾಣಾಂ ನ ಭಯಂ ನ ಲಜ್ಜಾ ಎಂದು ಸನ್ಯಾಸಿ ಸಾಮ್ರಾಟ್ ಶಂಕರಾಚಾರ್ಯರು ಹೇಳಿಲ್ಲವೇ ?

ಅಂತಹ ಹಾಡುಗಳಿಗೆ ಈ ಚಿತ್ರಗಳು ಪೂರಕವಾಗಿದ್ದುವು ಎಂದಂದರೆ ವಿವರಿಸಿದಂತೆ ಆಗುತ್ತಲ್ಲ!

ಈ ಮಲಗುವ ಕೋಣೆಗಳು ಮನೆಯ ಸೇವಕರಿಗಲ್ಲ. ಇವು ಧಣಿಯ ಉಪಯೋಗಕ್ಕೆ ಮೀಸಲಾದ್ದು ಎನ್ನಿಸಿತು. ಆದರೂ ಅಂತಹ ಭವ್ಯ ಮನೆ ಕಟ್ಟಿ ಮಲಗಲು ಮಾತ್ರ ಕಿಷ್ಕಿಂಧಾ ಕೋಣೆಯೇ ಎಂದು ಆಶ್ಚರ್ಯವಾಯಿತು. ಮೊದಲನೆಯ ಶತಮಾನದಲ್ಲಿ ಪಾಂಪಿಯ ದಾಂಪತ್ಯ ಜೀವನ ಈ ಸಣ್ಣ ಕೋಣೆಗಳಲ್ಲಿ ಚಿತ್ರಿಸಲ್ಪಟ್ಟಿದ್ದರೆ, ಈಗಿನ 20ನೆ ಶತಮಾನದ ಹಸಿ ಬಿಸಿಯುವರ ದಾಂಪತ್ಯ ಜೀವನವನ್ನು ನಮ್ಮ ನಗರಗಳ ಸಿನಿಮಾ ಪೋಸ್ಟರುಗಳು, ಪ್ರತಿಬಿಂಬಿಸುತ್ತವೆ ಎಂದೂ ಅನ್ನಿಸಿತು. ಅಂದರೆ ಶ್ರೀಮಂತ ಸಾಮಾನ್ಯನ ಸಾಂಸ್ಕೃತಿಕ ಪ್ರಗತಿ ಈ ಇಪ್ಪತ್ತೂ ಶತಮಾನಗಳಲ್ಲಿ ಖಂಡಿತವಾಗಿಯೂ ಸೊನ್ನೆ ಎಂದು ಮನದಟ್ಟಿತ್ತು.

ಇಂತಹವೇ ಕೋಣೆಗಳು ಹಂಪೆಯಲ್ಲೂ ಇದ್ದಿದ್ದರೆ, ಅವು ಹೇಳ ಹೆಸರಿಲ್ಲದೆ ಹೋದುದು ಒಳ್ಳೆಯದೇ ಆಯಿತು ಎಂದೂ ಅನಿಸಿತು.

ಅಂಗಳದ ಹಿಂದೆಯೇ ಅಡಿಗೆ ಮನೆ ಊಟದ ಕೋಣೆ ಇತ್ಯಾದಿ. 8–9 ಜನರು ಮಾತ್ರ ಕೂತು ಉಣ್ಣುವಂತಹ ಊಟದ ಮನೆಗಳು. ಅಂದರೆ ಆಗಿನ ಕಾಲದಲ್ಲಿ ರೋಮನ್ ಶ್ರೀಮಂತರು ತುಂಬಾ ಆಪ್ತರಾದ ಕೆಲವೇ ಜನರನ್ನು ಕರೆದು ಮನೆಯಲ್ಲಿ ಔತಣ ಏರ್ಪಡಿಸುತ್ತಿದ್ದರು. ಸಾರ್ವಜನಿಕ ಸಮಾರಾಧನೆಗಳನ್ನು ಬೇರೆ ಇನ್ನೆಲ್ಲೋ ಏರ್ಪಡಿಸುತ್ತಿದ್ದಿರಬೇಕು.

ಮನೆಯ ಅಂಗಳದಲ್ಲಿ ಇಟಲಿಯನ್ ಯುವಕನೊಬ್ಬ ನಿಂತಿದ್ದ. ಅವನ ಎದುರಿನಲ್ಲಿ ವರ್ಣ ಚಿತ್ರ ಬರೆಯುವ ಈಸಲ್–ನಿಲು ಹಲಗೆ. ಅದರ ಮೇಲೆ ಆತ ಕಾಗದವ

ಹಾಳೆಯನ್ನಿಟ್ಟು 2-3 ನಿಮಿಷಗಳಲ್ಲಿ ಅಂಗಳದಲ್ಲಿ ನಿಂತ ನಮ್ಮ ನಿಲುವನ್ನು ನೋಡಿ ವರ್ಣರಂಜಿತ ಚಿತ್ರವನ್ನು ಬರೆದು ಕೊಡುತ್ತಿದ್ದ. ನಾಲ್ಕು ಸಾವಿರ ಲೀರಾ ಅವನ ಫೀಸ್. ಪಾಂಪಿಯ ಇತರ ಚಿತ್ರಗಳನ್ನೂ ಅವನು ಬರೆದಿಟ್ಟಿದ್ದ. ಒಂದೊಂದಕ್ಕೂ 2 ರಿಂದ ಮೂರು ಸಾವಿರ ಲೀರಾ. ಬಡಪಾಯಿಗಳು ನಾವು, ಅವನ ಸೇವೆಯನ್ನು ಹೇಗೆ ಪಡೆಯಲು ಸಾಧ್ಯ ! ಆದರೆ ಅಮೆರಿಕನ್ನರೂ ಬರುತ್ತಿದ್ದರಲ್ಲ! ನಮ್ಮ ಹಿಂದೆಯೇ ಎರಡು ಅಮೆರಿಕನ್ ತಂಡಗಳು ಬಂದಿದ್ದುವು. ಅವುಗಳಲ್ಲಿ ನಾಲ್ಕೈದು ಜನರು ಚಿತ್ರ ಬರೆಸಿಕೊಂಡರು. ಕಂಬಕ್ಕೆ ಆತು ನಿಂತ ಒಬ್ಬ, ಕಾರಂಜಿಯನ್ನು ತಬ್ಬಿಕೊಂಡು ಒಬ್ಬಾಕೆ, ಕೋಣೆಯ ಬಾಗಿಲ ಚೌಕಟ್ಟಿಗೆ ಸರಿ ನಿಂತ ಒಬ್ಬಾಕೆ, ಹೂವಿನ ಕುಂಡದ ಬಳಿ ಕುಕ್ಕುರುಗಾಲಿನಲ್ಲಿ ಕೂತು ನಗುತ್ತಿದ್ದ ಇನ್ನೊಬ್ಬಾಕೆ - ಇತ್ಯಾದಿ.

ಚಿತ್ರಕಾರನ ಕಸುಬು ಹಣ ತರುವಂತಹುದು, ಪಾಂಪಿಯುಲ್ಲಿ, ನಮ್ಮ ಹಂಪೆಯಲ್ಲೂ ಈ ಸೌಕರ್ಯ ಇದ್ದರೆ, ಉಗ್ರ ನರಸಿಂಹನ ಘೋರ ಪ್ರತಿಮೆಯ ಪಕ್ಕದಲ್ಲಿ ಸೌಮ್ಯವಾದಿ ಟೋಪಿ ಹಾಕಿಕೊಂಡು, ಶಾಂತಿದೂತನ ಸಂದೇಶವನ್ನು ಉಚ್ಚರಿಸುತ್ತಾ, ತನ್ನ ಜೇಬನ್ನು ಪೂರ್ತಿ ತುಂಬುವವರ ಚಿತ್ರ ಬರೆದರೆ, ಎಷ್ಟು ಚೆನ್ನ! ಎಂತಹ ಸತ್ಯದ ದೃಶ್ಯ !!

ಕಡಲೆಕಾಳು ಗಣಪತಿಯ ಮುಂದೆ ಪ್ರವಾಸೀ ಅಮೆರಿಕನ್ನನ ಚಿತ್ರವನ್ನು ಬರೆದರೆ, ಎಷ್ಟೇ ಠೊಣಪನಾಗಿದ್ದರೂ, ಚೆಂದುಳ್ಳಿ ಹುಡುಗನಂತೆ ಕಾಣುತ್ತಾನೆ ಅಲ್ಲವೇ ? ಅಂತಹ ಚಿತ್ರಕ್ಕೆ ಆತ 50 ಡಾಲರ್ ಕೊಟ್ಟರೂ ಕೊಟ್ಟನೇ ! "ಇನ್ನೆರಡು ಚಿತ್ರ ಬರೆದುಕೊಂಡು ಮುಂದಕ್ಕೆ ಪ್ರಯೋಜನಕ್ಕೆ ಬಂದೀತು ! ಇನ್ನಿಬ್ಬರು ಹಸಿ ಹುಡುಗಿಯರಿಗೆ ತೋರಿಸಬಹುದು" ಎಂದು ಹೇಳುತ್ತಾನೋ ಏನೋ ?

ಇಷ್ಟು ಹೊತ್ತಿಗೆ ಮಾರ್ಗದರ್ಶಕ ಮುಂದೆ ಹೋಗಿದ್ದ. ಒಂದು ತರಹ ಸೀಟಿ ಹೊಡೆದ. ಬೇಗ ಬೇಗ ನಾವೆಲ್ಲಾ ಅತ್ತ ದೌಡೋಡಿದೆವು.

ಮಾರ್ಗದರ್ಶಕನನ್ನು ಕೇಳಿದೆ. ಆಗ ನಾವು ನೋಡಿದೆವಲ್ಲಾ ಆ ಮನೆಯ ಮಾಲೀಕನ ಹೆಸರು ಗೊತ್ತೆ ? ಎಂದು. ಅವ ತಲೆಯಲ್ಲಾಡಿಸಿದ. ಮಾಲೀಕನ ಹೆಸರು ತಿಳಿಯದು. ಆದರೆ ಮನೆಯ ಹೆಸರು, "ಬೆಳ್ಳಿ ಪ್ರಸ್ತದ ಮಹಲು" ಎಂದು. House of the Silver Nuptials ಎಂದು.

"ವ್ಹಾರೆ ! ಷೇರ್ !" ಎಂದುಕೊಂಡೆ.

* * * *

ಮುಂದಕ್ಕೆ ಮುಂದೆ ಸಾಗಿತು. ಕೋಟೆ ಗೋಡೆಯ ಪಕ್ಕದಲ್ಲೇ ದೊಡ್ಡ ದೊಡ್ಡ ಬುಡುಬುಡುಕೆಯುಂತಿರುವ ಜೇನುವ ಕಲ್ಲುಗಳು ಕಂಡವು. 10-12 ಅಡಿ ಎತ್ತರದ, 6-8

ಅಡಿ ಅಗಲದ ರಾಕ್ಷಸ ಬೀಸುವ ಕಲ್ಲುಗಳು. ಬುಡ ಬುಡುಕೆಯ ಮೇಲೆ ಕಾಳನ್ನು ಹಾಕುವುದು. ಅದರ ಪಾಡಿಗೆ ಅದೇ, ಬೀಸುವ ಕಲ್ಲನ್ನು ತಿರುಗಿಸಿದಾಗ, ನಿಯಮಿತ ಪ್ರಮಾಣದಲ್ಲಿ ಇಳಿಯುವುದು. ನಂತರ ಅರೆಯಲ್ಪಟ್ಟು ಹಿಟ್ಟಾಗುವುದು. ಹತ್ತಿರದಲ್ಲೇ ರೊಟ್ಟಿ ಅಂಗಡಿ. ರೊಟ್ಟಿ ಒಲೆ ಹಿಟ್ಟನ್ನು ಕಲಿಸಿ ರೊಟ್ಟಿ ಒತ್ತಿ ಸುಟ್ಟು ಮಾರುವುದು.

ಇಂತಹ ಬೀಸುವ ಕಲ್ಲುಗಳನ್ನು ತಿರುಗಿಸಲು ಜೀತ ದುಡಿಯುವ ಪಾಪಿಗಳು ಆಗಿನ ಕಾಲದಲ್ಲಿ ಇದ್ದರಲ್ಲ ! ಹಣ ಕೊಟ್ಟರೆ ಅಂತಹವರನ್ನು ಅನಾಮತ್ತು ಕೊಳ್ಳಬಹುದಾಗಿತ್ತಲ್ಲ ! ಹಿಟ್ಟು ಮಾಡುವ ಯಂತ್ರಗಳು ಬರುವ ಮೊದಲು, ಹಿಟ್ಟು ಅರೆಯುವ ಕೆಲಸವನ್ನು, ಮನೆ ತಪ್ಪಿದ ಹೆಂಗಸರು, ಮನೆಗಳಲ್ಲಿ ಮಾಡುತ್ತಿರಲಿಲ್ಲವೇ, ನಮ್ಮೂರಿನಲ್ಲಿ. ಆಗ ಜ್ಞಾಪಕ ಬಂತು, ನಮ್ಮ ಊರಿನ, 50 ವರ್ಷಗಳ ಹಿಂದಿನ, ನಮ್ಮ ಸಮಾಜದ, ವಿಧವೆಯರು, ಪಾಂಪಿಯ 1ನೇ ಶತಮಾನದ ಗ್ಯಾಲಿ ಸ್ಲೇವ್ಸ್, ಒತ್ತೆ ಜೀತದ ಆಳುಗಳಂತೆಯೇ, ದುಡಿಯುತ್ತಿದ್ದರು. ಆದರೆ ಜೀತಕ್ಕೆ ದುಡಿಯುವವರು ಎಂಬ ಹೆಸರು ಮಾತ್ರ ಹೊಂದಿರಲಿಲ್ಲ.

ಚಿತ್ರದುರ್ಗದ ಕೋಟೆಯ ಮೇಲೆ ತುಪ್ಪದ ಕೊಳ, ಎಣ್ಣೆಯ ಕೊಳ, ಇತ್ಯಾದಿಗಳನ್ನು ನೋಡಿದ ನೆನಪಾಯ್ತು. ರಾಕ್ಷಸ ಕೊಳಗಳು. ಕೋಟೆಗೆ ಶತ್ರುಗಳು ಮುತ್ತಿಗೆ ಹಾಕಿದರೆ ಊರಿನ ಜನರೆಲ್ಲರಿಗೂ ಈ ಕೊಳಗಳೇ ಉಗ್ರಾಣ. ಪಾಂಪಿಯ ಬೀಸು ಕಲ್ಲುಗಳನ್ನು ನೋಡಿದಾಗ, 18ನೆ ಶತಮಾನದ ಚಿತ್ರದುರ್ಗದ ನೆನಪಾಯ್ತು. ಪಾಂಪಿಯ ಮೊದಲ ಶತಮಾನದ ಚಿಹ್ನೆಗಳೇ 18ನೇ ಶತಮಾನದಲ್ಲಿ ನಮ್ಮ ದೇಶದಲ್ಲಿ ಕೂಡ ಕಾಣಿಸಿಮವು, ಎಂದರೆ, ಮನುಷ್ಯನು ಭೂಲೋಕದಲ್ಲಿ ಎಲ್ಲೇ ಇರಲಿ, ಒಂದೇ ತರನಾದ ಪೆಚ್ಚು ಪ್ರಾಣಿ ಇಂದಿಗೂ ಎಂದು ತಿಳಿಯಿತು.

ನಗರದ ಮೈದಾನದಲ್ಲಿ ರಂಗಮಂಟಪವಿದೆ. ಬಹಿರಂಗ ಮಂಟಪ. Open air Theatre. ಚಕ್ರಾಕಾರದಲ್ಲಿ ಸುತ್ತಲೂ ಕೂರಲು ಅನುಕೂಲವಾಗಿರುವ ಸೋಪಾನಗಳು ಈಗಲೂ, 19 ಶತಮಾನಗಳ ನಂತರವೂ ಚೆನ್ನಾಗಿಯೇ ಇದೆ. ಸುಮಾರು ದೊಡ್ಡ ರಂಗಮಂಟಪ. ಅಂದರೆ ಆಗಿನ ಕಾಲದಲ್ಲೂ ಕೂಡ ಆ ನಗರದ ಜನರ ಕಲಾಭಿಮಾನ ಪ್ರೌಢ ಸ್ಥಿತಿಯಲ್ಲೇ ಇದ್ದಿರಬೇಕು. ಇಂತಹ ರಂಗಮಂಟಪಗಳಲ್ಲಿ ನಾಟಕವನ್ನು ಮಾತ್ರ ಆಡುತ್ತಿದ್ದರು ಎನ್ನುವಂತಿಲ್ಲ, ಸ್ಪರ್ಧಾ ಕ್ರೀಡೆಗಳಿಗೂ ಇವು ಅನುಕೂಲವಾಗಿದ್ದಿರಬೇಕು. ಹಿಂಸಾ ಕ್ರೀಡೆಗಳಿಗೂ ಉಪಯೋಗಿಸುತ್ತಿದ್ದರು ಎಂದು ಚರಿತ್ರೆಯನ್ನು ಓದಿದರೆ ತಿಳಿಯುತ್ತದೆ.

ಕೋಟೆಯ ಒಂದು ಪಾರ್ಶ್ವದಲ್ಲಿ ಸಣ್ಣ ಸಂದಿಯೊಂದು ಕೋಟೆಯ ಗೋಡೆಯ ಒಳಕ್ಕೆ ಹೋಗುತ್ತದೆ. ಚಿತ್ರದುರ್ಗದ ಕೋಟೆಯಲ್ಲಿ ಕಳ್ಳ ಮಾರ್ಗ ಇಲ್ಲವೇ ? ಅದೇ ತರಹ ! ಕತ್ತಲು ಕತ್ತಲು ಆ ಹಾದಿಯಲ್ಲಿ ಕೋಟೆಯ ಹೊರಗಡೆಗೆ ಹೋಗಬಹುದು. ಅಲ್ಲಿ ಎದುರು ಕಾಣುವುದು ಸಮುದ್ರ. ಆ ವಿಡ್ಡಿ ಬಾಗಿಲನ್ನು ನಾವಿಕರ ಬಾಗಿಲು ಎಂದು ಕರೆಯುತ್ತಾರೆ. ಅಂದರೆ 1ನೆ ಶತಮಾನದಿಂದ 18ನೇ ಶತಮಾನದವರೆವಿಗೂ ನಗರ ರಕ್ಷಣೆಗೆ ಕೋಟೆ

ಕೊತ್ತಲಗಳನ್ನು ಮನುಷ್ಯ ಕಟ್ಟಿಕೊಳ್ಳುತ್ತಿದ್ದ. ಕೋಟೆ ಗೋಡೆಗಳಿಂದ ನಗರ ರಕ್ಷಣೆ ಸಾಧ್ಯವಿಲ್ಲ ಎನ್ನುವುದು ವೈಜ್ಞಾನಿಕ ಪ್ರಗತಿಯು ಬಿರುಸುಗೊಂಡ 19ನೆ ಶತಮಾನದಿಂದೀಚೆಗೆ ಗೊತ್ತಾಗಿರಬೇಕು.

"ಸ್ನಾನದ ಗೃಹಕ್ಕೆ ಬನ್ನಿ" ಎಂದ ಮಾರ್ಗದರ್ಶಕ. "ಇದೇನು ಸೂತಕ ಬಂತು, ಈ ಹೊತ್ತಿನಲ್ಲಿ ಸ್ನಾನದ ಮನೆಗೆ ಹೋಗಲು" ಎಂದು ಅರೆ ಕ್ಷಣ ಚಕಿತನಾದೆ. ತೊಟ್ಟ ತೊಡಿಗೆಯಲ್ಲೇ ಮಾರ್ಗದರ್ಶಕ ಮುಂದು ನಡೆಯುತ್ತಿದ್ದ. ಅವನ ಹೆಗಲ ಮೇಲೆ ಟವಲ್ ಇದ್ದಿಲ್ಲ. ನಾನೂ ಹಿಂದೆ ಹೋದೆ.

ವಿಶಾಲವಾದ ಮಂದಿರ. ಒಂದು ಕಡೆ ಸಣ್ಣ ಒಳ ಕೋಣೆ. ಅಲ್ಲಿ ನೀರು ಕಾಯಿಸುವ ದೊಡ್ಡ ದೊಡ್ಡ ಒಲೆಗಳು. ಅಲ್ಲಲ್ಲಿ ಕಲ್ಲು ಬೆಂಚುಗಳು. ಆಗಿನ ಕಾಲದಲ್ಲಿ ಸ್ನಾನಕ್ಕೆ ಹೋಗುವುದು ಎಂದರೆ ಒಂದು ಸಮಾರಂಭಕ್ಕೆ ಹೋದಂತೆ. ಸ್ನಾನ ಗೃಹದಲ್ಲಿ ಬಿಸಿ ಬಿಸಿ ಸ್ನಾನ ಮಾಡಿಸಿ ಮೈ ಚೆನ್ನಾಗಿ ತಿಕ್ಕಿ, ಮಾಲೀಷ್ ಮಾಡಿ, ಪುನುಗು ಗಂಧ ಹಚ್ಚಿ— ಪಾನೀಯಗಳನ್ನು ಕುಡಿಸುತ್ತಿದ್ದರಂತೆ. ಷಹರಿನ ಶ್ರೀಮಂತರು ಅಲ್ಲಿ ಕುಶಲ ಸಂಭಾಷಣೆ ಮಾಡುತ್ತಾ ವಿನೋದವಾಗಿ ಕಾಲಹರಣ ಮಾಡುತ್ತಿದ್ದರಂತೆ. ನದಿ ಪಕ್ಕದ ನಮ್ಮ ಹಳ್ಳಿಗಳವರು, ಸ್ನಾನಕ್ಕೆ ನದೀಗೆ ಹೋಗುವುದಿಲ್ಲವೇ ? ಅಲ್ಲಿ ಕಾಡಹರಟೆ ಕೊಚ್ಚುವುದಿಲ್ಲವೇ ? ಅವರಿವರನ್ನು ಅಂದು ಆಡಿಕೊಳ್ಳಲು ನದೀ ಸ್ನಾನವು ಜನರಿಗೆ ಹೇಗೆ ಅವಕಾಶ ಕಲ್ಪಿಸುತ್ತಿತ್ತೋ ಅದೇ ರೀತಿ, ಪಾಂಪಿಯಲ್ಲಿ, ಆಗ, ಸ್ನಾನದ ಗೃಹಗಳು ನೆರವಾಗುತ್ತಿತ್ತು. ಆದರೆ ಅದೇಕೋ ಏನೋ ಗೋಡೆಗಳ ಮೇಲೆ ಏನೂ ಬರೆದಿರಲಿಲ್ಲ. ನ್ಯಾಯವಾಗಿ ಅಂತಹ ಸ್ಥಳಗಳಲ್ಲಿ ಮನಸ್ಸಿನ ಆಳ ಆಸೆಗಳನ್ನು ಒರಟು ಮಾತುಗಳಲ್ಲಿ ಬರೆದಿಡುವುದು ಸ್ವಾಭಾವಿಕ. ಆದರೆ ಗೋಡೆಗಳು ಖಾಲಿಯಾಗಿದ್ದುವು. ಇಷ್ಟು ಶತಮಾನಗಳಾದ ಮೇಲೆ ಬರೆದಿದ್ದು ಅಳಿಸಿ ಹೋಗಿರಬಹುದು ಎಂದುಕೊಂಡೆ. ಆದರೆ ಈ 2-3 ಶತಮಾನಗಳಿಂದ ಪ್ರವಾಸಿಗರ ಹಿಂಡು ಹಿಂಡೇ ಹೋಗುತ್ತಲ್ಲ. ಅವರಾದರೂ ಸ್ನಾನಗೃಹದ ಗೋಡೆಗಳನ್ನು ತಮ್ಮ ಹಸ್ತ ಕೌಶಲದಿಂದ ಅಲಂಕರಿಸಬೇಡವೇ ?

1 + 1 = 3 ಅಂತ ಸಂಸಾರದ ರೇಖಾ ಚಿತ್ರವನ್ನು ಬರೆಯಲೇ ಅನ್ನಿಸಿತು, ನನಗೆ. ಆದರೆ ಅಷ್ಟೂ ಜನರಿದ್ದರು. ಮಾರ್ಗದರ್ಶಕನೂ ಇದ್ದ ಕಾರಣ ತೆಪ್ಪಗಿದ್ದೆ.

ಜಪಾನಿನಲ್ಲಿ ಈಗಲೂ ಈ ವ್ಯವಸ್ಥೆಯು ಆಚರಣೆಯಲ್ಲಿದೆಯಂತೆ. ಸಾರ್ವಜನಿಕ ಸ್ನಾನ ಗೃಹಗಳಲ್ಲಿ ಅವನು ಅವಳು ಅದು ಎಲ್ಲವೂ ಸಾಮೂಹಿಕ ಸ್ನಾನ ಮಾಡುತ್ತಾರಂತೆ. ಮೊದಲಿನಿಂದಲೂ ರೂಢಿಯಾಗಿ ಬಂದರೆ, ಯಾವ ಆಚರಣೆಯೂ ಸ್ವಾಭಾವಿಕವಾಗಿಯೇ ಇರುತ್ತದೆ. ಆದರೆ ಆ ರೂಢಿ ಇಲ್ಲದವರಿಗೆ ವಿಪರೀತವಾಗಿ ಕಾಣುತ್ತದೆ. ನಮ್ಮ ಮಂದೆಯಲ್ಲಿ ಕೆಲವರು ಪಾಂಪಿಯು ಸಜೀವ ನಗರವಾಗಿದ್ದಾಗ ಸ್ನಾನ ಗೃಹದಲ್ಲಿ ಏನು ನಡೆದಿರಬಹುದು

ಎಂದು ಊಹಿಸಿ ಕುಹಕವಾಡಿದಾಗ, "ಅಯ್ಯೋ ! ಮಕ್ಕಳಾ ! ಕೌಪೀನ ಧರಿಸಿ ನೀವು ಗಂಗಾ ಸ್ನಾನಕ್ಕೆ ಹಿಂಡಿಗೆ ಹಿಂಡೇ ಇಳಿಯುವಾಗ, ತೆಳು ಸೀರೆಯನ್ನುಟ್ಟು ಹೆಣ್ಣು ಹಿಂಡಿಗೆ ಹಿಂಡೇ ಸ್ನಾನಕ್ಕೆ ಇಳಿದು ಮೇಲೆದ್ದಾಗ, ಯಾವ ದೃಶ್ಯ ಕಾಣುತ್ತದೆ. ಆದರೆ ರೂಢಿಯಾದ ನಿಮಗೆ ವಿಪರೀತವಾಗಿ ಕಾಣಿಸುವುದಿಲ್ಲವಲ್ಲ ಎಂದು ಹೇಳಿದೆ.

ಸ್ನಾನ ಮಾಡದೆ ಇದ್ದರೂ, ಅಲ್ಲಿನ ಬಿಸಿಲಿನ ಧಗೆಗೆ, ಹಾಗೂ ಧರಿಸಿದ್ದ ತೊಡಿಗೆಗಳಿಂದ, ಬೆವತುಹೋಗಿದ್ದೆವು.

ನಗರ ಅಂದಮೇಲೆ ದೇವಸ್ಥಾನ ಒಂದಿರಲೇಬೇಕಲ್ಲ. ಸಮಾಜದ ರೂಢಿಯಲ್ಲಿನ ರೀತಿ ನೀತಿಗಳನ್ನು ಅತಿಕ್ರಮಿಸಿದಾಗ ಮನುಷ್ಯನ ಮನಸ್ಸು ಹುಳ್ಳ ಹುಳ್ಳಗೆ ಆಗುತ್ತಲ್ಲ! ಆಗ ಅವ ದಾನ ಧರ್ಮ ದೇವರು ದಿಂಡಿರು ಎಂದು ಯಾವುದೋ ಧ್ಯೇಯದ ಬೆಂಬೊತ್ತಿ ತನ್ನ ಮನಸ್ಸಿಗೆ ಸಮಾಧಾನ ತಂದುಕೊಳ್ಳಲೇಬೇಕಲ್ಲ! ಈ ಕೆಲಸಕ್ಕೆ ಸುಲಭವಾಗಿ ಸಿಕ್ಕಿ ಬೀಳುವುದು ದೇವರು. ಆದರೂ ಆ ದೇವರಿಗೂ ಒಂದು ರೀತಿ ನೀತಿ, ನಿಯಮ, ಉಡುಪು, ಎಲ್ಲವನ್ನೂ ಕೊಟ್ಟು ಪ್ರದರ್ಶಿಸಲು ಒಬ್ಬ ಪೂಜಾರಿ ಇರಬೇಕು. ಇದ್ದೇ ಇರುತ್ತಾನೆ. ಇವೆಲ್ಲವನ್ನೂ ನಮ್ಮ ಸಮಾಜದಲ್ಲಿ ಈಗಲೂ ಕಾಣುತ್ತಲೇ ಇದ್ದೇವೆ. ಯಾವ ನಗರ ಬಡಾವಣೆ ರಚಿಸಲ್ಪಟ್ಟರೂ, ದೇವಸ್ಥಾನಕ್ಕೆ ಒಂದು ಮೂಲೆ ಮೀಸಲು.

ಆದರೆ ಪಾಂಪಿಯ ಕಾಲದಲ್ಲಿ ! ಈ ದೇವಸ್ಥಾನಗಳು ಬೃಹದಾಕಾರದಲ್ಲಿ ಬೆಳೆದಿದ್ದುವು. ಅಪ್ಪಾಲೋ ಇನ ಗೂಡಿ. ಜೂಪಿಟರನ ದೇವಾಲಯ. ಒಂದೇ, ಎರಡೇ, ಆದರೆ ಈಗ ಆ ದೇವಾಲಯಗಳು, ಮನೆಗಳ ತರಹ ಉಳಿದಿಲ್ಲ. ಮುರಿದು ಬಿದ್ದು ಹೋಗಿವೆ. ಅಲ್ಲಿ ಇಲ್ಲಿ ದೊಡ್ಡ ದೊಡ್ಡ ಉದ್ದಾನೆ ಕಂಬಗಳು, ಜಗಲಿಗಳು, ಕಾಣುತ್ತವೆ. ಮೂರು ಅಂತಸ್ತಿನ ಸಾರಿವೆ ಕಟ್ಟಿದ ಹಾಗೆ ಕಂಬಗಳು ನಿಂತಲ್ಲಿ ಜೂಪಿಟರ್ ದೇವಾಲಯ ಇತ್ತಂತೆ. ಅಪ್ಪಾಲೊ ಗುಡಿಯ ಜಗುಲಿ ಪಗದಸ್ತಾಗಿ ಕಾಣಿಸುತ್ತೆ. ಬಲಿ ಕೊಡಲು ಪ್ರಶಸ್ತವಾಗಿದೆ.

ಹಂಪೆಯ ದೇವಾಲಯಗಳು ಸ್ವಲ್ಪ ವಾಶಿ. ವಿರೂಪಾಕ್ಷ ದೇವಾಲಯವು ಇನ್ನೂ ಪೂಜೆ ಪುನಸ್ಕಾರಗಳಿಂದ ಶೋಭಿಸುತ್ತಿರುವುದರಿಂದ, ಅದನ್ನು ಮರೆತುಬಿಡೋಣ. ಮಿಕ್ಕ ದೇವಾಲಯಗಳು, ಹಜಾರ್ ರಾಮ, ಅಚ್ಯುತ, ಇತ್ಯಾದಿ, ಈ ದೇವಾಲಯಗಳಿಂದ ದೇವರು ಕಳ್ಳ ತಪ್ಪಿಸಿಕೊಂಡು ಓಡಿಹೋಗಿದ್ದರೂ, ಮ್ಲೇಚ್ಛರು ಬಂದು ಗೋಡೆಗಳನ್ನು ಉಧಾಯಿಸಿದ್ದರೂ, ಇನ್ನೂ ಮೂಲ ರೂಪ ಉಳಿದುಕೊಂಡಿದೆ. ಸುಲಭವಾಗಿ ಪ್ರಕೃತಿಯು ಪೂರ್ಣ ಹಾಳು ಮಾಡುವ ಹಾಗೆ ಮನುಷ್ಯನಿಂದ ಸಾಧ್ಯವಾಗುವುದಿಲ್ಲ, ಎನ್ನಿಸುತ್ತದೆ.

ಮಾನವನ ಪ್ರಗತಿ ಹೆಚ್ಚಾದಾಗ, ಪ್ರಕೃತಿಯಂತೇ ಸಬ್ ಲುಂಡಾ ಮಾಡುವುದನ್ನು ಕಲಿಯುತ್ತಾನೆ ಅನ್ನುವ ಭರವಸೆ ಬಂದಿದೆ, ಆಟಂಯುಗದಲ್ಲಿ.

ಪಾಂಪಿಯ ಅವಶೇಷಗಳನ್ನು ನೋಡಲು ಸುಮಾರು 2 ಗಂಟೆಗಳು ಹಿಡಿದಿರಬೇಕು. ಅಂದರೆ ಊರನ್ನೆಲ್ಲಾ ಸುತ್ತಿ, ನೋಡಬೇಕಾದ್ದನ್ನೆಲ್ಲಾ ನೋಡಿದೆವು ಎಂದಲ್ಲ. ನಮ್ಮನ್ನು ಕರೆದೊಯ್ದಿದ್ದ ಮಾರ್ಗದರ್ಶಕನಿಗೆ ಕಾಲು ಸೋಲು ಬಂದಿತ್ತು. ಅವ ಬಸ್ಸಿನ ಕಡೆಗೆ ಹೆಜ್ಜೆ ಹಾಕಲು ಆರಂಭಿಸಿದ. ಸ್ಮಶಾನ ನಗರವನ್ನು ನೋಡಲು, ವೈದ್ಯರುಗಳು ನಾವು, ನಮಗೆ ಉತ್ಸಾಹ ಇರಬಹುದು. ಆದರೆ ಅವನಿಗೆ ದಿನ ಬೆಳಗಾದರೆ ಇದೇ ಕೆಲಸ. ಅವನಿಗೇನು ಉತ್ಸಾಹ ಇದ್ದೀತು. ಮೊದಲು ಮೊದಲು ಇದ್ದಿದ್ದರೂ ಎಷ್ಟು ದಿವಸ ಉಳಿದಿದ್ದೀತು ?

ಬಸ್ಸಿನಲ್ಲಿ ಕುಳಿತು ಹಿಂತಿರುಗಿ ಹೊರಟಾಗ ಸಂಜೆ 5-5-30 ಆಗಿತ್ತು. ರಸ್ತೆಯ ಎಡಗಡೆಗೆ ಈಗ ನೀಲಿಯ ಕಡಲು. ಹಿತವಾದ ಮಂದ ಮಾರುತ. ಬಸ್ಸಿನ ಮುಂದೆ ನಮ್ಮ ಹಿಂಡಿನ ಕೆಲವು ಹೆಣ್ಣುಗಳು ಕೂತಿದ್ದುವು. ಕಡಲ ಗಾಳಿಯು ಅವರನ್ನು ಹಾದು ನಂತರ ನನ್ನ ಹತ್ತಿರ ಬೀಸುತ್ತಿತ್ತು. BREEZE ಅಂತ ಕರೆಯಬಾರದು, ಏಕೆಂದರೆ ಭಾರಿ ಘಮಘಮ ಇತ್ತು ಆ ಮಂದಮಾರುತಕ್ಕೆ. SHE BREEZE ಎಂದೇ ಕರೆಯಬೇಕು. ತಡಕೊಳ್ಳುವುದಕ್ಕೆ ಸ್ವಲ್ಪ ಕಷ್ಟವೇ ಆಗಿತ್ತು. ನನ್ನ ಪುಣ್ಯ. ರಸ್ತೆ ಬಲಕ್ಕೆ ತಿರುಗಿತು. SHE BREEZE ಬಸ್ ಡ್ರೈವರನ ಬಳಿಗೆ ಸಾರಿತು. ಇಟಾಲಿಯನ್ ಅವ ತಡಕೊಳ್ಳಬಹುದು ಎಂದೆನಿಸಿತು.

ರಾತ್ರಿ 7-7.30 ಹೊತ್ತಿಗೆ ನೇಪಲ್ಸಿನ ಸಮುದ್ರ ತೀರದ ಊಟದ ಮಂದಿರಕ್ಕೆ ಹೋದೆವು. ಆ ಹೋಟಲಿನ ವರಾಂಡವು ಕಡಲಂಚಿನಲ್ಲೇ ಇತ್ತು. ಕೂತಲ್ಲಿಂದಲೇ ಸಮುದ್ರಕ್ಕೆ ಉಗಿಯಬಹುದಿತ್ತು. ಇಟಲಿಯ ಹೋಟಲು ! ಅಂದಮೇಲೆ ಕೇಳಬೇಕೆ ? ತೀರ್ಥವನ್ನು ಕೊಟ್ಟರು. ಹಿಂದೆಯೇ ವಾದ್ಯ ಗಾಯಕರು ಬಂದು ಹಾಡುಗಳನ್ನು ಬಾರಿಸುಕ್ಕೆ ಆರಂಭಿಸಿದರು. ವರಸೆ ವರಸೆಯಾಗಿ ಬಡಿಸುಕ್ಕೆ ಶುರು ಮಾಡಿದರು.

ಕಡಲ ಕಡೆಯಿಂದ ಹತ್ತಿರದಲ್ಲೇ ಯಾರೋ ಕೂಗಿದ ಹಾಗಾಯ್ತು. ಬಲಕ್ಕೆ ತಿರುಗಿ ನೋಡಿದೆ. ಕಡಲು. ಕತ್ತಲು. ನಾವು ಕೂತಿದ್ದೆಡೆ ರಮಾರಮಿ ಬೆಳಕು. ಹಾಗಾಗಿ ಕಡಲು ಇನ್ನೂ ಕಪ್ಪಾಗಿ ಕಾಣಿಸಿತು. ಆದರೂ ಯಾರೋ ಏನನ್ನೋ ಹೇಳುತ್ತಿದ್ದಾರೆ ? ಏನಾದರೂ ದೆವ್ವ ಗಿವ್ವ ಇದೆಯೋ ಈ ಕಡಲಿನಲ್ಲಿ. ಲಾಗಾಯ್ತಿನಿಂದ ಬೇಕಾದಷ್ಟು ಖೂನಿಗಳಾಗಿರಬೇಕು ಇಲ್ಲಿ. ಅಂದಮೇಲೆ ಅಂತರ್ಪಿಶಾಚಿಗಳು ಇವೆಯೋ ಏನೋ ? ಎಂದು ಭಯವಾಯಿತು.

ತಿರುಗಿ ನೋಡಿದೆ. ಪಿಶಾಚಿಗಳಿದ್ದರೂ ಬೆಳಕಿದ್ದ ಕಡೆಗೆ ಬರುಲ್ಲವಲ್ಲ ! ಹೇಗೂ ನಮ್ಮೂರಿನ ಪಿಶಾಚಿಗಳು ಬೆಳಕಿದ್ದೆಡೆ ಬರುಲ್ಲ. ಅಲ್ಲಿಯೂ ಹಾಗೇ ಇರಬಹುದು ಅನ್ನುವ ಧೈರ್ಯ. ಆದುದರಿಂದಲೇ ನೋಡಿದೆ.

7-8 ವರ್ಷದ ನಾಲ್ಕಾರು ಹುಡುಗರು ಅಲ್ಲಿಯೇ ಕತ್ತಲಲ್ಲಿ ಈಜುತ್ತಿದ್ದಾರೆ. ಒಬ್ಬ ವರಾಂಡದ ಕೆಳ ಗೋಡೆಯನ್ನು ಹಿಡಿದು ಹತ್ತಿದ್ದಾನೆ. ನೆಲದ ಸಮಕ್ಕೆ ಅವನ ಸೊಂಟ. ಕೈಚಾಚಿ ಬೇಡುತ್ತಿದ್ದಾನೆ. ಭಿಕ್ಷುಕ ಹುಡುಗ !

ನನ್ನ ಮೇಜಿನ ಮೇಲಿದ್ದ ಬ್ರೆಡ್ಡನ್ನು ಮೆಲ್ಲಗೆ ತೆಗೆದು ಅವನ ಕೈಗಿಟ್ಟೆ. ಕ್ಷಣಾರ್ಧದಲ್ಲಿ ಮಾಯವಾದ. ಇನ್ನೊಬ್ಬ ಹುಡುಗ ನಗ್ನ ಪ್ರತ್ಯಕ್ಷನಾದ.

ಎರಡನೆ ವರಸೆಯ ಅಡಿಗೆ ಬಡಿಸಿದರು. ಸುಮಾರು ತುಂಡುಗಳನ್ನು ನನ್ನ ತಟ್ಟೆಗೆ ಹಾಕಿಸಿಕೊಂಡೆ. ಬಡಿಸುವ ಮಾಣಿ, ನನ್ನ ತಟ್ಟೆಯ ತುಂಬಸಿರನ್ನು ನೋಡಿ ಒಂದು ತರಹ ಹುಬ್ಬೇರಿಸಿದ. ಇಷ್ಟು ತಿಂದು ಜೀರ್ಣಿಸಿಕೊಳ್ಳುವ ಈ ಕರಿ ಪಿಶಾಚಿ ಯಾವುದು ? ಎಲ್ಲಿಂದ ಬಂತು ? ಎಂದವನಿಗೆ ಅಚ್ಚರಿಯಾಗಿರಬೇಕು. ಅತ್ತ ಅವ ಹೋದ. ಇತ್ತ ಆ ತುಂಡುಗಳೆಲ್ಲವನ್ನೂ ಬಲಗಡೆ ಕಂಡ ಹುಡುಗನ ಕೈಗೆ ತಟ್ಟೆಯಿಂದ ಜಾರಿಸಿದೆ.

ಒಂದೆರಡು ನಿಮಿಷ ಆಗಿರಬಹುದು. ಆ ಮಾಣಿ ತಿರುಗಿ ಬಂದ ನನ್ನ ಹತ್ತಿರ. ನನ್ನ ತಟ್ಟೆ ಅಷ್ಟು ಬೇಗ ಖಾಲಿ. ನನ್ನ ನೋಡಿದ. ಏನೋ ಯೋಚಿಸಿದ. ಅನುಭವಸ್ಥ, ನಕ್ಕ. ಇನ್ನೂ ಬೇಕೆ ಎಂದು ಸಂಜ್ಞೆ ಮಾಡುತ್ತಾ ಕೇಳಿದ. ಅವನ ಭಾಷೆ ಅರ್ಥವಾಗದೇ ಇದ್ದರೂ ಸಂಜ್ಞೆಯನ್ನು ಅರ್ಥ ಮಾಡಿಕೊಂಡು ಹ್ಞೂ ಎಂದೆ. ತಿರುಗಿ ಬಡಿಸಿದ. ಅಲ್ಲೇ ನಿಂತ. ಆ ಊರಿನವರು ಆ ತುಂಡುಗಳನ್ನು ಲೊಟ್ಟೆ ಹೊಡೆಯುತ್ತ ತಿನ್ನಬಹುದು. ಆದರೆ ನೋಡಿದರೇ ವಾಕರಿಕೆ ನನಗೆ. ಇವನ ಕಾಟಕ್ಕೆ ಹೇಗೆ ತಿನ್ನಲಿ ? ತಿಂದರೆ ಖಂಡಿತ ವಾಂತಿ. ನಾನೂ ಬಡಿಸಿದ ತಟ್ಟೆಯ ಮುಂದೆ ತೂಕಡಿಸಿದೆ. ಅವನೇ ಕೈ ಸನ್ನೆ ಮಾಡಿ ನಗುತ್ತಾ ಕಡಲನ್ನು ತೋರಿಸಿದ. ಬೇಗ ತಟ್ಟೆಯನ್ನು ಕಡಲ ಕಡೆಗೆ ಚಾಚಿದೆ.

ಮೀನಿನ ತೆರದಲ್ಲಿ ಹುಡುಗನೊಬ್ಬ ಮಿಂಚಿ ಬಂದು, ತಟ್ಟೆಯಲ್ಲಿದ್ದುದನ್ನು ತೆಗೆದುಕೊಂಡು ಮಾಯವಾದ. ಬಡಿಸುವ ಮಾಣಿ ನಗುತ್ತಾ ನೋಡುತ್ತಿದ್ದ. ಈಗ ಮೆಚ್ಚುಗೆಯ ನಗೆಯಂತೆ ಕಾಣಿಸಿತು. ಆಮೇಲೆ ತಿರುಗಿ ಬ್ರೆಡ್ ತಂದ ಬೆಣ್ಣೆ ತಂದ. ಆಲೂಗಡ್ಡೆ ಹೋಳುಗಳನ್ನು ತಂದ. ಶಾಖಾಹಾರಿ ನಾನು ಅಂತ ತಿಳಿದು ಹೊಟ್ಟೆ ತುಂಬಲು ಸಾಕಷ್ಟು ಶೇವಿಗೆ, ತರಕಾರಿ ತಂದು, ಅತ್ತೆ ಮನೆ ಅಳಿಯನಿಗೆ ಉಪಚಾರ ಮಾಡುವ ಹಾಗೆ ನನಗೆ ಬಡಿಸಿದ.

ಊಟ ಮುಗಿದ ಮೇಲೆ ನನ್ನ ಜೇಬಿನಿಂದ ಒಂದು ಪ್ಯಾಕೆಟ್ ಸಿಗರೇಟ್ ತೆಗೆದು ಅವನಿಗೆ ಕೊಟ್ಟೆ. ಕಿವಿಯಿಂದ ಕಿವಿ ತನಕ ನಗುತ್ತಾ ಗ್ರಾಸಿಯೋ ಗ್ರಾಸಿಯೋ ಅಂತ ಹೇಳಿದ. ಆ ಊರುಗಳಲ್ಲಿ ಸಿಗರೇಟಿನ ಬೆಲೆ ಸ್ವಲ್ಪ ದುಬಾರಿ. ಆದರೆ ರಾಷ್ಟ್ರದಿಂದ ರಾಷ್ಟ್ರಕ್ಕೆ ಹಾರಾಡುವ ವಿಮಾನಗಳಲ್ಲಿ ಸುಂಕವಿಲ್ಲ, ಅಂದರೆ ಅತಿ ಅಗ್ಗದ ಬೆಲೆಗೆ ಸಿಗರೇಟು ಇತ್ಯಾದಿ ದೊರಕುತ್ತವೆ. ಇಂತಹ ಭಕ್ಷೀಸ್ ಕೊಟ್ಟರೆ, ನಮಗೂ ಉಳಿತಾಯ, ಇಸುಕೊಂಡವರಿಗೂ ಸಂತಸ. ಇದೊಂದು ಪಾಠ ಕಲಿತು ಆಚರಣೆಗೆ ತಂದಿದ್ದೆ.

ಕಡಲ ಅಂಚಿನ ಭಿಕ್ಷುಕ ಹುಡುಗರನ್ನು ನೋಡಿದಾಗ, ಹೈಸ್ಕೂಲಿನಲ್ಲಿ ಓದಿದ ''ಪೆಪ್ಪೆನಿಯಲ್ಲೊ'' ಕತೆ ನೆನಪಿಗೆ ಬಂತು. ಇಟಲಿಯ ಬೀದಿ ಹುಡುಗನ, ಭಿಕಾರಿ ಅನಾಥ

ಹುಡುಗನ ಕತೆ. ಎದೆ ಸೆಳೆಯುವ ಕತೆ. ಈ ಹುಡುಗರೂ ಪೆಪ್ಪೆನಿಯಲ್ಲೋ ಗೋತ್ರದವರೇ ಎಂದು ಮನದಟ್ಟಾಯಿತು. ಪೆಪ್ಪೆನಿಯಲ್ಲೋ ಕತೆ ದಿಟವಾದ ಜೀವನದ ವರ್ಣನೆಯೇನೋ ಅದಕ್ಕೇ ಅಷ್ಟು ಮೋಹಕವಾಗಿತ್ತು ಎಂದನಿಸಿತು.

ಊಟ ಮುಗಿದಾಗ ಸುಮಾರು 9 ಗಂಟೆ ರಾತ್ರಿ. ನಂತರ ಹೊರಟೆವು. ರೂಂ ಸೇರಬೇಕಾದರೆ 3-4 ತಾಸುಗಳ ಪ್ರಯಾಣ. ಬೆಳಗಿನಿಂದ ಒಬ್ಬನೇ ಡ್ರೈವರ್ ಬಸ್ ನಡಸುತ್ತಿದ್ದ. ಸುಮಾರು ಅರ್ಧ ಗಂಟೆ ಹೆದ್ದಾರಿಯಲ್ಲಿ ಹೋಗಿರಬೇಕು. ಡ್ರೈವರ್ ತೂಕಡಿಸುತ್ತಾನೇನೋ ಎಂದು ಅನುಮಾನ ಬಂತು. ಮುಂದೆ ಕೂತಿದ್ದ ಸ್ನೇಹಿತನಿಗೆ ಎಚ್ಚರಕೊಟ್ಟೆ. ಅವ ಡ್ರೈವರನಿಗೆ ಸಿಗರೇಟ್ ಕೊಟ್ಟು ಹತ್ತಿಸಿದ. ಕತ್ತಲು ಹೆದ್ದಾರಿಗೆ ಬಸ್ಸಿನ ಬೆಳಕು ಬೀಳುತ್ತಿದ್ದರೆ, ಡ್ರೈವರನ ಮುಖಕ್ಕೆ ಸಿಗರೇಟ್ ಹತ್ತಿಸುವ ಬೆಳಕು ಆಗಾಗ ಬೀಳುತ್ತಿತ್ತು.

ದುರ್ಭಿಕ್ಷದಲ್ಲಿ ಅಧಿಕ ಮಾಸ ಅಂದಹಾಗೆ, ಜೋರು ಮಳೆ ಬೀಳಲಾರಂಭಿಸಿತು. ಬಸ್ಸಿನ ವೇಗ ತಾನಾಗಿಯೇ ಕಡಿಮೆಯಾಯ್ತು. ರಸ್ತೆಯೂ ಸರಿಯಾಗಿ ಕಾಣಿಸದು. ಡ್ರೈವರನಿಗೆ ಆಯಾಸ ಮತ್ತು ನಿದ್ರೆ.

''ಭಗವಂತ ! ಹೋಟಲು ಸೇರಿಸಪ್ಪಾ ! ಈ ರಾತ್ರಿ. ಬಸ್ಸಿಗೆ ಏನೂ ತೊಂದರೆ ಆಗದಿರಲಪ್ಪ. ಅದರ ಆರೋಗ್ಯ ಕಾಪಾಡಪ್ಪ'' ಎಂದು ಅಲ್ಲಿನ ದೇವರನ್ನು ಮನಸಾರೆ ಪ್ರಾರ್ಥಿಸಿಕೊಂಡೆ. ಅಭ್ಯಾಸವಿಲ್ಲದೆ ಮಧ್ಯಾಹ್ನವೆಲ್ಲಾ ಸ್ಮಶಾನ ನಗರಿಯಲ್ಲಿ ನಡೆದಾಡಿದುದ ರಿಂದಲೂ, ನೇಪಲ್ಸ್ ಮಾಣಿಯ ಉಪಚಾರದಿಂದಲೂ, ನನಗೆ ತೂಕಡಿಕೆ ಬರುತ್ತಿತ್ತು.

ಯಾವುದೋ ಮಾಯದಲ್ಲಿ ಎಚ್ಚರವಾಯ್ತು. ಏನೋ ಅಪಘಾತ ಆಗಿದೆ ಎಂದು ತಟ್ಟಂತ ಹೊಳೆಯಿತು. ಕಣ್ಣು ತೆರೆದು ನೋಡಿದೆ.

ರೋಂನಲ್ಲಿ ನಾವು ಉಳಿದುಕೊಂಡಿದ್ದ ಹೋಟಲ ಮುಂದೆಯೇ ಬಸ್ ನಿಂತಿತ್ತು. ಗಡಿಯಾರ ನೋಡಿಕೊಂಡೆ. ರಾತ್ರಿ 1 ಗಂಟೆಯಾಗಿತ್ತು.

ಬೇಗ ಹೋಗಿ ಕೊಠಡಿ ಸೇರಿ ಬಿದ್ದುಕೊಂಡೆ. ''ಥ್ಯಾಂಕ್ಯೂ ದೇವರೇ'' ಎಂದು ಹೇಳಲು ಮರೆತೆ. ಹೊಳೆ ದಾಟಿದ ಮೇಲೆ ಅಂಬಿಗ ಮಿಂಡ ಅಲ್ಲವೇ ?

## ''ವ್ಯಾಟಿಕನ್''

ಎ.ವಿ. ಸ್ಕೂಲಿನಲ್ಲಿ ಓದುತ್ತಿದ್ದಾಗ ಒಂದು ಬುಧವಾರ ಶಾಲೆಗೆ ಹೋಗಿದ್ದೆವು. ಅವತ್ತು ರಜಾ ಅಂತ ಹೋದಮೇಲೆ ಗೊತ್ತಾಯಿತು. ಸಂಸ್ಕೃತ ಪಂಡಿತರೂ ರಜ ಎಂದು ತಿಳಿಯದೆ ಹೊತ್ತಿಗೆ ಸರಿಯಾಗಿ ಬಂದಿದ್ದರು. ನೋಟೀಸ್ ಬೋರ್ಡ್ ಮೇಲೆ Ash Wednesday ಆದ್ದರಿಂದ ರಜ ಎಂದು ಘೋಷಿಸಿದ್ದರು. ನಮ್ಮ ಶಾಲೆಗೆ ಆ ವರ್ಷ ಹೊಸ ಹೆಡ್‌ಮಾಸ್ತರು ಬಂದಿದ್ದರು. ಅವರು ಕ್ರಿಶ್ಚಿಯನ್ನರು. Ash Wednesday ಎಂದರೆ ಏನು ಸಾರ್ ಎಂದು ಪಂಡಿತರನ್ನು ಕೇಳಿದೆವು. ಆಚಾರ್ಯವಂತ ವೈದೀಕ ಬ್ರಾಹ್ಮಣ ಆತ. ಅರೆ ಬರೆ ಇಂಗ್ಲೀಷ್ ಬರುತ್ತಿತ್ತು. Ash Wednesday ಎಂದರೆ ಬೂದಿ ಬುಧವಾರ ಅಂತ. ಎಂತದೋ ಹಬ್ಬ ಇರಬೇಕು ನನಗೆ ಗೊತ್ತಿಲ್ಲಪ್ಪಾ ! ಇವತ್ತು ರಜಾ ಎಂದು ಗೊತ್ತಿದ್ದರೆ ಬ್ರಾಹ್ಮಣಾರ್ಥಕ್ಕೆ ಕರೆದಿದ್ದರು. ಅಲ್ಲಿಗೆ ಹೋಗಬಹುದಾಗಿತ್ತು. ಆಗುಲ್ಲ ಎಂದುಬಿಟ್ಟೆ ಎಂದು ಅಳು ಮೋರೆ ಮಾಡಿಕೊಂಡು ಹೊರಟುಹೋದರು. ಆ್ಯಷ್ ವೆಡ್‌ನೆಸ್‌ಡೆ ಅಂದರೆ ನನಗೆ ಸಂಸ್ಕೃತ ಪಂಡಿತರ ತಪ್ಪಿಹೋದ ಬ್ರಾಹ್ಮಣಾರ್ಥದ ಊಟದ ನೆನಪೇ ಬರುತ್ತದೆ.

ರೋಂನಲ್ಲಿ ಬುಧವಾರ ಬೆಳಿಗ್ಗೆ ಬಂತು. ನಮ್ಮ ಹೋಟಲಿನ ಮ್ಯಾನೇಜರು ಕೆಲವು ದಿನ ಬೊಂಬಾಯಿ ಹೋಟಲೊಂದರಲ್ಲಿ ತುಂಬಾ ಹಿಂದೆ ಬಾಣಸಿಗನಾಗಿದ್ದನಂತೆ. ''ನಮ್ಮೂರ ಉಪ್ಪಿನಕಾಯಿ ಊಟ ಎಂದು ಸಿಗುತ್ತೋ'' ಎಂದು ನಮ್ಮ ತಂಡದ ವ್ಯವಸ್ಥಾಪಕ ಬವೇಜ ಎಂಬವನೊಡನೆ ನಾನು ಗೊಣಗುಟ್ಟದ್ದು ಕೇಳಿಸಿತಂತೆ. ಕಾರಣ ಆತ ನಮ್ಮ ಬಳಿಗೆ ಬಂದು, ''ಈ ರಾತ್ರಿ ನಿಮಗೆ ಇಂಡಿಯಾ ಅಡಿಗೆಯನ್ನೇ ಮಾಡಿ ಬಡಿಸುತ್ತೇನೆ. ಇಬ್ಬರಿಗೆ ಊಟ ಹಾಕಲು ಸಾಧ್ಯ, ಯಾರಿಗೂ ಹೇಳಬೇಡಿ, ನನ್ನ ಕೊಠಡಿಯಲ್ಲಿ ಉಣ್ಣುವಿರಂತೆ'' ಎಂದ.

ಬುಧವಾರ. ನಮ್ಮೂರ ಊಟ. ಸಂಸ್ಕೃತ ಪಂಡಿತರ ತಪ್ಪಿ ಹೋದ ವೈದೀಕದ ಊಟದ ನೆನಪಾದ್ದು ಸಹಜವೇ ಅಲ್ಲವೇ ? ಆದರೆ ಆ ಬುಧವಾರ ಬೂದಿ ಬುಧವಾರ ಆಗಿತ್ತಿಲ್ಲ.

''ಈ ಬೆಳಿಗ್ಗೆ ವಾಟಿಕನ್‌ಇಗೆ ಭೇಟಿ'' ಎಂದು ನಮ್ಮ ನಾಯಕರು ನಾಷ್ಟಾ ಮಾಡುವಾಗ ಹೇಳಿದರು. ತಿರುಗಿ ಬೂದಿ ಬುಧವಾರದ ನೆನಪಾಯ್ತು. ಪ್ರಾಚೀನ ಮಠವೊಂದಕ್ಕೆ ಭೇಟಿ ಕೊಡಲು ಯಾವಾಗಲೂ ನನಗೆ ಉತ್ಸಾಹ. ನನ್ನಿಂದ ಕಾಣಿಕೆ ಬೇಡದ ಮಠಗಳಿಗೆ.

ವ್ಯಾಟಿಕನ್ನಿಗೆ ಹೋದೆವು. ಇದು ಕೇವಲ ಮಠವಲ್ಲವಲ್ಲ ! ರಾಷ್ಟ್ರವೂ ಕೂಡ. ಪ್ರಪಂಚದಲ್ಲಿ ಅತಿ ಸಣ್ಣದಾದ ಆದರೂ ಸ್ವತಂತ್ರವಾದ ರಾಷ್ಟ್ರ. ಅಂದಮೇಲೆ ರಾಷ್ಟ್ರ ನಾಯಕರಿಗೆ ಇರುವ ಸಕಲ ರಾಜ ಮರ್ಯಾದೆಗಳೂ ಉಂಟು. ಅಲ್ಲದೆ ಮಠಾಧಿ ಪತಿಗಳಿಗಿರುವ ಸಕಲ ಸೌಭಾಗ್ಯಗಳೂ ಇವೆ. ಹಲವಾರು ಶತಮಾನಗಳಿಂದ ಬೆಳೆದು ಬಂದ ರಾಷ್ಟ್ರ ಮಠ. ಪ್ರಪಂಚದ ಎಲ್ಲೆಡೆಗಳಲ್ಲೂ ಈ ಮಠದ ಶಾಖೋಪಶಾಖೆಗಳು ಹರಡಿವೆ. ಜೀವಂತವಾಗಿವೆ. ಚಿಗುರುತ್ತಿವೆ. ಕೆಲವು ಕಡೆಗಳಲ್ಲಂತೂ ಲಂಟಾನಾ ಹರಡಿದಂತೆ ಹರಡುತ್ತಲೂ ಇವೆ. ಆದುದರಿಂದ ಈ ಮಾತೃಕೇಂದ್ರವನ್ನು ನೋಡಲು ತುಸು ಉತ್ಸಾಹವಿತ್ತು.

ತಲತಲಾಂತರದಿಂದ ವ್ಯಾಟಿಕನ್ ಪೋಪರಿಗೆ ಭಕ್ತರು ಮಿತ್ರರು, ಕೊಟ್ಟ ಬಳುವಳಿಗಳನ್ನೆಲ್ಲಾ ಪ್ರದರ್ಶಿಸಿದ್ದಾರೆ. ಇಂದು ಮತಾತೀತವಾದ ಏಷ್ಯಾದ ಅಂದು ಆಳಿದ ರಾಣಿ ಕ್ಯಾಥರೀನ್ ಅರ್ಪಿಸಿದ ಉಡುಗೊರೆಗಳು, ಕಣ್‌ಸೆಳೆಯುತ್ತವೆ. ಯೂರೋಪಿನ ಎಲ್ಲ ರಾಷ್ಟ್ರಗಳ ನಾಯಕರೂ ಒಂದಲ್ಲ ಒಂದು ದಿನ ಅರ್ಪಿಸಿದ ಬಳುವಳಿಗಳೆಲ್ಲಾ ಅಲ್ಲಿವೆ. ಚರಿತ್ರೆಯ ಪುಟಗಳನ್ನು ತಿರುವಿ ಹಾಕಿದಂತಾಗುತ್ತದೆ ಈ ಪ್ರದರ್ಶನವನ್ನು ನೋಡಿದಾಗ. ಒಂದೊಂದೂ ಶತಮಾನದ ಒಂದೊಂದೂ ರಾಷ್ಟ್ರದ ಹಿರಿಯ ನಾಯಕರು ಪವಿತ್ರ ಪೋಪರಿಗೆ ಅರ್ಪಿಸಿದ ಕಾಣಿಕೆಗಳನ್ನು ನೋಡಿದಾಗ, ಕ್ರಿಶ್ಚಿಯನ್‌ರಲ್ಲದ ನಾಯಕರೂ ಕೂಡ ಪೋಪರ ಸ್ನೇಹವನ್ನು ಆಶಿಸುತ್ತಿದ್ದರು ಎಂಬುದು ಖಚಿತವಾಗುತ್ತದೆ. ಅಂದರೆ ಯೂರೋಪಿನ ರಾಜಕಾರಣದಲ್ಲೂ ಪೋಪರು ಹಿರಿಯ ಪಾತ್ರವನ್ನು ನೇರವಾಗಿಯೋ ಅಥವಾ ಗುಪ್ತವಾಗಿಯೋ ವಹಿಸುತ್ತಿದ್ದರು.

ವ್ಯಾಟಿಕನ್ ಗುರು ಮನೆಯು ಯಾವ ಅರಮನೆಗಿಂತಲೂ ಕಳಪೆಯಾಗಿಲ್ಲ. ಅಲ್ಲಿನ ''ಸಿಸ್ಟೈನ್ ಚಾಪೆಲ್'' ಪ್ರಾರ್ಥನಾ ಮಂದಿರವು ಪ್ರಪಂಚದಲ್ಲೇ ಪ್ರಸಿದ್ಧವಾದುದು. ಆ ಚರ್ಚಿನ ಸೂರನ್ನು ಹೆಸರಾಂತ ವರ್ಣ ಶಿಲ್ಪಿಗಳು ಶೃಂಗರಿಸಿದ್ದಾರೆ. ಯೇಸುವಿನ ಜೀವನದ ಹಲವಾರು ಪ್ರಕರಣಗಳನ್ನು ಮೈಕೆಲ್ ಆಂಜೆಲೋ ಮುಂತಾದವರು ಚಿತ್ರಿಸಿದ್ದಾರೆ. ಇಂದಿಗೂ ಅವನ್ನು ನೋಡಿದರೆ ಎದೆ ಅರಳುತ್ತದೆ.

ಸಂತ ಜ್ಞಾನ್ ಅನ ಚಿತ್ರವೊಂದಿದೆ. ಆ ದಿವ್ಯ ಚಿತ್ರವನ್ನು ನೋಡಿದಾಗ ಜ್ಞಾನ್ ಜೀವಂತವಾಗಿದ್ದಾನೋ ? ಅವನ ಶಿಲಾ ಸ್ಮಾರಕವೋ ? ಎಂದು ಅನುಮಾನ ಬರುವಂತಿದೆ. ಬಣ್ಣಗಳು ಆ ರೀತಿ ಎದ್ದು ಕಾಣುತ್ತವೆ. ಚಿತ್ರದಲ್ಲಿ ಸಾಮಾನ್ಯವಾಗಿ ಉದ್ದ ಅಗಲ ಇರುತ್ತದೆ. ದಪ್ಪದ ಪ್ರಮಾಣ ಇರುವುದಿಲ್ಲ. ಆದರೆ ಈ ಚಿತ್ರದಲ್ಲಿ ದಪ್ಪವೂ ಎದ್ದು ಕಾಣುತ್ತದೆ. ಎಂತಹ

ಭಕ್ತಿಯಿಂದ ಮೈಕೆಲ್ ಅಂಜೆಲೋ ಈ ಕಾಯಕವನ್ನು ಕೈಗೊಂಡಿರಬೇಕು ! ಎಂತಹ ತಪಸ್ವಿಯಾಗಿರಬೇಕು ಆತ.

ಇಂತಹ ಚಿತ್ರಗಳು ನೂರಾರು. ಹೊಸ ಪೋಪರು ಈ ಮಂದಿರದಲ್ಲೇ ಅಭಿಷಿಕ್ತರಾಗಿ ತಮ್ಮ ಪೀಠವನ್ನು ಅಲಂಕರಿಸುವುದು. ಪ್ರತಿಯೊಂದು ತಲೆಮಾರಿನ ಕ್ರಿಶ್ಚಿಯನ್ ಸಾಧು ಸಂತರೂ ಈ ಮಂದಿರದಲ್ಲಿ ಭಕ್ತಿ ಪರವಶರಾಗಿ ಪ್ರಾರ್ಥಿಸಿದ್ದಾರೆ. ಆ ಸಂತರ ಆಶೀರ್ವಾದಗಳು ಮಂದಿರವನ್ನು ಪವಿತ್ರವನ್ನಾಗಿಸಿದೆ. ಅಂದಮೇಲೆ ಯಾರು ಪೋಪರಾಗಿ ಆರಿಸಲ್ಪಟ್ಟರೂ ಈ ಪಾವಿತ್ರ್ಯತೆ ಅವರ ರಕ್ಷಾ ಕವಚವಾಗುತ್ತದೆ. ಆದುದರಿಂದಲೇ ಇಂದಿಗೂ ಈ ಮಠ ಓಜಸ್ಸಿನಿಂದ ತುಂಬಿದೆ. ಮಠದಲ್ಲಿ ಜೀವ ನಾಡಿ ಮಿಡಿಯುತ್ತಿದೆ.

ಇತರ ಇಗರ್ಜಿಗಳೂ ಲೋಕ ಪ್ರಸಿದ್ಧವಾದುವು. ಸಂತ ಪೀಟರೀನ ಬೆಸಿಲಿಕಾ ಭವ್ಯವಾದದ್ದು. ಇಲ್ಲಿ ನಡೆದ ಒಂದು ಪೂಜೆಯನ್ನು ನೋಡಿದಾಗ ರೋಮನ್ ಕ್ಯಾಥೊಲಿಕ್ ಕ್ರಿಶ್ಚಿಯನ್ನರು ಶುದ್ಧ ವೈದೀಕರು, ಆ ತೆರನಾಗಿಯೇ ಯಜುರ್ವೇದದಲ್ಲಿ ನಿಯಮಿತವಾದಂತೆ ಪೂಜಾ ಕ್ರಮ ನಡೆಸುತ್ತಾರೆ. ಪುಷ್ಪಂ ಸಮರ್ಪಯಾಮಿ ಗಂಧಂ ಸಮರ್ಪಯಾಮಿ, ಮದ್ಯಂ ಸಮರ್ಪಯಾಮಿ, ನೈವೇದ್ಯಂ ಸಮರ್ಪಯಾಮಿ ಎಂದು ಚಾಚೂ ತಪ್ಪದೆ ಬೇರೆ ಭಾಷೆಯ ಬೇರೆ ಮಂತ್ರಗಳನ್ನು ಹೇಳಿಕೊಂಡು, ಗೊಡ್ಡು ವೈದೀಕರ ಪೂಜೆಯನ್ನೇ ಮಾಡುತ್ತಾರೆ. ದಿಟವಾಗಲೂ ಅಲ್ಲಿನ ಪೂಜಾರಿಗಳು ಗೊಡ್ಡುಗಳು ಅವರು ಮದುವೆಯಾಗುವಂತಿಲ್ಲ. ಆಜನ್ಮ ಬ್ರಹ್ಮಚಾರಿಗಳು.

ಒಂದು ಇಗರ್ಜಿಯನ್ನು ನೋಡುತ್ತಿದ್ದಾಗ ನಮ್ಮ ಊರಿನ ಪುಟ್ಟ ಬಿಷಪ್ ಒಬ್ಬರು ಸಿಕ್ಕಿದರು. ಅವರೂ ಯಾತ್ರಾರ್ಥಿಯಾಗಿ ಪೋಪರಲ್ಲಿಗೆ ಬಂದಿದ್ದರು. ''ಇಂದು ಮಧ್ಯಾಹ್ನ ನನ್ನೊಡನೆ ಬಾ ಪೋಪರ ಸಂದರ್ಶನ ದೊರಕಿದರೂ ದೊರಕೀತು'' ಎಂದು ತುಂಬ ಆದರದಿಂದ, ವಾತ್ಸಲ್ಯದಿಂದ ಹೇಳಿದರು.

ಆ ಇಗರ್ಜಿಯ ಪ್ರವಚನ ಪೀಠದ ಪಕ್ಕದಲ್ಲಿದ್ದ ಶಿಲುಬೆಯ ಮುಂದೆ ಹಲವು ಪರದೇಶಗಳ ಯಾತ್ರಾರ್ಥಿಗಳು ಮೋಂಬತ್ತಿ ಹಚ್ಚಿಟ್ಟು ಮಂಡಿಯೂರಿ ಪ್ರಾರ್ಥನೆ ಮಾಡುತ್ತಿದ್ದಗು. ಬಡವರಂತೆ ಕಾಣುತ್ತಿದ್ದರು. ಆದರೆ ಅವರ ಮುಖದಲ್ಲಿ ಎಂತಹ ಭಕ್ತಿ ಭಾವ ಅಂತ. ಎಲ್ಲವೂ ನಿನ್ನದೇ ನನ್ನ ದೇವ ಎಂದು ಸಂಪೂರ್ಣ ಶರಣಾಗತಿಯಾದವರ ನಿಷ್ಕಲ್ಮಷ ದೃಶ್ಯ. ಇದನ್ನು ನೋಡುತ್ತಿದ್ದೆ. ನನ್ನ ಬಿಷಪ್ ಮಿತ್ರರು ಪೋಪರ ಸಂದರ್ಶನದ ಅವಕಾಶವನ್ನು ಹೇಳುತ್ತಿದ್ದಾಗ. ''ಪೋಪರು ಬಲು ಕಾಲದ ಪುಣ್ಯದಿಂದ ಆ ಪೀಠದಲ್ಲಿ ಇಂದು ಇದ್ದಾರೆ. ನಾನು ಅಂತಹ ಪುಣ್ಯಶಾಲಿಯಲ್ಲ, ಅಂತಹವರ ಸಂದರ್ಶನಕ್ಕೂ ಯೋಗ್ಯತೆ ಇಲ್ಲ. ಆದರೆ ಈ ಭಕ್ತಿ ಪರವಶರಾದ ಬಡವರನ್ನು ಕಂಡಾಗ ಇವರ ಸೇವೆ ಮಾಡುವ ಯೋಗ್ಯತೆ ಭಗವಂತ ದಯಪಾಲಿಸಿದರೆ ಸಾಕು, ಇವರ ದರ್ಶನವೇ ನನಗೆ ಸಂತಸ ತಂದಿದೆ'' ಎಂದು ಹೇಳಿದೆ.

"ನೀನು ಹೀಗೆ ಅಂದಿದ್ದು ಒಳ್ಳೆಯದೇ ಆಯಿತು. ಏಕೆಂದರೆ ಪೋಪರ ದರ್ಶನ ಸುಲಭ ಸಾಧ್ಯವಲ್ಲ. ಇಂಡಿಯಾದಿಂದ ನಿಮ್ಮನ್ನು ನೋಡಲು ಬಂದಿದ್ದಾರೆ ಎಂದರೆ ಸಾಧ್ಯವಾಗಬಹುದು ಎಂದು ನನ್ನ ಊಹೆ. ಆದರೆ ಇದೇ ಕಾರಣ ಹೂಡಿ 30-40 ಜನ ದಿನಾಲೂ ಕಾದಿರುತ್ತಾರೆ. ನನಗೂ ತೊಂದರೆ ತಪ್ಪಿತು'' ಎದು ಬಿಷಪ್ಪರು ಸಮಾಧಾನದಿಂದ ಉಸಿರಾಡಿದರು.

ನನ್ನ ಮೇಲಿನ ವಾತ್ಸಲ್ಯದಿಂದ ಹೇಳಿದರು. ದಿಟ. ಆದರೆ ಅವರಿಗೂ ಸುಲಭ ಸಾಧ್ಯವಲ್ಲದ ಸಾಹಸದ ಕಾರ್ಯ ಅದು. ಸದ್ಯ, ಅವರೂ ಪಾರಾದರು. ಒಂದು ರೀತಿಯಲ್ಲಿ ನಾನೂ ಪಾರಾದೆ.

ಸಂತ ಪೀಟರಿನ ಬೆಸಿಲಿಕಾದಿಂದ ಹೊರ ಬಂದಾಗ, ಹಾದಿಯ ಬಲಗಡೆಯೇ ಚಿತ್ರಗಳ ಅಂಗಡಿಗಳಿವೆ. ಅಲ್ಲಿಗೆ ಹೋಗಿ ಕೊಳ್ಳಲು ಅಂದವಾದ ಚಿತ್ರಗಳು ಸಿಗುತ್ತವೆಯೇ ನೋಡಿದೆ. ಇಟಲಿಯ ಹೆಸರಾಂತ ಇಗರ್ಜಿಗಳಲ್ಲಿರುವ ವರ್ಣ ಚಿತ್ರಗಳ ಪ್ರತಿಗಳು ಅಲ್ಲಿವೆ. ಎಷ್ಟು ಚೆನ್ನಾಗಿವೆ ಅಂತ. ಹೆಚ್ಚೇನೂ ಬೆಲೆ ಅಲ್ಲ. ಸುಮಾರು 15-20 ರೂ.ಗಳಷ್ಟು ಆದರೆ ನನ್ನಲ್ಲಿದ್ದುದು 15 ರೂಪಾಯಿಗಳಷ್ಟೇ ಹಣ. ಗೋಗರೆದು ಕಾಡಿ ಬೇಡಿ 2 ಚಿತ್ರ ಕೊಂಡು ತಂದೆ. ಈಗಲೂ ಅವನ್ನು ನೋಡಿದರೆ, ಇಗರ್ಜಿಗಳ ನೆನಪು ಹಸಿರಾಗುತ್ತದೆ.

★ ★ ★ ★

ರೋಂಇನ ಯಾವುದೋ ಬಡಾವಣೆಯಲ್ಲಿ ಬಲು ಅಂದವಾಗಿರುವ ಮ್ಯೂಸಿಯಂ ಇದೆ, ಬರುವುದಾದರೆ ಹೋಗೋಣ ಎಂದು ಗೆಳೆಯನೊಬ್ಬ ಹೇಳಿದ. ಸೈ ಅಂತ ನಾವಿಬ್ಬರೂ ಮಂದೆಯನ್ನು ತಪ್ಪಿಸಿಕೊಂಡು ಹೊರಟೆವು.

ಹೊಸ ಊರು. ಭಾಷೆ ತಿಳಿಯದು. ಆದರೂ ಹುಚ್ಚು ಉತ್ಸಾಹ. ನನ್ನ ಗೆಳೆಯ ಷಹರಿನ ಬಸ್ ನಂಬರು, ಮಾರ್ಗ, ಇವನ್ನು ಸ್ವಲ್ಪ ತಿಳಿದುಕೊಂಡಿದ್ದ 37 ನಂಬರು ಬಸ್ ಬಂತು. ಇಬ್ಬರೂ ಹತ್ತಿದೆವು. 15-20 ನಿಮಿಷಗಳಾದ ಮೇಲೆ ಇಲ್ಲಿ ಇಳಿಯಬೇಕು ಎಂದು ಹೇಳಿದ. ಅಲ್ಲಿ ಇಳಿದೆವು. ಮ್ಯೂಸಿಯಂಇಗೆ ಹೋದೆವು. ಬಾಗಿಲು ಹಾಕಿತ್ತು. ರಜಾ ಅಂತೆ ಆ ದಿನ. ಪೆಂಗು ಮುಖ ಹಾಕಿಕೊಂಡು, ಅಲ್ಲಿದ್ದ ಅಂಗಡಿಗಳ ತೋರು ಕಿಟಕಿಗಳನ್ನು ನೋಡಿ ಸಂತೋಷಪಟ್ಟೆವು. ಹೋಗೋಣೇನಮ್ಮ ಎಂದಂದ ಗೆಳೆಯ. ಸೈ ಎಂದೆ. ಆಗ ಸುಮಾರು 5-5.30 ಆಗಿರಬಹುದು. ತಿರುಗಿ ಬಸ್ ಬಂತು. 37 ನಂಬರು ಡಿಖಾವಾಗಿತ್ತು.

ಬಸ್ ತುಂಬಾ ಜನ ಕಿಕ್ಕಿರಿದಿದ್ದರು. ಹೇಗೋ ಇಬ್ಬರೂ ತೂರಿಕೊಂಡು ನಿಂತೆವು. ಆ ಸಮಯದಲ್ಲಿ ಬಸ್‌ಗಳಿಗೆ ತುಂಬಾ ಗಿರಾಕಿ ಅಂತ ಕಾಣುತ್ತೆ. ಆ ಬಸ್ಸುಗಳಲ್ಲೋ ಮುಂದುಗಡೆ ಹತ್ತಬೇಕು, ಹಿಂದುಗಡೆ ಬಾಗಿಲಲ್ಲಿ ಇಳಿಯಬೇಕು. ಮುಂದಿನ ಬಾಗಿಲಲ್ಲೇ ನಿಂತಿದ್ದೆವು. ಹಿಂದೆ ಇಬ್ಬರು ಗಂಡಸರು, ಮುಂದೆ ಇಬ್ಬರು ಹೆಂಗಸರು, ಇವರ ಮಧ್ಯೆ ಅಪ್ಪಚ್ಚಿಯಾಗಿದ್ದೆವು.

ಒಂದು ಯುಗ ಕಳೆದಿರಬಹುದು. ನಾವು ಇಳಿಯಬೇಕಾದ ನಿಲ್ದಾಣ ಬಂತು. ಗೆಳೆಯ, ಹೋಲ್ಡಾನ್ ಹೋಲ್ಡಾನ್ ಅಂತ ಬೊಬ್ಬೆ ಇಟ್ಟ. ಅವನ ಗಂಟಲಿಗೆ ಬೆದರಿ ಡ್ರೈವರ್ ನಿಲ್ದಾಣ ಸಿಗುವ ಮೊದಲೇ ಜಟ್ಟಂತ ನಿಲ್ಲಿಸಿದ. ಹೋಲ್ಡಾನ್ ಅರ್ಥವಾಯಿತೋ ಇಲ್ಲವೋ ನಾನರಿಯೆ. ಆದರೆ ಆ ಧ್ವನಿ ಬ್ರೇಕ್ ಹಾಕಿಸಿತ್ತು. ಫಲಿತಾಂಶ ಹಿಂದಕ್ಕೆ ನಾನು ವಾಲಿದೆ. ಗಂಡಸಿನ ಗಲ್ಲಕ್ಕೆ ನನ್ನ ತಲೆ ಹಾಕಿತು. ಮುಂದಿದ್ದ ಹೆಂಗಸರು ನನ್ನ ಮೇಲೆ ವಾಲಿದರು. ಅವರ ತಲೆ ನನ್ನ ಗಲ್ಲವನ್ನು ಗುಮ್ಮಿತು. ಅವರು ಧರಿಸಿದ್ದ ಕೂದಲ ಸೂಜಿಗಳು, ಇನ್‌ಜಕ್ಷನ್ ಕೊಟ್ಟವು. ಇಳಿಯುವ ಆತುರದಲ್ಲಿ ಆ ನೋವು ಕಾಣಿಸಲಿಲ್ಲ.

ಬಸ್ಸಿನ ಮುಂಭಾಗದಿಂದ ಹಿಂಬಾಗಿಲಿನ ಕಡೆಗೆ ಹೋಗುವ ಭರದಲ್ಲಿ, ಅಲ್ಲಿ ಅಟಕಾಯಿಸಿಕೊಂಡಿದ್ದ ಜನ ಜನಿಯರ ಮಧ್ಯೆ ನುಗ್ಗಿ ಹೋಗುವಾಗ ಸ್ವರ್ಗಕ್ಕಾದರೂ ಸುಲಭವಾಗಿ ಹೋಗಬಹುದು, ಎಂದು ಅನ್ನಿಸಿತು. ಕಡೆಗೂ ಹಿಂದಿನ ಇಳಿಯುವ ಬಾಗಿಲನ್ನು ಇಳಿದೆ. ನನ್ನ ಗೆಳೆಯ ನನ್ನ ಹಿಂದೆಯೇ ಇದ್ದ. ಅರ್ಧ ಇಳಿದಿದ್ದಾನೆ, ಆ ಬಾಗಿಲು ಮುಚ್ಚಿಕೊಳ್ಳಲಾರಂಭಿಸಿತು. ಅಯ್ಯಯ್ಯೋ ಎಂದ. ನಾನು ಅಯ್ಯಯ್ಯೋ ಎಂದು ಅನುಪಲ್ಲವಿ ಹಾಡಿದೆ. ಬಸ್‌ಇನ ಬಾಗಿಲು ತಿರುಗಿ ತೆರೆಯಿತು. ಅವನು ಇಳಿದ. ಎದೆ ಬೆನ್ನುಗಳನ್ನು ಮುಟ್ಟಿ ಮುಟ್ಟಿ ನೋಡಿಕೊಂಡ. ಬಾಗಿಲುಗಳು ತಮ್ಮಷ್ಟಕ್ಕೆ ತಾವೇ ಮುಚ್ಚಿಕೊಂಡವು. ನಂತರ ಬಸ್ಸು ಹೊರಟಿತು. ಬಸ್ಸನ್ನು ಹೊರಡಿಸಿದಾಗ, ಬಾಗಿಲುಗಳು ತಮ್ಮಷ್ಟಕ್ಕೆ ತಾವೇ ಹಾಕಿಕೊಳ್ಳುವ ಏರ್ಪಾಡಂತೆ ಅಲ್ಲಿ.

ಬಿಡಾರದ ಹೋಟಲಿಗೆ ಬಂದೆವು. ಸುಧಾರಿಸಿಕೊಂಡೆವು. ನಂತರ ಸಾಮಾನು ಕಟ್ಟಿ ಪ್ರಯಾಣ ಮುಂದುವರೆಸಲು ಸಿದ್ಧತೆಗಳನ್ನು ಮಾಡಿಕೊಂಡೆವು.

ರಾತ್ರಿ 8ಕ್ಕೆ ಸಿದ್ಧವಾದೆವು. ಊಟ ಹಾಕಿದರು. ಉಂಡು ಬಸ್ಸಿನಲ್ಲಿ ಕುಳಿತು ವಿಮಾನ ನಿಲ್ದಾಣಕ್ಕೆ ಹೋದೆವು.

ಮಧ್ಯ ರಾತ್ರಿ ರೋಂಇಂದ ಇಂಡಿಯದ ಬೋಯಿಂಗ್ ಹೊರಡಬೇಕಾಗಿತ್ತು. ಆದರೆ ನಮ್ಮ ಬೆಂಗಳೂರಿನ ಷಹರು ಬಸ್‌ಗಳಂತೆ ಅದು ಕಾರಣಾಂತರಗಳಿಂದ ಸುಮಾರು ಹೊತ್ತಾಗಿ ಹೊರಟಿತು. ನಿದ್ರೆಗಣ್ಣಿನಲ್ಲಿ ವಿಮಾನವನ್ನು ಹತ್ತಿದೆವು.

ಮಾರ್ಗಸಖಿ ಹೇಳಿದಳು. ಈಗ ಬೋಯಿಂಗ್ ಹೊರಡುತ್ತಿದೆ. ಬೆಳಗಿನ ಝಾವ 6ರ ಹೊತ್ತಿಗೆ ಕೈರೋವನ್ನು ಸೇರುತ್ತೇವೆ. 1800-ರೋ ಅಥವಾ 2000 ವೋ ಅಷ್ಟು ಮೈಲಿ ಹಾರಿ ಹೋಗುತ್ತೇವೆ ಅಂತ ಏನೋ ಹೇಳಿದ ನೆನಪು. ಜೋಂಪು ಏರಿತ್ತು. ಕೂತಲ್ಲೇ ತೂಕಡಿಸುತ್ತಿದ್ದೆ. ಅರೆ ನಿದ್ರೆ ಅರೆ ಎಚ್ಚರ. ಮೈ ಕೈ ನೋವು. ಕಾಲಿಗೆ ನಿದ್ರೆ ಬಂದರೆ ನನಗೆ ಎಚ್ಚರವಾಗುತ್ತಿತ್ತು. ನನಗೆ ನಿದ್ರೆ ಬಂದರೆ ಕಾಲಿಗೆ ಎಚ್ಚರವಾಗಿ ಎಬ್ಬಿಸುತ್ತಿತ್ತು. ಅಂತೂ ರಾತ್ರಿ ಕಳೆಯಿತು.

# ಕೈರೋ ನಿಲ್ದಾಣ

ಪಕ್ಕದ ಕಿಟಕಿಯಿಂದ ಸೂರ್ಯನ ಬೆಳಕು ಕಣ್ಣ ಮೇಲೆ ಝೂಡಿಸಿ ಬಿತ್ತು. ಎಚ್ಚರವಾಯ್ತು. ಸೂರ್ಯ ಆಗತಾನೇ ಉದಯಿಸುತ್ತಿದ್ದ. 35000 ಅಡಿ ಎತ್ತರದಲ್ಲಿ ನಮ್ಮ ವಿಮಾನ ಹಾರಾಡುತ್ತಿತ್ತು. ಆ ಎತ್ತರದಿಂದ ಸೂರ್ಯೋದಯವನ್ನು ನೋಡುವುದೇ ಒಂದು ಸೊಗಸು. ಸೂರ್ಯನಿಗೆ ಅದೇನು ಅವಸರವೋ ? ಬಲು ಬೇಗ ಬೇಗ ಮೇಲಕ್ಕೇರುತ್ತಿದ್ದಂತೆ ಕಾಣುತ್ತಿತ್ತು. ಅವನಿಗೂ ಬೆಳಗಿನ ಕಾಫಿಯ ಆತುರವೇನೋ ? ಧಡಪಡಿಸಿಕೊಂಡು ಏಳುತ್ತಿದ್ದಂತೆ ಅನಿಸಿತು.

''ಸೊಂಟದ ಪಟ್ಟಿ ಕಟ್ಟಿಕೊಳ್ಳಿ, ಧೂಮಪಾನ ನಿಲ್ಲಿಸಿ'' ಅಂತ ಗಗನಸಖಿಯ ಸೂಚನೆ ಕೇಳಿಸಿತು. ಓಹೋ ! ನಿಲ್ದಾಣ ಸಿಕ್ಕಿತು ಎಂದು ಸಿದ್ಧನಾದೆ. ತುಸು ವೇಳೆಯಲ್ಲೇ ಕೈರೋ ನಿಲ್ದಾಣದಲ್ಲಿ ಇಳಿದೆವು. ಸುಮಾರು 6 ಗಂಟೆಯಾಗಿತ್ತು.

ನಿಲ್ದಾಣದ ಬೈಠಕ್‌ಖಾನೆಗೆ ಹೋದೆವು. 120 ಮಂದಿ ಒಟ್ಟಿಗೆ ಹೋದೆವು. ಅಲ್ಲಿದ್ದುದು 6 ಶೌಚ ಗೃಹಗಳು ಮಾತ್ರ. ಬೆಳಗಿನ ಕಾಫಿಕೊಡುವ ಏರ್ಪಾಡಿತ್ತು. ವಿಮಾನದಲ್ಲೇ ದೇಹ ಶಾಂತಿ ಮಾಡಿಕೊಳ್ಳುವುದು ಒಳ್ಳೆಯದು, ಬೇಗ ಕಾಫಿ ಕುಡಿಯೋಣ ಎಂದು ನಿರ್ಧರಿಸಿದೆ. ನಾಷ್ಟಾ ಕೊಠಡಿಗೆ ಹೋದೆ.

ಹುಡುಗನಾಗಿದ್ದಾಗ ಅಲ್ಲಾಉದ್ದೀನನ ದೀಪದ ಕತೆಯನ್ನು ಬಲು ಆಸ್ಥೆಯಿಂದ ಓದಿದ್ದೆ. ದೀಪ ತಿಕ್ಕಿದರೆ ಭೂತ ಬಂದು ನಿಲ್ಲುವ ಚಿತ್ರವೊಂದಿತ್ತು. ನಾನು ಓದಿದ ಪುಸ್ತಕದಲ್ಲಿ. ಆ ಭೂತದಂತೆಯೇ ಇದ್ದ ಧಾಂಡಿಗ ಮಾಣಿಗಳು ಮೇಜುಗಳ ಬಳಿ ಅಲ್ಲಲ್ಲಿ ನಿಂತಿದ್ದರು. ''ನಿಮ್ಮ ನಾಯಕ, ಅಲಿಬಾಬಾ ! ಎಲ್ಲಿ'' ಎಂದು ಆ ನಾಲ್ವತ್ತೂ ಮಾಣಿಗಳನ್ನು ಕೇಳುವಂತಿದ್ದರು. ಮೇಜಿನ ಬಳಿ ಕೂತಾಗ ಆರೂವರೆ ಆರೂಮುಕ್ಕಾಲು ಅಡಿ ಎತ್ತರದ, ಅಜಾನುಬಾಹುಗಳಾದ, ಅಗ್ನಿಗೆ ಅಭಿಷೇಕ ಮಾಡಿದಂತಿದ್ದ ಆ ಮಾಣಿಗಳನ್ನು ನೋಡಿದರೆ

ಸ್ವಲ್ಪ ಹೆದರಿಕೆಯೇ ಆಯಿತು. ಮಾತಾಡದೆ ಅವನು ತಂದಿಟ್ಟ ಕಾಫಿ ಕಷಾಯವನ್ನೂ, ನಾಲ್ಕು ಬಿಸ್ಕತ್ತುಗಳನ್ನೂ ರುಚಿ ನೋಡಿ, ಹಾಗೆಯೇ ಇಟ್ಟೆ. ಆ ಧಾಂಡಿಗ ಮಾಣಿ ನನ್ನನ್ನೇ ನೋಡಿದ. ಹೆದರಿದ ನಾಯಿಯಂತೆ ಆ ಬಿಸ್ಕತ್ ತಿಂದು ಕಾಫಿ ಕುಡಿದೆ. ಕೇವಲ ಈ ಕಾರಣಕ್ಕಾಗಿ ಆ ಧಾಂಡಿಗನ ಕೈಲಿ ತದುಕಿಸಿಕೊಳ್ಳಬಾರದು ಎಂದು ವಿವೇಕ ನುಡಿಯಿತು.

# ಬೊಂಬಾಯಿ

ಸ್ವಲ್ಪ ಹೊತ್ತಿನಲ್ಲೇ ವಿಮಾನ ಹೊರಟಿತು. "5 ಗಂಟೆಗಳ ಪ್ರಯಾಣ, 3000 ಮೈಲುಗಳಷ್ಟು ದೂರ" ಎಂದು ಗಗನಸಖಿ ಹೇಳಿದಾಗ, "ಅರೆ ! ಬೆಂಗಳೂರಿಂದ ಮೈಸೂರಿಗೆ ಹೋಗಲು ರಾತ್ರಿಯ ಹೊತ್ತು 7 ಗಂಟೆ ಪ್ರಯಾಣ. ಕೇವಲ 87 ಮೈಲಿ. ಈ ವಿಮಾನದಲ್ಲಿ 3000 ಮೈಲಿ ! – 5 ತಾಸುಗಳಲ್ಲಿ ! ಪವಾಡ ಇದು ಎಂದು ಅಚ್ಚರಿಯಾಯಿತು. ಮಾನವನು ಬಲು ಬಲು ಬೇಗ ಪ್ರಗತಿ ಸಾಧಿಸುತ್ತಿದ್ದಾನೆ. ಬೇಗ ಅಂತ್ಯದ ಗುರಿ ಮುಟ್ಟಲು ಈ ಆತುರವೇನೋ ಎಂದು ಅನಿಸದೆ ಇರಲಿಲ್ಲ.

ಕೈರೋದಲ್ಲಿ ವಿಮಾನ ಹತ್ತಿದಾಗ, ಗುಜರಾತಿ ಸಂಸಾರವೊಂದು ವಿಮಾನವನ್ನು ಹತ್ತಿತು. ಆಫ್ರಿಕಾದಿಂದ ಅವರು ತಾಯ್ನಾಡಿಗೆ ಹಿಂತಿರುಗುತ್ತಿದ್ದರು. ತಂದೆ ಕೊಂಕುಳಲ್ಲಿ ಒಂದು ಮಗು, ಮುಂದೆ ನಡೆಯುತ್ತಿದ್ದ ಒಂದು ಮಗು, ಬಲಗೈಯ್ಯಲ್ಲಿ ತೊಟ್ಟಿಲಿನ ಮುಂಭಾಗದ ಹಿಡಿಯನ್ನು ಹಿಡಿದು ಬಂದ. ತೊಟ್ಟಿಲಿನ ಹಿಂಭಾಗದ ಹಿಡಿ ಹಿಡಿದು, ಕಂಕುಳಲ್ಲಿ ಒಂದು ಮಗುವನ್ನು ಎತ್ತಿಕೊಂಡು ಅವನ ಹೆಂಡತಿ ಬರುತ್ತಿದ್ದಳು. ತೊಟ್ಟಿಲಲ್ಲಿ ಒಂದು ಮಗು ಮಲಗಿ ಕಿರುಲುತ್ತಿತ್ತು. ಆಕೆಯ ಮುಖದಲ್ಲಿ ಇನ್ನೂ ಎಳಕು ಕಳೆ 22–25 ಇರಬಹುದು. ಆತ 28–30 ಇದ್ದಿರಬಹುದು. ಛಾತಿ ದಂಪತಿಗಳು. ತಾಯ್ನಾಡಿಂದ ಆಫ್ರಿಕಾಕ್ಕೆ ಹೋಗಿ ಅಲ್ಲಿ ಜೀವನವನ್ನು ಮಾಡಿ, ಸಾಕಷ್ಟು ಹಣ ಗಳಿಸಿ, ಅವನು, ಅವಳು, ಅದು ಇದೂ, ಎಲ್ಲವೂ ವಿಮಾನದಲ್ಲಿ ಹಿಂತಿರುಗುವಷ್ಟು ಶ್ರೀಮಂತರಾಗುತ್ತಿದ್ದರು. ಸಾಹಸಿಗಳು.

ವಿಮಾನದಲ್ಲಿ 2 ಶೌಚ ಗೃಹಗಳಿದ್ದುವು. ಅವಕಾಶಕ್ಕೆ ಕಾಯುತ್ತಲೇ ಇದ್ದೆ. ಹೆಣ್ಣು ಮಕ್ಕಳು ಒಳಕ್ಕೆ ಹೋದವರು, ಬೇರೆ ಸೀರೆ ಉಟ್ಟು ಬರುತ್ತಿದ್ದರು. ಅಂದರೆ ಸ್ನಾನ ಮಾಡಿದ್ದಿರಲೇ ಬೇಕು. ಈ 20–22 ಹೆಂಗಸರ ಮೆರವಣಿಗೆ ಮುಗಿದು ನನಗೆಲ್ಲಿ ಅವಕಾಶ ಸಿಗಬೇಕು ?

ಬೊಂಬಾಯಿನಲ್ಲಿ ಇಳಿಯುವಾಗ ಮಧ್ಯಾಹ್ನ 4 ಗಂಟೆಯ ಸಮಯ ಕೈರೋಗೂ ಇಲ್ಲಿಗೂ ಬರುವಾಗ ಘಂಟೆ ಘಂಟೆಗಳನ್ನು ನುಂಗಿಬಿಡುತ್ತೇವಲ್ಲ!

ಸುಂಕದ ದೊಡ್ಡಿಯಲ್ಲಿ ನಮ್ಮನ್ನೆಲ್ಲರನ್ನೂ ಕೂಡಿದರು. ಕಟಕಟೆ ಒಳಗಿನ ಅಂಗಳದಲ್ಲಿ ನಮ್ಮ ಸಾಮಾನುಗಳು ಬಿದ್ದಿದ್ದುವು.

ಕಟಕಟೆಯಲ್ಲಿ 10-12 ಜನ ನೌಕರರಿದ್ದರು. ನಾವೋ ಈ ಕಡೆ 120. ನನ್ನ ತನಿಖೆಯ ಸರದಿ ಬಂದಾಗ ಒಂದು ತಾಸು ಆಗಿತ್ತು. ಆಗ ಅಲ್ಲಿ ಬಂದ ನೌಕರ ನನ್ನ ನೋಡಿ, "Any Thing to declare ?" ಎಂದು ಕೇಳಿದ.

ಹೇಳಿಕೆ ಕೊಡುವುದು ಏನಾದರೂ ಉಂಟೆ ? ಎಂದು.

''ಅಯ್ಯಾ ಚಿರಂಜೀವಿ !'' ಎಂದು ಶುರು ಮಾಡಿದೆ. ನನಗಿಂತ ಸುಮಾರು ಚಿಕ್ಕ ವಯಸ್ಸಿನವನು, ಅವನು. ಅದಕ್ಕೇ ಹಾಗೆ ಶುರು ಮಾಡಿದೆ.

ಬೆಳಗಿನ ಝಾಮ 2ರ ಹೊತ್ತಿನಲ್ಲಿ ರೋಂನಲ್ಲಿ ವಿಮಾನ ಏರಿದೆ. ಕೈರೊ ನಿಲ್ದಾಣದಲ್ಲಿ ಹೆಣ್ಣು ಮಕ್ಕಳು ಶೌಚ ಗೃಹಗಳಿಗೆ ಮುತ್ತಿಗೆ ಹಾಕಿದ್ದರು. ಇಲ್ಲಿಳಿದು ಒಂದು ತಾಸು ಆಯಿತು. ಬೇಗ ಇಲ್ಲಿ ಶೌಚ ಗೃಹವನ್ನು ತೋರಿಸದೆ ಇದ್ದರೆ ಮುಂದಾಗುವ ಅನಾಹುತಕ್ಕೆ ನಾನು ಜವಾಬ್ದಾರನಲ್ಲ. ಮುದುಕ ನಾನು'' ಎಂದೆ.

ನನ್ನ ಮುಖ ನೋಡಿದ. ಆಗಬಹುದಾದ ಅನಾಹುತದ ಅರಿವು ಅವನಿಗುಂಟಾಗಿರಬೇಕು. ಜಟ್ಟಂತ ನನ್ನ ಪೆಟ್ಟಿಗೆಗಳ ಮೇಲೆ ಸೀಮೆಸುಣ್ಣದ ನಾಮ ಹಾಕಿ, ಸೇವಕನನ್ನು ಕರೆದು, ''ಇವನ್ನು ದೊಡ್ಡಿಯಾಚೆ ತೆಗೆದುಕೊಂಡು ಹೋಗು. ಹಾಗೆಯೇ ಈ ಯಜಮಾನರನ್ನು ಶೌಚ ಗೃಹಕ್ಕೆ ತತ್‌ಕ್ಷಣ ಕರೆದುಕೊಂಡು ಹೋಗು'' ಎಂದ.

ಸ್ವರ್ಗ ಎಲ್ಲಿದೆ ? ಹೇಗಿರುತ್ತೆ ? ಎಂದೆಲ್ಲಾ ತುಂಬಾ ದಿನಗಳು ಯೋಚನೆ ಮಾಡಿದ್ದೆ. ಹಲವಾರು ಹಿರಿಯಾತ್ಮರ ಗ್ರಂಥಗಳನ್ನು ಓದಿದ್ದೆ. ಆದರೆ ಅದರ ರೂಪರೇಷೆಗಳು ಗೋಚರವಾಗಿತ್ತಿಲ್ಲ. ಆದರೆ ಆ ಸಂಜೆ 5ರ ಹೊತ್ತಿಗೆ ಆ ಶೌಚ ಗೃಹದಲ್ಲಿ ಸ್ವರ್ಗವನ್ನು ಕಂಡೆ. ಸ್ವರ್ಗವಾಸಿಗಳ ಸೌಭಾಗ್ಯದ ಅರಿವೂ ಉಂಟಾಯಿತು. ಸ್ವರ್ಗದಲ್ಲಿ ಹಸಿವೇ ಆಗುವುದಿಲ್ಲವಂತೆ. ಅಂದಮೇಲೆ ಅಲ್ಲಿನ ವಾಸಿಗಳು ತಿನ್ನುವುದೇ ಇಲ್ಲ, ಅಂದಮೇಲೆ ಶೌಚ ಗೃಹಗಳೇ ಸ್ವರ್ಗದಲ್ಲಿ ಇಲ್ಲ. ಅದಕ್ಕೇ ಅದನ್ನು ಸ್ವರ್ಗ ಎಂದು ಕರೆಯುತ್ತಾರೆ. ಆದರೆ ಸ್ವರ್ಗ ವಾಸಿಗಳಿಗೆ ಸುಖದ, ಸೌಭಾಗ್ಯದ, ಪೂರ್ಣ ಅರಿವು ತಿಳಿದಿರಲಿಕ್ಕೇ ಇಲ್ಲ; ಎಂದನಿಸಿತು.

ಹೊರಕ್ಕೆ ಬಂದೆ. ಹೊರಗಡೆ ಟ್ಯಾಕ್ಸಿ ನಿಲ್ದಾಣದ ಅಂಚಿನಲ್ಲಿ ನನ್ನ ಸೋದರಿ ಡಾಕ್ಟರು ತನ್ನ ಪೆಟ್ಟಿಗೆಯನ್ನು ಬಿಚ್ಚಿ ಕಾದಿದ್ದಳು.

"ಎಷ್ಟು ಹೊತ್ತು ಕಾದಿರೋದು ನಿಮಗೆ, ನಿಮ್ಮ ಸೀರೆಗಳನ್ನು ಬೇಗ ತೆಗೆದುಕೊಳ್ಳಿ. ತುಂಬಾ ಬಳಲಿದ್ದೇನೆ. ಸೊಂಟ ಹಿಡಿದುಕೊಂಡಿದೆ. ಬೇಗ ಹೋಗಿ ಎಲ್ಲಾರೂ ಮಲಗಬೇಕು" ಎಂದು ರೇಗುತ್ತಲೇ ಹೇಳಿದಳು.

ವಿಷಯ ಇಷ್ಟೇ ! ಪ್ಯಾರಿಸ್ಸಿನಲ್ಲಿ ನಾಲ್ಕು ನವಿರಾದ ರೇಷ್ಮೆ ಸೀರೆಗಳನ್ನು ಹೆಣ್ಣು ಮಕ್ಕಳಿಗೆಂದು ಕೊಂಡುಕೊಂಡಿದ್ದೆ. ಅವು ನನ್ನ ಸೂಟ್‌ಕೇಸ್‌ನಲ್ಲಿದ್ದರೆ ಸುಂಕ ಜಡಿದುಬಿಡುತ್ತಾರೆ ಎಂಬ ಭಯ. ಆದುದರಿಂದ ಅವನ್ನು ಆಕೆಯ ಕೈಲಿಟ್ಟು ನಿಂದು ಎಂದು ಹೇಳಿಕೋ, ಕೇಳಿದರೆ. ಸುಂಕದ ಕಟ್ಟೆ ಆಚೆ ವಾಪಸ್ಸು ಇಸುಗೊಳ್ಳುತ್ತೇನೆ ಎಂದು ಹೇಳಿದ್ದೆ. ಆಕೆಯೂ ಒಪ್ಪಿಕೊಂಡು, ಹಾಗೆಯೇ ಮಾಡಿದ್ದಳು.

ನನ್ನ ಅವಸರಕ್ಕೆ ನಾನು ಹೊತ್ತು ಮಾಡಬೇಕಾಯಿತು. ಅವಳ ಆತುರ ಇನ್ನೆಷ್ಟು ತೀವ್ರವೋ ? ಗೌರಿಯ ದುಃಖವಾಗಲಿ ಬೇನೆಯಾಗಲಿ ಗಂಡಸಿಗೆ ಹೇಗೆ ತಿಳಿಯುತ್ತೆ ? ಬೇಗ ನಾಲ್ಕೂ ಸೀರೆಗಳನ್ನು ತೆಗೆದುಕೊಂಡು ನನ್ನ ಕೈ ಚೀಲದಲ್ಲಿ ತುರುಕಿದೆ. ಭಯ ! ಯಾರು ನೋಡಿಬಿಡುತ್ತಾರೋ ? ಎಲ್ಲಿ ಪೋಲೀಸಿನವರು ಹಿಡಿದುಕೊಂಡುಬಿಡುತ್ತಾರೋ ? ಎಂದು.

ಯಾರೋ ನನ್ನ ಬೆನ್ನು ತಟ್ಟಿದರು. ಬೆವತೆ. "ತೊಗೋಪ್ಪ ಹತ್ತು ರೂಪಾಯಿ ನನ್ನ ಬಿಟ್ಟುಬಿಡಪ್ಪಾ" ಎಂದು ಹೇಳುತ್ತಾ ಹಿಂತಿರುಗಿದೆ.

ನನ್ನ ಅಳಿಯ ನಿಂತಿದ್ದ. "ಕಾರ್ ತಂದಿದ್ದೇನೆ. ಬರ್ತೀರಾ ಯಾಕೆ ಹಾಗಂದಿರಿ ?" ಎಂದ. ಅವನ ಹಿಂದೆಯೇ ನನ್ನ ಮಗಳೂ ಇದ್ದಳು. ನನ್ನ ಗಾಭರಿಯನ್ನು ನೋಡಿ ನಗುತ್ತಾ ಇದ್ದಳು.

ಬೊಂಬಾಯಿನ ಅವರ ಮನೆಗೆ ಹೋದಮೇಲೆ ನನ್ನ ಗ್ಾಭರಿಯ ಕಾರಣವನ್ನು ವಿವರಿಸಿದೆ.

ಮನೆಗೆ ಹೋದಾಗ ಆ ರಾತ್ರಿ ಎರಡು ಮಸಾಲೆ ದೋಸೆ, ಎರಡು ಉದ್ದಿನ ವಡೆ, ಈರುಳ್ಳಿ ಆಲೂಗಡ್ಡೆ ಹುಳಿ, ಅನ್ನ ಹುರುಳಿ ಹಪ್ಪಳ, ಮೊಸರು ಇವೇ ಊಟಕ್ಕೆ ಬಡಿಸಲ್ಪಟ್ಟವು.

ಎರಡು ದಿನ ಬೊಂಬಾಯಿನಲ್ಲಿದ್ದೆ. ಬ್ರಾಹ್ಮಣಾರ್ಥದ ಬ್ರಾಹ್ಮಣರಂತೆ ತಿಂದೆ. ಊರೆಲ್ಲಾ ಸುತ್ತಿ ಸುಮಾರು ಉಡುಗೊರೆ ವಸ್ತುಗಳನ್ನು ಕೊಂಡೆ. ನಮ್ಮೂರಿಗೆ ಬಂದಮೇಲೆ ರೂಪಾಯಿಗೆ ತೊಂದರೆ ಇಲ್ಲವಲ್ಲ ! ಇಂಗ್ಲಂಡಿನಲ್ಲಿ ಸೆಲ್ಫ್ ರಿಡ್ಜ್ಸ್ ಹೋಗಿದ್ದಾಗ ಅಲ್ಲಿದ್ದ ಅವಲಕ್ಷಣ ಮಾರಾಟ ಹುಡುಗಿಗೆ ಒಲವು ಮಾತುಗಳನ್ನಾಡಿ 30-40 ಆ ಅಂಗಡಿಯ ಜಾಹೀರಾತೀನ ಖಾಲಿ ಲಕ್ಕೋಟೆಗಳನ್ನು ತೆಗೆದುಕೊಂಡು ಬಂದಿದ್ದೆ.

ಬೊಂಬಾಯಿನಲ್ಲಿ ಕೊಂಡಿದ್ದ ಸಾಮಾನುಗಳನ್ನು ಇಂಗ್ಲೆಂಡಿನ ಆ ಲಕ್ಕೋಟೆಗಳಲ್ಲಿ ಒಂದೊಂದಾಗಿ, ಪಾರಣವಾಗಿ ಇಟ್ಟೆ. ಒಂದೊಂದು ಲಕ್ಕೋಟೆಯ ಮೇಲೂ ಬೆಂಗಳೂರಿನ ನೆಂಟರು, ಇಷ್ಟರು, ಸ್ನೇಹಿತರು ಇತ್ಯಾದಿಗಳ ಹೆಸರನ್ನೂ ಬಾಲ್ ಪಾಂಯ್ಟ್ ಪೆನ್ನಿನಲ್ಲಿ ಬರೆದೆ. ಎಲ್ಲವನ್ನೂ ಅಣಿ ಮಾಡಿದೆ.

ಬೆಂಗಳೂರಿಗೆ ಬಂದಮೇಲೆ ಪ್ರವಾಸದ ನೆನಪಿಗಾಗಿ ಆ ಉಡುಗೊರೆಗಳನ್ನು ಅವರಿಗೆಲ್ಲಾ ಕೊಟ್ಟಾಗ ಅವರೆಲ್ಲ ಎಷ್ಟು ಸಂತೋಷಪಟ್ಟುಕೊಂಡರು ಅಂತ.

ಆಗ ನನಗೇ ನಾಚಿಕೆಯಾಯಿತು. ಇಷ್ಟು ಮೋಸ ಮಾಡಿದೆನಲ್ಲ ಅಂತ. ತಲೆ ತಗ್ಗಿಸಿದೆ.

ಆಗ ಕೊರವಂಜಿ ಹೇಳಿದಳು "ಅಪ್ಪಾ ! ಇದಕ್ಕೆ ಯಾಕೆ ಕೊರಗುತ್ತೀರಿ ? ಇದು ಮೋಸವಾದರೆ, ಇದು ಕೃತ್ರಿಮವಾದರೆ, ಈ ಬಾಳೇ ಮೋಸ. ಇಲ್ಲಿನ ಜನ್ಮವೇ ಕೃತ್ರಿಮ. ಈ ಪ್ರಪಂಚದ ಬಾಳಿನ ಒಂದು ಅಂಶ ಅಲ್ಲವೇ ಈ ಪ್ರವಾಸ, ಈ ಮೋಸ. ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲಾ ಅಲ್ಲವೇ ?" ಎಂದಳು.

"ಹೌದು, ಮಗಳೇ ! ನೀನಂದಿದ್ದು ನಿಜ. ಈ ಬಾಳು ಎನ್ನುವ ಮಾಯಾ ಬಜಾರಿನಲ್ಲಿ, ಈ ಮೋಸ ಸಹಜವಾದದ್ದು. ಅರಿಯದೆ ನಾನು ಮೋಸ ಮಾಡಿದೆ ಎಂದು ಕೊರಗು ಹತ್ತಿತ್ತು. ಈಗ ಹೋಯಿತು. ಥ್ಯಾಂಕ್ ಯು" ಎಂದೆ.

"ಪಸ್ಸಿಬಾ"- "ಡಾಂಕೆಷಾನ್"- "ಮೆರ್ಸಿ ಬಿಎನ್"- "ಗ್ರಾಸಿಯೋ"- "ಧನ್ಯವಾದ್" ಎಂದೂ ಅನ್ನಬೇಕಾಗಿತ್ತು ಎಂದಳು, ಕೊರವಂಜಿ.

ಭಾಷಾ ಗೊಂದಲದ ಲಂಟಾಣಾ ಮುಳ್ಳನ್ನು ನನ್ನ ತಲೆಯ ಸುತ್ತ ಕೊರವಂಜಿ ಮುಡಿಸಿದಳು.

ಒಲವಿನ ಈ ಮಗಳು ಹೀಗ್ಯಾಕೆ ಮಾಡಿದಳು ಎಂದು ಒಂದು ಕ್ಷಣ ಅನ್ನಿಸಿದರೂ, ಮರುಕ್ಷಣವೇ ನಮ್ಮ ದೇಶದಲ್ಲಿ ಇದೇ ಮುಳ್ಳಿನ ಕಿರೀಟ ಭಾಷಾಭಿಮಾನಿಗಳಿಂದ, ಭಾರತ ಮಾತೆಗೆ ತೊಡಿಸಲ್ಪಡುತ್ತದೆ ಎಂದು ತೋರಿತು.

ಈ ಕಾಡ ಹುಡುಗಿ ಎಂದೋ ಹೇಳಿದ್ದು ಮುಂದೆ ನಡೆದುದನ್ನು ಕಂಡ ನನಗೆ ಸ್ವಲ್ಪ ದುಃಖವೂ ಆಯಿತು.

"ಮಗಳೇ, ನೀನಂದಿದ್ದು ನಗೆಯಾಟಕ್ಕಾದರೂ, ನಮ್ಮ ಭವಿಷ್ಯವನ್ನೂ ನುಡಿದೆಯೇನೋ, ಎಂದನಿಸುತ್ತದೆ. ಅಂದಮೇಲೆ ಇನ್ನು ಮೇಲೆ ಅಪ್ರಿಯ ವಾದ ಸತ್ಯವನ್ನು ನಾವು ನುಡಿಯಬಾರದೇನೋ ? ಬಾಯಿ ಮುಚ್ಚಿಕೊಂಡು ಭಗವಂತನ ಈ ಲೀಲೆಯನ್ನು ನೋಡುವುದೇ ಚೆನ್ನೇನೋ ?" ಎಂದೆ.

ಕೊರವಂಜಿ ಮಾರುತ್ತರ ನೀಡಲಿಲ್ಲ, ನಕ್ಕಳು.



ಕೊರವಂಜಿಯ ಕೊಂಕು ನೋಟ ಈ ಬಾರಿ ಪಶ್ಚಿಮದ ಸಂಸ್ಕೃತಿಯ ಮೇಲೆ ಬಿದ್ದಿದೆ. ರಾ.ಶಿ.ಯವರು ಯುರೋಪ್ ದೇಶಗಳ ಯಾತ್ರೆ ಕೈಗೊಂಡದ್ದು ವೈದ್ಯರ ತಂಡವೊಂದರ ಜೊತೆ. ಅದೊಂದು ಅಧ್ಯಯನ ಪ್ರವಾಸ. ಆದರೆ ಅವರಲ್ಲಿದ್ದ ಕೊರವಂಜಿ ಸುಮ್ಮನಿರ ಬೇಕಲ್ಲ, ಅವಳೂ ಸಹಾ ಆ ದೇಶಗಳ ನೋಟಗಳನ್ನು ನೋಡಿ, ತಿನಿಸುಗಳನ್ನು ಸವಿದು, ಅಲ್ಲಿನ ಜನಸಾಮಾನ್ಯರನ್ನು ಭೇಟಿಮಾಡಿ ಇಲ್ಲಿ ತನ್ನ ವರದಿಯನ್ನು ಓದುಗರಿಗೆ ಒಪ್ಪಿಸಿಬಿಟ್ಟಿದ್ದಾಳೆ. ರಷ್ಯದ ನಟಾಷಾಳಿಂದ ಮೊದಲುಗೊಂಡು ಪ್ಯಾರಿಸ್ಸಿನ ಲಿಡೋ ಬೆಡಗಿಯರ ತನಕ, ಸ್ಟಾಕ್ ಹೋಮ್‌ನ ವಿದ್ಯಮಾನದಿಂದ ಹಿಡಿದು ಕೊಪನ್‌ಹೇಗನ್ನಿನ ಬೆರಗುಗಳ ತನಕ, ಕೊರವಂಜಿಯ ಬ್ರಾಂಡೆಡ್ ಹಾಸ್ಯ ಇಲ್ಲಿ ಲಾಸ್ಯವಾಡಿದೆ.

ಗರಿ, ಗರಿ, ಬಿಸಿ, ಬಿಸಿ ವರದಿ, ಒಪ್ಪಿಸಿಕೊಳ್ಳಿ.

–ಅಪರಂಜಿ ಶಿವು


ISBN 81-89818-36-8

Rs. 85/-




ವಸಂತ ಪ್ರಕಾಶನ

ನಂ.360, 10 'ಬಿ' ಮೈನ್, 3ನೇ ಬ್ಲಾಕ್ ಜಯನಗರ, ಬೆಂಗಳೂರು-560 011.
ದೂರವಾಣಿ: 22443996, 22287876